# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೯ ಸಂಚಿಕೆ : ೨ ಜುಲೈ-ಡಿಸೆಂಬರ್ ೨೦೧೫




ಸಂಪಾದಕರು

ಪ್ರೊ॥ ಬಿ. ಅಬ್ದುಲ್ ಬಷೀರ್

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ (ರಿ.)
೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯, ದೂರವಾಣಿ : ೨೬೬೧ ೩೮೭೭

P7129




ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೯ ಸಂಚಿಕೆ : ೦೨ ಜುಲೈ-ಡಿಸೆಂಬರ್ ೨೦೧೫

ಸಂಪಾದಕರು

**ಪ್ರೊ॥ ಜಿ. ಅಬ್ದುಲ್ ಬಷೀರ್**




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ-ಮೇಲ್ : bmsritrust@gmail.com

**KARNATAKA LOCHANA** - (Half yearly Research Journal)
Editor : Prof. **G. Abdul Basheer**. Published by **B.M.Sri. Smaraka Prathistana, M.V.Si. P.G. Research Center, B.M.Sri. Kalabhavan(R)**, 3rd Main Road, Narasimharaja Colony, Bangalore - 560 019. Ph.No. 080-26615877, 26676773 Pages: viii + 136

Year : July-December 2015 (Vol. 29 , No. 2),

Yearly Subscription : **Rs. 100/-** (for Libraries)

For Individual : **Rs. 50/-**

ವಾರ್ಷಿಕ ಚಂದಾ : ರೂ. ೧೦೦/- (ಗ್ರಂಥಾಲಯಗಳಿಗೆ)

ವ್ಯಕ್ತಿಗಳಿಗೆ : ರೂ. ೫೦/-

ಕರ್ನಾಟಕ ಲೋಚನದ ಆಜೀವ ಚಂದಾ : ರೂ. ೫೦೦/-

ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೧೦೦೦/-

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಪದಾಧಿಕಾರಿಗಳು**

**ಪ್ರೊ॥ ಎಂ. ಎಚ್. ಕೃಷ್ಣಯ್ಯ**
ಗೌ॥ ಅಧ್ಯಕ್ಷರು

**ಡಾ॥ ಪಿ. ವಿ. ನಾರಾಯಣ**
ಅಧ್ಯಕ್ಷರು

**ಪ್ರೊ॥ ಜಿ. ಅಬ್ದುಲ್ ಬಷೀರ್**
**ಶ್ರೀ ಬಿ. ಆರ್. ರವೀಂದ್ರನಾಥ್**
ಗೌ॥ ಕಾರ್ಯದರ್ಶಿಗಳು

**ಶ್ರೀ ಎಂ.ಎಸ್. ರಾಮಪ್ರಸಾದ್**
ಕೋಶಾಧಿಕಾರಿಗಳು

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು–೧೮
ದೂರವಾಣಿ : ೨೬೬೧ ೩೧೨೨, ೨೬೬೧ ೮೭೫೨

# ಮುಂಮಾತು

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ. ಕನ್ನಡ ನಾಡಿನ ಅನೇಕ ವಿಶ್ವವಿದ್ಯಾನಿಲಯಗಳಂತಹ ಉನ್ನತ ಅಧ್ಯಯನ ಕೇಂದ್ರಗಳು ನಡೆಸಿಕೊಂಡು ಬರುತ್ತಿದ್ದ ಸಂಶೋಧನೆಗೆ ಮೀಸಲಾದ ನಿಯತಕಾಲಿಕೆಗಳಲ್ಲಿ ಅನೇಕವು ಈಗಾಗಲೇ ನಿಂತುಹೋಗಿವೆ. ಹಾಗಾಗದೆ ಇದನ್ನು ಆದಷ್ಟೂ ನಿಗದಿತ ವೇಳೆಗೆ ಹೊರತರುವ ಉದ್ದೇಶ ಪ್ರತಿಷ್ಠಾನದ್ದು. ಆದರೆ ದಿನೇ ದಿನೇ ಗುಣಮಟ್ಟದ ಲೇಖನಗಳ ಕೊರತೆ ಎದ್ದು ಕಾಣುತ್ತಿದೆ; ಹೀಗಾಗಿ ಮೈದುಂಬಿಕೊಂಡು ಪತ್ರಿಕೆ ಬರಲು ಅಡ್ಡಿಯೇ ಎನ್ನಬಹುದು. ಪತ್ರಿಕೆಯ ಮುದ್ರಣವ್ಯವಸ್ಥೆಗೆ ವಿಳಂಬವೇನಾಗದು, ಆದರೆ ಕೆಲವು ವೇಳೆ ಸಾಕಷ್ಟು ಲೇಖನಗಳು ಕೈಸೇರದೆ ಪತ್ರಿಕೆ ತಡವಾಗಿ ಹೊರಬರುವುದು ಅನಿವಾರ್ಯವಾಗಿಬಿಡುತ್ತದೆ. ಅನೇಕ ಸಂದರ್ಭಗಳಲ್ಲಿ ಲೇಖಕರನ್ನು ಕೇಳಿಕೊಂಡು ಲೇಖನಗಳನ್ನು ಬರೆಯಿಸುವ ಶ್ರಮವನ್ನೂ ಪತ್ರಿಕೆಯ ಸಂಪಾದಕರು ವಹಿಸಿಕೊಳ್ಳಬೇಕಾಗುತ್ತದೆ. ಇದನ್ನು ಯಶಸ್ವಿಯಾಗಿ ಮಾಡಿಕೊಂಡು ಬರುತ್ತಿರುವ **'ಕರ್ನಾಟಕ ಲೋಚನ'**ದ ಸಂಪಾದಕರಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಹಿಸುವ ಶ್ರದ್ಧೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಷ್ಠಾನದ ಕಾರ್ಯದರ್ಶಿಗಳಲ್ಲೊಬ್ಬರಾದ ಅವರು ಆಯೋಜಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವಿದ್ವಾಂಸರ ದುಂಬಾಲುಬಿದ್ದು ಆದಷ್ಟೂ ಕಾಲಕ್ಕೆ ಸರಿಯಾಗಿ ಪತ್ರಿಕೆ ಹೊರಬರುವಂತೆ ಅವರು ನೋಡಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಅವರ ಬಗ್ಗೆ ಪ್ರತಿಷ್ಠಾನಕ್ಕೆ ವಿಶೇಷ ಮೆಚ್ಚಿಕೆ. ಆಸಕ್ತರು ಈ ಸಂಚಿಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂಬುದು ನನ್ನ ನಂಬಿಕೆ.

–ಡಾ॥ ಪಿ. ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಸಂಪಾದಕೀಯ

'ಕರ್ನಾಟಕ ಲೋಚನ'-ಸಂಪುಟ ೨೯, ಸಂಚಿಕೆ ೦೨, ಜುಲೈ-ಡಿಸೆಂಬರ್ ೨೦೧೫ ಸಹೃದಯರ ಕೈಗೆ ಸಕಾಲದಲ್ಲಿ ತಲುಪುತ್ತಿದೆ ಎಂದು ಭಾವಿಸಿದ್ದೇನೆ. ಲೇಖಕ ಮಿತ್ರರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಸಂಶೋಧನ ಲೇಖನಗಳನ್ನು ಕಳುಹಿಸಿಕೊಡುವ ಕೃಪೆ ಮಾಡಬೇಕೆಂದು ಕೋರುತ್ತೇನೆ. ಈ ಸಂಚಿಕೆಯಲ್ಲಿ ಪ್ರಕಟವಾಗುತ್ತಿರುವ ಲೇಖನಗಳು ವೈವಿಧ್ಯಮಯವೂ ವೈಶಿಷ್ಟ್ಯಪೂರ್ಣವೂ ಆಗಿವೆ; ಮೌಲಿಕ ವಿಚಾರಗಳನ್ನೊಳಗೊಂಡಿವೆ. ಭಾಷೆ, ಸಂಸ್ಕೃತಿ, ಸಂಶೋಧನೆ, ವಿಮರ್ಶೆ, ತೌಲನಿಕ ವಿಚಾರಗಳನ್ನೊಳಗೊಂಡ ಲೇಖನಗಳಲ್ಲಿ ನವೀನ ಆಲೋಚನೆಗಳಿವೆ; ಚರ್ಚೆಗೆ ಕಾರಣವಾಗಬಹುದಾದ ಅನೇಕ ವಿಚಾರಗಳಿವೆ. ಉದಾ : ಡಾ. ಎಚ್.ಎಸ್. ಅನಂತನಾರಾಯಣ ಅವರ 'ವಾಲ್ಮೀಕಿ ರಾಮಾಯಣದಲ್ಲಿ ಶಾಪದ ಪ್ರಸಂಗಗಳು', ಡಾ. ಪಿ.ವಿ. ನಾರಾಯಣ ಅವರ 'ಕನ್ನಡ ಸಾಹಿತ್ಯ ಪರಂಪರೆ ಮತ್ತು ಜನಪರತೆ', ಶಾಸನತಜ್ಞ ಸೀತಾರಾಮ ಜಾಗೀರ್‌ದಾರ್ ಅವರ 'ತಮಟಕಲ್ಲ ಶಾಸನ', ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಯವರ 'ಶಬ್ದಾರ್ಥ ನಿರ್ಣಯದ ಕೆಲವು ಸಾಧನೋಪಾಯಗಳು', ಪ್ರೊ. ಬಸವರಾಜ ಕೋಡಗುಂಟಿಯವರ 'ಶಬ್ದಮಣಿ ದರ್ಪಣಂ ಮತ್ತು ತೊಲ್ಕಾಪ್ಪಿಯಂಗಳಲ್ಲಿ ವಿಬಕ್ತಿ ವಿವೇಚನೆ ಒಂದು ತುಲನಾತ್ಮಕ ಅಧ್ಯಯನ' ಎಂಬಿವೇ ಮುಂತಾದ ಲೇಖನಗಳನ್ನು ಗಮನಿಸಬಹುದು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಿಚಾರಗೋಷ್ಠಿಗಳಲ್ಲಿ, ದತ್ತಿ ಕಾರ್ಯಕ್ರಮಗಳಲ್ಲಿ, ಉಪನ್ಯಾಸ ಲೇಖನ ಮಾಲೆಗಳಲ್ಲಿ ಸಾಹಿತಿಮಿತ್ರರು ಮಂಡಿಸಿದ ಪ್ರಬಂಧಗಳಲ್ಲಿ, ನೀಡಿದ ಉಪನ್ಯಾಸಗಳಲ್ಲಿ ಕೆಲವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಲೇಖಕಮಿತ್ರರಿಗೆ ಹಾಗೂ ಉಳಿದ ಲೇಖನಗಳನ್ನು ಕಳುಹಿಸಿದ ಲೇಖಕ ಮಿತ್ರರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

'ಕರ್ನಾಟಕ ಲೋಚನ'ದ ಪ್ರಕಟಣೆಗೆ ಸಹಕರಿಸುತ್ತಿರುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯನವರಿಗೂ ಅಧ್ಯಕ್ಷರಾದ ಡಾ॥ ಪಿ. ವಿ. ನಾರಾಯಣ ಅವರಿಗೂ ಮತ್ತೋರ್ವ ಗೌ॥ ಕಾರ್ಯದರ್ಶಿಗಳಾದ

ಶ್ರೀ ಬಿ. ಆರ್. ರವೀಂದ್ರನಾಥ್ ಅವರಿಗೂ ಗೌ॥ ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರಿಗೂ ಕಛೇರಿಯ ಅಧೀಕ್ಷಕರಾದ ಶ್ರೀ ಜಯದೇವ್ ಅವರಿಗೂ ಕಛೇರಿಯ ಇತರ ಸಿಬ್ಬಂದಿ ವರ್ಗದವರಿಗೂ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

–ಪ್ರೊ॥ ಜೆ. ಅಬ್ದುಲ್ ಬಷೀರ್
ಸಂಪಾದಕರು

## ಪರಿವಿಡಿ

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧. ವಾಲ್ಮೀಕಿ ರಾಮಾಯಣದಲ್ಲಿ ಶಾಪದ ಪ್ರಸಂಗಗಳು

-ಡಾ. ಎಚ್.ಎಸ್. ಅನಂತನಾರಾಯಣ*

ತಪ್ಪು ಮಾಡುವುದು ಮಾನವ ಸಹಜ ಪ್ರವೃತ್ತಿ. ಆ ತಪ್ಪುಗಳು ಕ್ಷಮಾರ್ಹವಲ್ಲದಿರಬಹುದು. ಒಟ್ಟು ಸಮಾಜಕ್ಕೆ ಸಂಬಂಧಿಸಿದ್ದರೆ ಅವು ಅಪರಾಧವೆನಿಸುತ್ತವೆ. ಒಬ್ಬನು ಮಾಡಿದ ತಪ್ಪಿನಿಂದ ಇನ್ನೊಬ್ಬನಿಗೆ ಅನ್ಯಾಯ, ಹಾಗೂ ನಷ್ಟ ಆಗಬಹುದು. ಇದರಿಂದಾಗಿ ಅದಕ್ಕೆ ಗುರಿಯಾದವನು ಹಾಗೂ ಇದನ್ನು ಗಮನಿಸಿದವರು ದುಃಖದಿಂದ ಕೋಪಗೊಂಡು ಯುಕ್ತಾಯುಕ್ತ ವಿವೇಚನೆಯನ್ನು ಕಳೆದುಕೊಳ್ಳುತ್ತಾರೆ. ಆ ಭಾವೋದ್ವೇಗದಲ್ಲಿ ತಪ್ಪಿತಸ್ಥನಿಗೆ ಪ್ರತಿಯಾಗಿ ಶಿಕ್ಷೆ ವಿಧಿಸುವಂತೆ ಕಿಡುನುಡಿಗಳನ್ನಾಡುತ್ತಾರೆ ಮತ್ತು ಕೇಡು ಬಯಸುತ್ತಾರೆ. ಹಾಗೆ ಕೇಡು ಬಯಸುತ್ತಾ ಆಡಿದ ಮಾತುಗಳೇ ಶಾಪವೆನಿಸಿಕೊಳ್ಳುತ್ತವೆ. ಸಮಾಜದ ಸಾಮಾನ್ಯ ವ್ಯಕ್ತಿಯಿಂದ ಅತಿ ಶ್ರೇಷ್ಠ ಋಷಿಮುನಿಗಳವರೆಗೂ ಕ್ರೋಧವನ್ನು ನಿಯಂತ್ರಿಸಲಾಗದೆ ಶಾಪ ಕೊಟ್ಟಿರುವುದು ದಾಖಲಾಗಿದೆ. ಶಪಿಸುವುದರಿಂದ ನಾವು ಗಳಿಸಿದ ಪುಣ್ಯ ಕ್ಷೀಣಿಸುತ್ತದೆ. ಶಾಪವನ್ನು ಪಡೆದವನ ಸ್ಥಾನಮಾನ ಮತ್ತು ಪ್ರಭಾವ ನಷ್ಟವಾಗುತ್ತದೆ. ಶಾಪವು ತಕ್ಷಣವೇ ಫಲಿಸಬಹುದು ಅಥವಾ ಕಾಲಾನಂತರ ಫಲಿಸಬಹುದು. ಶಾಪವನ್ನುಚ್ಚರಿಸಿದ ನಂತರ ವ್ಯಥಿಸುವುದು, ಶಪ್ತನಾದವನ ಪ್ರಾರ್ಥನೆಗೆ ಮನಸ್ಸು ಕರಗಿ ಉಶ್ಶಾಪ ಹಾಗೂ ಶಾಪದ ಅವಧಿಯನ್ನು ತಿಳಿಸಿರುವುದೂ ಉಂಟು. ಕೆಲವೊಮ್ಮೆ ತಮ್ಮನ್ನು ನಿಷ್ಕಾರಣವಾಗಿ ಶಪಿಸಿದರೆಂದು ಶಾಪವನ್ನು ಪಡೆದವರು ಪ್ರತಿಶಾಪವನ್ನು ಕೊಟ್ಟಿರುವ ಪ್ರಸಂಗಗಳೂ ಇವೆ. ಆದರೆ ಕೊಟ್ಟ ಶಾಪವನ್ನು ಮಾತ್ರ ವಾಪಸು ಪಡೆಯಲಾಗುವುದಿಲ್ಲ ಮತ್ತು ನಿರರ್ಥಕಗೊಳಿಸಲಾಗುವುದಿಲ್ಲ. ಆದಿಕಾವ್ಯವಾದ ರಾಮಾಯಣದಲ್ಲಿ ಕಾಣಬರುವ ಶಾಪಗಳನ್ನು, ಅದರಿಂದಾದ ಪರಿಣಾಮಗಳನ್ನು ತಿಳಿಸಿಕೊಡುವುದೇ ಈ ಲೇಖನದ ಉದ್ದೇಶ. ನಾರದರು ವಾಲ್ಮೀಕಿಗೆ ಹೇಳಿದ ಸಂಕ್ಷೇಪ ರಾಮಚರಿತೆಯಲ್ಲಿ ಅಶ್ವಮೇಧ ಶತೈರಿಷ್ಟ್ವಾ ಎಂದಿರುವುದರಿಂದ ಮತ್ತು ವಾಲ್ಮೀಕಿಯು ಹಾಕಿಕೊಂಡ ವಿಷಯಪಟ್ಟಿಯಲ್ಲಿ,

* ನಿವೃತ್ತ ಭಾಷಾ ಶಾಸ್ತ್ರ ಪ್ರಾಧ್ಯಾಪಕರು, ಉಸ್ಮಾನಿಯಾ ವಿಶ್ವವಿದ್ಯಾಲಯ, ನಂ. ೨೦೬, 'ಬ್ರಿಗೇಡ್ ಕ್ಲಾಸಿಕ್, ಆರ್ಮುಗಂ ಸರ್ಕಲ್, ಬಸವನಗುಡಿ, ಬೆಂಗಳೂರು-೫೬೦೦೦೪, ಮೊ. ೯೪೮೦೬೨೨೮೧೦

ಅನಾಗತಂಚ ಯತ್ ಕಿಂಚಿತ್... ತಚ್ಚಕಾರೋತ್ತರೇ ಕಾವ್ಯೇ ವಾಲ್ಮೀಕಿರ್ಭಗವಾನ್ನೃಷಿಃ ಎಂದಿರುವುದರಿಂದ ಉತ್ತರಕಾಂಡವನ್ನೂ ಸೇರಿಸಿಕೊಂಡಿದೆ ರಾಮಾಯಣಲ್ಲಿ. ಇಲ್ಲಿನ ಶಾಪಗಳಲ್ಲಿ ಕೆಲವು ಕಥೆಯ ಮುನ್ನಡೆಗೆ ಸಹಕಾರಿಗಳಾಗುತ್ತವೆ. ಪರೋಕ್ಷದಲ್ಲಿ ಕೊಟ್ಟ ಕೆಲವು ಶಾಪಗಳು ಒಬ್ಬರಿಂದ ಇನ್ನೊಬ್ಬರಿಗೆ ಸಾಂದರ್ಭಿಕವಾಗಿ ಹೇಳಲ್ಪಟ್ಟಿವೆ. ವಾಲ್ಮೀಕಿ ರಾಮಾಯಣ ಪ್ರಾರಂಭವಾಗುವುದೇ ಶಾಪದಿಂದ. ಕೊನೆಗೊಳ್ಳುವುದೂ ಶಾಪದ ಭಯದಿಂದ.

೧. ಒಮ್ಮೆ ದೇವರ್ಷಿ ನಾರದರು ವಾಲ್ಮೀಕಿಯ ಆಶ್ರಮಕ್ಕೆ ಬಂದು, ವಾಲ್ಮೀಕಿಯು ಹೆಸರಿಸಿದ ಸದ್ಗುಣಗಳಿಂದ ಕೂಡಿ ಉತ್ತಮ ನಾಯಕನೆಂದೆನಿಸಿದವರಿರುವರೇ ಎಂಬ ಅವನ ಪ್ರಶ್ನೆಗುತ್ತರವಾಗಿ ರಾಮಚರಿತೆಯನ್ನು ಸಂಕ್ಷೇಪವಾಗಿ ತಿಳಿಸಿ ಅದನ್ನು ಕಾವ್ಯರೂಪದಲ್ಲಿ ವಿಸ್ತರಿಸಿ ಬರೆದು ಜನತೆಗೆ ಒಳಿತನ್ನುಂಟು ಮಾಡೆಂದು ಹೇಳುತ್ತಾರೆ. ಅದನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ವಾಲ್ಮೀಕಿಯು ಸ್ನಾನಕ್ಕಾಗಿ ಹತ್ತಿರದಲ್ಲಿದ್ದ ತಮಸಾನದಿಗೆ ಶಿಷ್ಯನೊಂದಿಗೆ ಹೋಗಿ ಅಲ್ಲಿನ ಪ್ರಶಾಂತ ವಾತಾವರಣದಲ್ಲಿ ಆನಂದವನ್ನನುಭವಿಸುತ್ತಿದ್ದಾಗ ಪ್ರಣಯ ಪ್ರಸಂಗದಲ್ಲಿ ತೊಡಗಿದ್ದ ಕ್ರೌಂಚ ಮಿಥುನದಲ್ಲಿ ಗಂಡು ಪಕ್ಷಿಯನ್ನು ವ್ಯಾಧನೊಬ್ಬನು ತನ್ನ ಬಾಣದಿಂದ ಹೊಡೆದು ಸಾಯಿಸಿದ್ದನ್ನು ಕಾಣುತ್ತಾನೆ. ಆ ದುರವಸ್ಥೆಗೆ ಗುರಿಯಾದ ಹೆಣ್ಣು ಪಕ್ಷಿಯ ವಿಲಾಪವನ್ನು ಕೇಳಿ ವಾಲ್ಮೀಕಿಯ ಮನಸ್ಸು ಕರಗಿ, ಹಾಗೆ ಮಾಡಿದ ವ್ಯಾಧನ ಬಗ್ಗೆ ಅತೀವ ಕೋಪವನ್ನು ತಾಳಿ, ಅವನಿಗೆ ಕೇಡನ್ನು ಬಯಸುತ್ತಾ..ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ/ಯತ್ ಕ್ರೌಂಚಮಿಥುನಾದೇಕಮ್ ಅವಧೀಃ ಕಾಮಮೋಹಿತಮ್–(ಬಾಲ.೨.೧೫) ಎಂದು ಶಪಿಸುತ್ತಾನೆ. ಕೂಡಲೆ ತನ್ನ ವರ್ತನೆಗೆ ನಾಚಿ, ದುಃಖಪಡುತ್ತಾನೆ. ಆದರೆ, ತಾನಾಡಿದ ಮಾತುಗಳು ಛಂದೋಬದ್ಧವಾಗಿದ್ದು ಶ್ಲೋಕರೂಪದಲ್ಲಿದೆ ಎಂದು ಆನಂದಿಸುತ್ತಾನೆ (ಪಾದಬದ್ಧೋಕ್ಷರಸಮಃ ತಂತ್ರೀಲಯಸಮನ್ವಿತಃ....ಶ್ಲೋಕೋ ಭವತು ನಾನ್ಯಥಾ–ಶ್ಲೋ. ೧೮). ನಂತರ ಆಶ್ರಮಕ್ಕೆ ವಾಪಸಾಗಿ ಅದೇ ಪ್ರಸಂಗವನ್ನು ಚಿಂತಿಸುತ್ತಿದ್ದಾಗ, ಬ್ರಹ್ಮದೇವನು ಪ್ರತ್ಯಕ್ಷನಾಗಿ, ವಾಲ್ಮೀಕಿಯನ್ನು ಸಾಂತ್ವಯಿಸಿ ಅವನಾಡಿದ ಮಾತು ಸಮ ಅಕ್ಷರಗಳ ನಾಲ್ಕು ಪಾದಗಳಿಂದ ಕೂಡಿ ಗಾನಯೋಗ್ಯವಾಗಿದೆಯೆಂದು ತಿಳಿಸಿ, (ಶ್ಲೋಕ ಏವಾಸ್ತ್ವಯಂ ಬದ್ಧಃ –ಶ್ಲೋ. ೩೧) ಅದೇ ಛಂದಸ್ಸಿನ ಶ್ಲೋಕಗಳಲ್ಲಿ ರಾಮನ ಚರಿತ್ರೆಯನ್ನು ವಿಸ್ತರಿಸಿ ಬರೆಯಬೇಕೆಂದು ಹೇಳಿ, ಇದೆಲ್ಲವೂ ತನ್ನ ಸಂಕಲ್ಪದಿಂದಲೇ ಆಗಿದೆಯೆನ್ನುತ್ತಾನೆ. ರಾಮನ ಜೀವನದಲ್ಲಿ ಪ್ರಕಾಶವಾಗಿ ಕಾಣುವ ಹಾಗೂ ರಹಸ್ಯವಾಗಿರುವ ಎಲ್ಲ ಸಂಗತಿಗಳೂ ಅವನಿಗೆ ಗೋಚರಿಸುವಂತೆ ಆಶೀರ್ವದಿಸುತ್ತಾನೆ. ಅವನು ಬರೆದ ಯಾವುದೇ ಮಾತು ಸುಳ್ಳಾಗದೆಂದೂ, ನದಿಗಳೂ ಪರ್ವತಗಳೂ ಈ ಭೂಮಿಯ ಮೇಲೆ ಇರುವವರೆಗೂ ರಾಮಾಯಣದ ಕಥೆಯು ಪ್ರಚಾರದಲ್ಲಿರುವುದೆಂದು ವರವನ್ನು ಕೊಡುತ್ತಾನೆ (ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ/ ತಾವದ್ ರಾಮಾಯಣಕಥಾ ಲೋಕೇಷು ಪ್ರಚಲಿಷ್ಯತಿ–ಶ್ಲೋ. ೩೬). ಹೀಗೆ ಶಾಪದಿಂದ ಇತಿಹಾಸವೊಂದರ ರಚನೆ ಸಾಧ್ಯವಾಯಿತು. ವ್ಯಾಧನೊಬ್ಬನ ಪಾಪಕೃತ್ಯ, ಅದಕ್ಕೆ

ಕೋಪಗೊಂಡ ಮುನಿಯೊಬ್ಬನ ಶಾಪ, ಅದರಿಂದ ಲೋಕೋಪಕಾರಕವಾದ ಆದಿಕಾವ್ಯದ ರಚನೆ ಆಗುವಂತಾಯಿತು.

**೨. ತಾಟಕೆಗೆ ಬಂದ ಶಾಪ (ಸರ್ಗ ೨೫)**

ಬಾಲಕಾಂಡದಲ್ಲಿ ನಾವು ಕಾಣುವ ಮೊದಲ ಶಾಪದ ಪ್ರಸಂಗ ತಾಟಕಾವೃತ್ತಾಂತದಲ್ಲಿ.

ಹಿಂದೆ ಸುಕೇತು ಎಂಬ ಯಕ್ಷನು ಸಂತಾನಕ್ಕಾಗಿ ತಪಸ್ಸನ್ನಾಚರಿಸಲು ಪ್ರಸನ್ನನಾದ ಬ್ರಹ್ಮನು ಅವನಿಗೆ ಪುತ್ರನನ್ನು ಕರುಣಿಸಿದರೆ ಲೋಕಕ್ಕೆ ಹಿತವಲ್ಲವೆಂದೆನಿಸಿ, ಅದಕ್ಕೆ ಬದಲಾಗಿ ಸಹಸ್ರ ಆನೆಗಳ ಬಲದ ತಾಟಕಾ ಎಂಬ ಹೆಸರಿನ ಪುತ್ರಿಯನ್ನನುಗ್ರಹಿಸಿದನು. ಸುಕೇತು ಅವಳನ್ನು ಜಂಭಪುತ್ರನಾದ ಸುಂದನಿಗೆ ಕೊಟ್ಟು ವಿವಾಹ ಮಾಡಿದನು. ಸುಂದನಿಗೆ ಅವಳಲ್ಲಿ ಮಾರೀಚನು ಜನಿಸಿದನು. ಸುಂದನ ಮರಣಾನಂತರ ತಾಯಿ ಮತ್ತು ಮಗ ಇಬ್ಬರೂ ಘೋರ ಕೃತ್ಯಗಳನ್ನು ಮಾಡುತ್ತಾ ಒಮ್ಮೆ ಅಗಸ್ತ್ಯಮುನಿಯನ್ನು ಭಕ್ಷಿಸಲೆತ್ನಿಸಿದಾಗ ಅವರಿಂದ ಶಾಪವನ್ನು ಪಡೆದರು. ಮಾರೀಚನು ಶಾಪದಿಂದ ರಾಕ್ಷಸನಾದನು (ರಾಕ್ಷಸತ್ವಂ ಭಜಸ್ವೇತಿ ಮಾರೀಚಂ ವ್ಯಾಜಹಾರ ಸಃ –ಶ್ಲೋ. ೧೨). ಅಲ್ಲಿಯವರೆಗೆ ರೂಪ ಯೌವನಶಾಲಿಯಾಗಿದ್ದ ತಾಟಕೆಯು ವಿಕೃತ ಕರಾಳರೂಪದ ನರಭಕ್ಷಕಳಾದಳು (ಪುರುಷಾದೀ ಮಹಾಯಕ್ಷೀ ವಿಕೃತಾ ವಿಕೃತಾನನಾ/ಇದಂ ರೂಪಂ ವಿಹಾಯಾಶು ದಾರುಣಂ ರೂಪಮಸ್ತು ತೇ –ಶ್ಲೋ. ೧೩). ಇದರಿಂದ ಕ್ರುದ್ಧಳಾದ ತಾಟಕೆಯು ಅಗಸ್ತ್ಯರು ವಾಸಿಸುತ್ತಿದ್ದ ಪ್ರದೇಶವನ್ನು ನಾಶ ಮಾಡತೊಡಗಿದಳು. ತನ್ನ ಯಜ್ಞ ರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕರೆದುಕೊಂಡು ಹೋಗುತ್ತಿದ್ದ ವಿಶ್ವಾಮಿತ್ರನು ಈ ಕಥೆಯನ್ನು ಅವರಿಗೆ ತಿಳಿಸಿ ಅಧರ್ಮವೆನಿಸಿದ ಸ್ತ್ರೀವಧೆಗೆ ಅಂಜುತ್ತಿದ್ದ ಅವರನ್ನು ಕುರಿತು ಶತ್ರುವು ಸ್ತ್ರೀಯಾಗಿದ್ದರೂ ಗೋಬ್ರಾಹ್ಮಣರ ಹಿತಕ್ಕಾಗಿ ಹಾಗೂ ಚಾತುರ್ವರ್ಣ್ಯದ ಒಳಿತಿಗಾಗಿ ಅವಳನ್ನು ಕೊಲ್ಲುವುದರಿಂದ ರಾಜನಾದವನಿಗೆ ಯಾವ ದೋಷವೂ ತಟ್ಟುವುದಿಲ್ಲವೆಂದು ರಾಮನನ್ನು ಪ್ರೋತ್ಸಾಹಿಸಿ ಧರ್ಮಹೀನಳಾಗಿದ್ದ ಅವಳನ್ನು (ಧರ್ಮೋ ಹ್ಯಸ್ಯಾಂ ನ ವಿದ್ಯತೇ –ಶ್ಲೋ. ೧೯) ಕೊಲ್ಲಿಸಿದನು. ಪ್ರಜಾರಕ್ಷಣೆಗಾಗಿ ಮಾಡುವ ಕಾರ್ಯ ದೋಷಯುಕ್ತವಾದರೂ, ಕ್ರೂರಪಾತಕವೆನಿಸಿದರೂ ಅದು ರಾಜನಾದವನ ಕರ್ತವ್ಯ (ನೃಶಂಸಮನೃಶಂಸಂ ವಾ ಪ್ರಜಾರಕ್ಷಣಕಾರಣಾತ್/ಘಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸದಾ –ಶ್ಲೋ. ೧೮). ತಾಟಕೆಯ ವಧೆಯಿಂದ ಸಂತುಷ್ಟನಾದ ಇಂದ್ರನು ವಿಶ್ವಾಮಿತ್ರರಿಂದ ರಾಮನಿಗೆ ಸಮಸ್ತ ದಿವ್ಯಾಸ್ತ್ರಗಳೂ ದೊರಕುವಂತೆ ಮಾಡಿ, ಅದರಿಂದಾಗಿ ಮುಂದೆ ದೇವತೆಗಳಿಗೂ ಅಜೇಯನಾಗಿದ್ದ ರಾವಣನ ವಧೆಗೆ ಸಹಾಯವಾಗಲೆಂದು, ಭೂಭಾರವಿಳಿದು ಲೋಕೋಪಕಾರವಾಗಲೆಂದು ವಿಶ್ವಾಮಿತ್ರನನ್ನು ಪ್ರೇರೇಪಿಸಿದನು (ಸ್ನೇಹಂ ದರ್ಶಯ ರಾಘವೇ –ಶ್ಲೋ. ೨೯). ತಾಟಕೆಯ ವಧೆಯೇ ರಾಮಾವತಾರದ ಲಕ್ಷ್ಯಸಾಧನೆಗೆ ನಾಂದಿಯಾಯಿತು ಎನ್ನಬಹುದು. ಮಾರೀಚನನ್ನು ಅಂದು ಸಂಹರಿಸದೇ ಮಾನವಾಸ್ತ್ರವನ್ನು ಬಿಟ್ಟು ಅವನು ನೂರು ಯೋಜನ ದೂರದಲ್ಲಿದ್ದ ಸಮುದ್ರದ ನೀರಿನಲ್ಲಿ ಬೀಳುವಂತೆ ಮಾಡಿದನು. ಮುಂದೆ ಅವನು ಸುವರ್ಣಮೃಗದ

ರೂಪದಲ್ಲಿ ರಾವಣನಿಗೆ ಸಹಾಯಕನಾಗಿ ಬಂದು ಸೀತಾಪಹರಣ ಸಾಧ್ಯವಾಗಿ ರಾಮನು ರಾವಣನನ್ನು ವಧಿಸಲು ಕಾರಣ ದೊರೆತಂತಾಯಿತು.

**೩. ಪಾರ್ವತಿಯಿಂದ ದೇವತೆಗಳಿಗೆ ಶಾಪ (ಸರ್ಗ ೩೬).**

ಮಹೇಶ್ವರನು ಪಾರ್ವತಿಯನ್ನು ವಿವಾಹವಾಗಿ ಅವಳೊಡನೆ ರತಿಕ್ರೀಡೆಯಲ್ಲಿ ತೊಡಗಿ, ನೂರು ವರ್ಷಗಳು ಕಳೆದರೂ ಅವನಿಗೆ ಪುತ್ರನಾಗದುದನ್ನು ಕಂಡ ದೇವತೆಗಳು ಭೂತವೇನಾದರೂ ಜನಿಸಬಹುದೆಂಬ ಭಯದಿಂದ ಅವನನ್ನು ರತಿಕ್ರೀಡೆಯಿಂದ ವಿರಮಿಸಲು ಪ್ರಾರ್ಥಿಸಿದರು. ಅವನು ಹಾಗೇ ಮಾಡಲು ಇಚ್ಛಿಸಿದರೂ ಆ ವೇಳೆಗೆ ಸ್ಖಲಿಸಿದ ವೀರ್ಯವನ್ನು ದೇವತೆಗಳ ಪ್ರಾರ್ಥನೆಯಂತೆ ಪೃಥ್ವಿಯು ಧಾರಣೆ ಮಾಡಬೇಕಾಯಿತು. ತನಗೆ ಪುತ್ರನಾಗುವುದನ್ನು ತಡೆದ ದೇವತೆಗಳನ್ನು ಕೋಪದಿಂದ ಪಾರ್ವತಿಯು, ಅವರಾರಿಗೂ ಅವರ ಪತ್ನಿಯರಲ್ಲಿ ಮಕ್ಕಳಾಗದಿರಲೆಂದು (ಅಪತ್ಯಂ ಸ್ವೇಷು ದಾರೇಷು ನೋತ್ಪಾದಯಿತುಮರ್ಹಥ/ಅದ್ಯಪ್ರಭೃತಿ ಯುಷ್ಮಾಕಮಪ್ರಜಾಃ ಸಂತು ಪತ್ನಯಃ –ಶ್ಲೋ. ೨೨). ತನಗಾಗಬೇಕಿದ್ದ ಪುತ್ರಲಾಭವನ್ನು ತಡೆದು, ತನ್ನ ಗರ್ಭವನ್ನು ಮೋಸದಿಂದ ಧರಿಸಿದ ಭೂಮಿಯು ವಿವಿಧ ರೂಪಗಳನ್ನು ಧರಿಸುತ್ತಾ ಅನೇಕರಿಗೆ ಪತ್ನಿಯಾಗಲೆಂದೂ (ಅವನೇ ನೈಕರೂಪಾತ್ವಮ್ ಬಹುಭಾರ್ಯಾ ಭವಿಷ್ಯಸಿ –ಶ್ಲೋ. ೨೩) ಶಪಿಸಿದಳು. ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಮಿಥಿಲೆಗೆ ಹೋಗುತ್ತಾ ದಾರಿಯಲ್ಲಿ ಗಂಗಾನದಿಯ ತೀರದಲ್ಲಿ ತಂಗಿದಾಗ ರಾಮನ ಪ್ರಾರ್ಥನೆಯಂತೆ ಗಂಗೆಯ ವೃತ್ತಾಂತವನ್ನು ಅವನಿಗೆ ವಿವರಿಸುವ ಸಂದರ್ಭದಲ್ಲಿ ಪಾರ್ವತಿಯ ಕಥೆ ಸಾಂದರ್ಭಿಕವಾಗಿ ಹೇಳಲ್ಪಟ್ಟಿದೆ.

**೪. ಪತ್ನಿ ಅಹಲ್ಯೆಗೆ ಗೌತಮನ ಶಾಪ (ಸರ್ಗ ೪೮)**

ಗೌತಮನ ಭಾರ್ಯೆ ಅಹಲ್ಯೆಯಲ್ಲಿ ಮೊದಲಿನಿಂದಲೂ ಮೋಹಿತನಾಗಿದ್ದ ಇಂದ್ರನು ಸಮಯ ಸಾಧಿಸಿ ಗೌತಮನು ಸ್ನಾನಕ್ಕಾಗಿ ಹೋದ ವೇಳೆ ಅವನ ವೇಷವನ್ನು ಧರಿಸಿ ಅವಳಲ್ಲಿ ಸಂಗಮಿಸಲಿಚ್ಛಿಸಿದನು (ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹ ಸುಮಧ್ಯಮೇ –ಶ್ಲೋ. ೧೮). ಗೌತಮನ ವೇಷವನ್ನು ಧರಿಸಿ ಬಂದವನು ದೇವರಾಜ ಇಂದ್ರನೆಂದು ತಿಳಿದೂ ಅಹಲ್ಯೆಯು (ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ/ಮತಿಂ ಚಕಾರ ದುರ್ಮೇಧಾ ದೇವರಾಜ ಕುತೂಹಲಾತ್ –ಶ್ಲೋ. ೧೯) ಅವನೊಡನೆ ದೇಹಸುಖವನ್ನನುಭವಿಸಲು ಇಷ್ಟಪಟ್ಟಳು. ನಂತರ ಗೌತಮನ ಕೋಪಕ್ಕೆ ಹೆದರಿ ದೇವರಾಜನನ್ನು ಬೇಗ ಹೋಗೆಂದು ಹೇಳುತ್ತಾ ತನ್ನನ್ನೂ ಅವನನ್ನೂ ರಕ್ಷಿಸಿಕೊಳ್ಳಬೇಕೆಂದು ಕೇಳಿಕೊಂಡಳು (ಕೃತಾರ್ಥಾಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ ಪ್ರಭೋ/ಆತ್ಮಾನಂ ಮಾಂ ಚ ದೇವೇಶ ಸರ್ವಥಾ ರಕ್ಷ ಗೌತಮಾತ್ –ಶ್ಲೋ. ೨೦–೨೧). ತನ್ನ ಇಷ್ಟತೀರಿ ಅವನು ವಾಪಸಾಗುತ್ತಿರುವಷ್ಟರಲ್ಲೇ ಸ್ನಾನ ಮಾಡಿ ಆಶ್ರಮಕ್ಕೆ ವಾಪಸಾದ ಗೌತಮನು ತನ್ನ ವೇಷದಲ್ಲಿದ್ದ ಇಂದ್ರನನ್ನು ಕಂಡು ಅವನ ಅಕಾರ್ಯವನ್ನು ಸಹಿಸದೆ, ಅವನ ವೃಷಣಗಳು ಬಿದ್ದುಹೋಗಲೆಂದೂ (ವಿಫಲಸ್ತ್ವಮ್ ಭವಿಷ್ಯಸಿ –

ಶ್ಲೋ. ೨೭), ಇದಕ್ಕೆ ಸಹಕಾರಿಯಾದ ಅಹಲ್ಯೆಯು ಆಹಾರವಿಲ್ಲದೆ ಕೇವಲ ವಾತಭಕ್ಷಣೆ ಮಾಡುತ್ತಾ, ಅಗೋಚರಳಾಗಿ ಅದೇ ಆಶ್ರಮದಲ್ಲಿ ವಾಸಿಸುತ್ತಿರಲೆಂದೂ (ವಾತಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ/ ಅದೃಶ್ಯಾ ಸರ್ವಭೂತಾನಾಮ್...ಶ್ಲೋ. ೩೦) ಶಪಿಸಿದನು. ನಂತರವೇ ಅವಳ ಮೇಲಿನ ಪ್ರೀತಿಯಿಂದ ಮುಂದೆ ಅಯೋಧ್ಯಾಪತಿ ದಶರಥನ ಮಗ ಶ್ರೀರಾಮನ ಚರಣಸ್ಪರ್ಶವಾದಾಗ ಅವಳು ಶುದ್ಧಳಾಗುವಳೆಂದೂ, ಅವನನ್ನು ಸತ್ಕರಿಸುವುದರಿಂದ ಲೋಭಮೋಹಗಳಿಂದ ದೂರಳಾಗಿ ಮೊದಲಿನ ರೂಪ ಪಡೆದು ತನ್ನನ್ನು ಸೇರುವಳೆಂದೂ ಉಶ್ಶಾಪ ಮತ್ತು ಶಾಪದ ಅವಧಿಯನ್ನು ತಿಳಿಸಿ ತಪಸ್ಸಿಗೆ ಬೇರೆಡೆಗೆ ಹೊರಟುಹೋದನು. ಮನುಷ್ಯಾವತಾರದಲ್ಲಿದ್ದರೂ ಶ್ರೀರಾಮನು ದೇವತೆಯೆನ್ನುವುದನ್ನು ಮುನಿಗಳು ತಿಳಿದಿದ್ದರೆಂದು ಈ ಪ್ರಸಂಗದಿಂದ ತಿಳಿಯುತ್ತದೆ. ದೇವತೆಗಳೂ ಕಾಮಕ್ಕೆ ದಾಸರೇ. ಧರ್ಮದ ಚೌಕಟ್ಟಿನಲ್ಲಿದ್ದರೆ ಕಾಮ ದೋಷವಲ್ಲ. ಇಲ್ಲದಿದ್ದರೆ ಗರ್ಹಣೀಯ, ಶಿಕ್ಷಾರ್ಹ (ಧರ್ಮಾದರ್ಥಶ್ಚ ಕಾಮಶ್ಚ). ದೇವರಾಜನಿಗೂ ಅವನ ಅಧರ್ಮದ ಕಾಮತೃಪ್ತಿಗೆ ತಕ್ಕ ಫಲ ಒಡನೆಯೇ ಸಿಕ್ಕಿತು. ನಂತರ ದೇವತೆಗಳು ಅವನಿಗೆ ಮೇಷವೃಷಣವನ್ನು ಸೇರಿಸಿದರೆಂದು ಕಥೆ.

**೫. ತ್ರಿಶಂಕುವಿಗೆ ದೊರೆತ ಶಾಪ (ಸರ್ಗ ೫೮)**

ಸಶರೀರನಾಗಿ ಸ್ವರ್ಗಾರೋಹಣವನ್ನು ಬಯಸಿದ ಅಯೋಧ್ಯೆಯ ತ್ರಿಶಂಕು ಮಹಾರಾಜ ಅದನ್ನು ಪಡೆದುಕೊಳ್ಳಲು ಯಾಗ ಮಾಡಲು ನಿಶ್ಚಯಿಸಿ ಕುಲಗುರುಗಳಾದ ವಸಿಷ್ಠಮಹರ್ಷಿಯನ್ನು ಪ್ರಾರ್ಥಿಸಿದನು. ಅದು ಅಸಾಧ್ಯವೆಂದು ಅವರು ತಿರಸ್ಕರಿಸಿದ್ದರಿಂದ ತ್ರಿಶಂಕು ಅವನ ಮಕ್ಕಳಲ್ಲಿ ಹೋಗಿ ಬೇಡಿಕೊಳ್ಳುತ್ತಾನೆ. ತಂದೆಯ ಮಾತನ್ನೇ ಅವರೂ ಅನುಮೋದಿಸಿದ್ದರಿಂದ ತಾನು ಅನ್ಯತ್ರ ಶರಣು ಹೋಗುವೆನೆನ್ನಲು ಕುಪಿತರಾದ ಗುರುಪುತ್ರರು ತ್ರಿಶಂಕುವನ್ನು ಚಂಡಾಲನಾಗೆಂದು ಶಪಿಸಿದರು (ಚಂಡಾಲತ್ವಮ್ ಗಮಿಷ್ಯಸಿ –ಶ್ಲೋ. ೯). ಅವನು ಖೇದದಿಂದ ವಿಶ್ವಾಮಿತ್ರರನ್ನು ಕಂಡು ಎಲ್ಲವನ್ನೂ ನಿವೇದಿಸಿ ಅವರನ್ನು ಈ ಕೆಲಸಕ್ಕಾಗಿ ಪ್ರಾರ್ಥಿಸುತ್ತಾನೆ. ವಸಿಷ್ಠರು ಅಸಾಧ್ಯವೆಂದದ್ದನ್ನು ತಾನು ಮಾಡಿ ತೋರಿಸುವೆನೆಂದು ಒಪ್ಪಿಕೊಂಡು ವಿಶ್ವಾಮಿತ್ರನು ಯಜ್ಞಕ್ಕಾಗಿ ಋತ್ವಿಜರನ್ನು ಆಹ್ವಾನಿಸುತ್ತಾನೆ. ವಸಿಷ್ಠಪುತ್ರರಿಗೂ ಆಹ್ವಾನ ಹೋಗುತ್ತದೆ. ಕ್ಷತ್ರಿಯನು ಯಾಜಕನಾಗಿ, ಚಂಡಾಲನು ಯಜಮಾನನಾದ ಯಾಗಕ್ಕೆ ತಾವು ಬರುವುದಿಲ್ಲವೆಂದು ದೂಷಿಸಿದ್ದನ್ನು ಕೇಳಿ ಕೋಪಗೊಂಡ ವಿಶ್ವಾಮಿತ್ರನು ಅವರನ್ನು ಏಳು ಜನ್ಮಗಳ ಕಾಲ ನಾಯಿ ಮಾಂಸ ಭಕ್ಷಕರಾಗಿ (ಶ್ವಮಾಂಸನಿಯತಾಹಾರಾಃ –ಶ್ಲೋ. ೫೯.೧೯) ಮುಷ್ಟಿಕರೆಂಬ ಚಂಡಾಲಜಾತಿಯಲ್ಲಿ ಹುಟ್ಟಿರೆಂದು (ಮುಷ್ಟಿಕಾನಾಮ ನಿರ್ಘೃಣಾಃ/ವಿಕೃತಾಶ್ಚ ವಿರೂಪಾಶ್ಚ ಲೋಕಾನನುಚರಂತ್ವಿಮಾನ್ –ಶ್ಲೋ. ೨೦) ಶಪಿಸಿದನು. ಕುಲಗುರುಗಳನ್ನು ಬಿಟ್ಟು ಕಾರ್ಯಸಾಧನೆಗೆ ಇತರರನ್ನು ಆಶ್ರಯಿಸುವುದು ಅಪರಾಧ. ನಿಯತಿಗೆ ವಿರುದ್ಧವಾದದ್ದನ್ನು ಯಾರೂ ಬಯಸಬಾರದು. ಅದರಿಂದಾಗಿ ತನಗೂ ಶಾಪ, ಇತರರಿಗೂ ಶಾಪ ಬರುವಂತಾಯಿತು.

**೬. ರಂಭೆಗೆ ಬಂದ ಶಾಪ (ಸರ್ಗ ೬೪)**

ಒಮ್ಮೆ ವಸಿಷ್ಠಾಶ್ರಮಕ್ಕೆ ಹೋಗಿದ್ದ ವಿಶ್ವಾಮಿತ್ರ ಮಹಾರಾಜನು ಅಲ್ಲಿ ಕಂಡ ಕಾಮಧೇನುವಿಗಾಗಿ ಆಸೆಪಟ್ಟು ವಸಿಷ್ಠರು ಅದನ್ನು ಕೊಡಲು ನಿರಾಕರಿಸಿದ್ದರಿಂದ, ಪೌರುಷದಿಂದ ಪಡೆದುಕೊಳ್ಳಲು ಅವರೊಡನೆ ಹೋರಾಡಿ, ಸೋತು, ಕ್ಷತ್ರಿಯ ಬಲಕ್ಕಿಂತಲೂ ಬ್ರಹ್ಮಬಲವೇ ಮೇಲೆಂದು ತಿಳಿದ ವಿಶ್ವಾಮಿತ್ರನು ಸಹಸ್ರಾರು ವರ್ಷಗಳ ಕಾಲ ತಪಸ್ಸು ಮಾಡಿ ಕಡೆಗೆ ಬ್ರಹ್ಮನಿಂದಲೇ ಬ್ರಹ್ಮರ್ಷಿಯಾದನೆಂದೆನಿಸಿಕೊಂಡನು. ವಿಶ್ವಾಮಿತ್ರನು ಮತ್ತೊಮ್ಮೆ ಘೋರತಪಸ್ಸನ್ನಾಚರಿಸುತ್ತಿರಲು ಇಂದ್ರನು ಅವನ ತಪೋಭಂಗ ಮಾಡಲು ರಂಭಾ ಎಂಬ ಅಪ್ಸರೆಯನ್ನು ಕಷ್ಟಪಟ್ಟು ಒಪ್ಪಿಸುತ್ತಾನೆ. ಅವಳಿಂದ ತನ್ನ ತಪಸ್ಸು ವಿಘ್ನ ಹೊಂದಿದಾಗ, ಕಾಮಕ್ರೋಧಗಳನ್ನು ಜಯಿಸಲೆತ್ನಿಸಿರುವ ತನ್ನ ಸಾಧನೆಗೆ ಅಡ್ಡಿ ಮಾಡಿದ್ದಕ್ಕಾಗಿ, ಹತ್ತು ಸಾವಿರ ವರ್ಷಗಳವರೆಗೆ ಕಲ್ಲಾಗಿ ಬಿದ್ದಿರುವಂತೆ ರಂಭೆಗೆ ಶಾಪವಿತ್ತನು (ದಶವರ್ಷ ಸಹಸ್ರಾಣಿ ಶೈಲೀ ಸ್ಥಾಸ್ಯಸಿ ದುರ್ಭಗೇ –ಶ್ಲೋ. ೧೨). ಇಂದ್ರನಿಗಾಗಿ ಅವಳಿಗೆ ಈ ಸ್ಥಿತಿ ಬಂತಲ್ಲಾ ಎಂದು ನೊಂದು ಮುಂದೆ ವಸಿಷ್ಠರಿಂದ ಅವಳ ಶಾಪ ವಿಮೋಚನೆಯಾಗುವುದೆಂದು ತಿಳಿಸಿ ಮತ್ತೆ ತಪಸ್ಸಿಗೆ ತೆರಳಿದನು. ಜನ್ಮದಿಂದ ಕೃತ್ಯದಿಂದ ಕ್ಷತ್ರಿಯನೊಬ್ಬನು ಬ್ರಹ್ಮರ್ಷಿಯೆನಿಸಿಕೊಂಡ ಇನ್ನೊಬ್ಬರಾರೂ ಇಲ್ಲ. ತಪಸ್ಸಿನಿಂದ ಏನನ್ನಾದರೂ ಪಡೆದುಕೊಳ್ಳಲು ಸಾಧ್ಯವೆನ್ನುವುದನ್ನು ವಿಶ್ವಾಮಿತ್ರ ತೋರಿಸಿಕೊಟ್ಟನು. ರಂಭೆಯಿಂದಾಗಿ ಅವನಿಗೆ ತಾನು ಇನ್ನೂ ಜಿತೇಂದ್ರಿಯನಾಗಿಲ್ಲವೆಂಬಂಶ ತಿಳಿದಂತಾಯಿತು. ಈ ಕಥೆಯೂ ಸಹ ಸಾಂದರ್ಭಿಕವಾಗಿ ರಾಮಲಕ್ಷ್ಮಣರಿಗೆ ಹೇಳಲ್ಪಟ್ಟಿದೆ.

**೭. ದಶರಥನಿಗೆ ಬಂದ ಶಾಪ – ಅಯೋಧ್ಯಾಕಾಂಡದಲ್ಲಿ (ಸರ್ಗ ೬೪)**

ದಶರಥನು ಇನ್ನೂ ಯುವರಾಜನಾಗಿದ್ದಾಗ ವರ್ಷಾಕಾಲದಲ್ಲೊಮ್ಮೆ ಸರಯೂನದಿಗೆ ರಾತ್ರಿಯ ವೇಳೆ ನೀರು ಕುಡಿಯಲು ಬರುವ ವನ್ಯಮೃಗಗಳನ್ನು ಬೇಟೆಯಾಡಲು ಹೋಗಿದ್ದನು. ಕತ್ತಲೆಯ ವೇಳೆಯಲ್ಲಿ ಪಾತ್ರೆಯಲ್ಲಿ ನೀರು ತುಂಬುವ ಶಬ್ದವನ್ನು ಕೇಳಿ ಆನೆಯೊಂದು ನೀರು ಕುಡಿಯುತ್ತಿರಬೇಕೆಂದು ಭಾವಿಸಿದ ದಶರಥನು ತನಗೆ ತಿಳಿದಿದ್ದ ಶಬ್ದವೇಧಿ ಬಾಣವನ್ನು ತೊಡಲು ಅದು ಋಷಿಕುಮಾರನೊಬ್ಬನಿಗೆ ತಗಲಿ ಅವನು ವಿಲಾಪ ಮಾಡಿದಾಗ ತನ್ನ ತಪ್ಪು ತಿಳಿದು ಅಲ್ಲಿಗೆ ಧಾವಿಸಿದನು. ವೃದ್ಧರೂ ನೇತ್ರಹೀನರೂ ಆದ ಮಾತಾಪಿತೃಗಳು ಆಶ್ರಮದಲ್ಲಿ ಬಾಯಾರಿಕೆಯಿಂದ ತನಗಾಗಿ ನಿರೀಕ್ಷಿಸುತ್ತಿರುವರೆಂದೂ, ಹೋಗಿ ಅವರನ್ನು ಸಂತೈಸಬೇಕೆಂದೂ ತಾನು ಸಾವನ್ನಪ್ಪುತ್ತಿರುವೆನೆಂದೂ ಹೇಳಿದನು. ಇವನ ಸಮಾಧಾನಕ್ಕಾಗಿ, ತಾನು ಬ್ರಾಹ್ಮಣನಲ್ಲವೆಂದೂ, ಶೂದ್ರಸ್ತ್ರೀಯಲ್ಲಿ ವೈಶ್ಯನಿಗೆ ಹುಟ್ಟಿದವನೆಂದೂ ತಿಳಿಸಿ ಪ್ರಾಣ ಬಿಟ್ಟನು. ದಶರಥನು ಜಲಪೂರ್ಣಕುಂಭವನ್ನು ತೆಗೆದುಕೊಂಡು ಆಶ್ರಮಕ್ಕೆ ಹೋಗಿ ತಿಳಿಯದೇ ಜರುಗಿದ ಅಕಾರ್ಯವನ್ನು ಅವರಿಗೆ ತಿಳಿಸಿ ಅವರ ಇಚ್ಛೆಯಂತೆ ಮಗನನ್ನು ತೋರಿಸಲು ನದೀ ತೀರಕ್ಕೆ ಕರೆತಂದನು. ದುಃಖದಿಂದ ವಿಲಪಿಸಿದ ನಂತರ, ಅವರು ದಶರಥನನ್ನು ಕುರಿತು "ನೀನೂ ಸಹ ಪುತ್ರಶೋಕದಲ್ಲಿಯೇ ಮರಣಿಸುವೆ" ಎಂದು

ಶಾಪವಿತ್ತರು. ಮುಂದೆ ಕೈಕೇಯಿಯ ವಚನವನ್ನು ಪೂರೈಸಲು ರಾಮನನ್ನು ಕಾಡಿಗೆ ಕಳುಹಿಸಲು ಅನುಮತಿಸಬೇಕಾಯಿತು. ನಂತರ ರಾಮಲಕ್ಷ್ಮಣರ ವಿಯೋಗದಲ್ಲಿ ತಪಿಸುತ್ತಾ ದಶರಥನು ದೇಹತ್ಯಾಗ ಮಾಡಿದನು. ಬ್ರಹ್ಮಹತ್ಯೆ ದೊಡ್ಡ ಪಾಪ. ಅದು ಸಂಭವಿಸಿದ್ದರೆ ರಾಘವವಂಶವೇ ನಾಶವಾಗಿ ಹೋಗುತ್ತಿತ್ತು. ದಶರಥನ ತಲೆ ಏಳು ಹೋಳಾಗುತ್ತಿತ್ತು. ಆದ್ದರಿಂದ ಅವನು ಕೊಂದವನು ಬ್ರಾಹ್ಮಣನಾಗಿರಲಿಲ್ಲ, ಹಾಗೂ ಅಜ್ಞಾನದಿಂದ ಈ ಪಾಪ ಜರುಗಿದ್ದರಿಂದ ದಶರಥನು ಇನ್ನೂ ಜೀವಿಸಿದ್ದಾನೆ ಎಂಬುದನ್ನು ಋಷಿಕುಮಾರನ ವೃದ್ಧ ತಂದೆಯಿಂದ ಹೇಳಿಸಿದೆ (ಸಪ್ತಧಾತು ಭವೇನ್ಮೂರ್ಧಾ ಮುನೌ ತಪಸಿ ತಿಷ್ಠತಿ/ ಅಜ್ಞಾನಾದ್ಧಿ ಕೃತಂ ಯಸ್ಮಾದಿದಂ ತೇ ತೇನ ಜೀವಸೇ –ಶ್ಲೋ. ೨೫). ಈ ಶಾಪದಿಂದಾಗಿ ರಾಮನಿಗೆ ವನವಾಸ ಮತ್ತು ಅವನ ಅವತಾರದ ಲಕ್ಷ್ಯಸಾಧನೆಯಾಗುವುದಕ್ಕೆ ಸಹಾಯವಾದಂತಾಯಿತು.

**೮. ಕಬಂಧನಿಗೆ ಬಂದ ಶಾಪ – ಅರಣ್ಯಕಾಂಡದಲ್ಲಿ (ಸರ್ಗ ೭೧)**

ಕಬಂಧನು ಮೊದಲಿಗೆ ಅತ್ಯಂತ ಬಲಶಾಲಿಯೂ, ರೂಪವಂತನೂ ಆಗಿದ್ದನು. ತನಗಿಷ್ಟವಾದ ರೂಪಧಾರಣೆಯ ಶಕ್ತಿಯಿತ್ತು. ಇದರಿಂದ ಕಾಡಿನ ಋಷಿಮುನಿಗಳನ್ನು ಹಿಂಸಿಸುತ್ತಿದ್ದನು. ಒಮ್ಮೆ ರಾಕ್ಷಸರೂಪವನ್ನು ಧರಿಸಿ ಸ್ಥೂಲ ಶಿರನೆಂಬ ಋಷಿಯನ್ನು ಭಯಪಡಿಸಿದ್ದರಿಂದ ಆ ರೂಪವೇ ಅವನಿಗುಳಿಯಲಿ ಎಂದು ಕಬಂಧನಿಗೆ ಶಾಪವಿತ್ತರು (ಏತದೇವಂ ನೃಶಂಸಂ ತೇ ರೂಪಮಸ್ತು ವಿಗರ್ಹಿತಮ್ –ಶ್ಲೋ. ೫). ಮುಂದೆ ರಾಮನು ಅವನ ಭುಜಗಳನ್ನು ಕತ್ತರಿಸಿ ನಿರ್ಜನವನದಲ್ಲಿ ಸುಟ್ಟರೆ ರಾಕ್ಷಸರೂಪ ಹೋಗಿ ಮೊದಲಿನ ರೂಪವನ್ನು ಪಡೆಯುತ್ತಾನೆಂದು ವಿಶಾಪವನ್ನು ಸಹ ಕೊಟ್ಟನು. ಕಬಂಧನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ದೀರ್ಘಾಯುಷ್ಯವನ್ನು ಪಡೆದನು. ತನ್ನ ಬಲದ ಹಾಗೂ ಬ್ರಹ್ಮನ ವರದ ಮದದಿಂದ ಇಂದ್ರನನ್ನು ಯುದ್ಧದಲ್ಲಿ ಎದುರಿಸಿದನು. ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಲು ಕಬಂಧನ ಶಿರಸ್ಸು ಮತ್ತು ಕಾಲುಗಳು ಅವನ ಹೊಟ್ಟೆಯನ್ನು ಹೊಕ್ಕು ವಿರೂಪನಾದನು. ರಾಮಲಕ್ಷ್ಮಣರನ್ನು ಹೊತ್ತುಕೊಂಡು ಓಡಲಾರಂಭಿಸಿದಾಗ ಅವರು ಇವನ ತೋಳುಗಳನ್ನು ಕತ್ತರಿಸಿ ಶರೀರವನ್ನು ಅವನ ಪ್ರಾರ್ಥನೆಯಂತೆ ದಹಿಸಿದ ಮೇಲೆ ಮೊದಲಿನ ರೂಪ ಹಾಗೂ ದಿವ್ಯಜ್ಞಾನ ಮರಳಿಬಂದಿತು. ಇಂದ್ರನ ವರದಿಂದ ಯೋಜನದುದ್ದವಾಗಿ ನೀಡುವಂತಹ ತೋಳುಗಳಾಗಿದ್ದವು. ಅದರಿಂದ ಅವನು ಕುಳಿತಲ್ಲಿಂದಲೇ ತನಗೆ ಬೇಕಾದ ಆಹಾರವನ್ನು ಎಳೆದುಕೊಳ್ಳಲು ಸಾಧ್ಯವಾಗುತ್ತಿತ್ತು. ಅವನೇ ರಾಮನಿಗೆ ಸೀತೆಯನ್ನು ಅಪಹರಿಸಿದವನನ್ನು ಪತ್ತೆ ಮಾಡಲು ಸಹಾಯವು ಸುಗ್ರೀವನಿಂದ ದೊರಕುವುದೆಂದೂ ಅವನಲ್ಲಿಗೆ ಹೋಗಿ ಅವನ ಸ್ನೇಹವನ್ನು ಪಡೆಯುವುದೆಂದೂ ತಿಳಿಸಿದನು. ಅವನಿಂದಲೇ ರಾಮನಿಗೆ ಪಂಪಾಸರೋವರದ ಮಾರ್ಗ ತಿಳಿದು ಸುಗ್ರೀವನಲ್ಲಿಗೆ ಹೋಗಲನುಕೂಲವಾಯಿತು.

### ೯. ಮತಂಗ ಮಹರ್ಷಿಗಳ ಶಾಪ – ಕಿಷ್ಕಿಂಧಾಕಾಂಡದಲ್ಲಿ (ಸರ್ಗ ೧೧)

ದುಂದುಭಿ ಎಂಬ ರಾಕ್ಷಸನು ಬಲಗರ್ವಿತನಾಗಿ ದ್ವಂದ್ವಯುದ್ಧವನ್ನು ಬಯಸುತ್ತಾ ಸಮುದ್ರರಾಜ ಮತ್ತು ಹಿಮವಂತನು ಸೋಲೊಪ್ಪಲು ಕೊನೆಗೆ ವಾನರ ರಾಜನಾದ ವಾಲಿಯನ್ನು ಸಮೀಪಿಸಿ ದ್ವಂದ್ವಯುದ್ಧಕ್ಕೆ ಅವನನ್ನು ಆಹ್ವಾನಿಸಿದನು. ವಾಲಿಗೂ ತನ್ನ ಬಲವೀರ್ಯದಲ್ಲಿ ಅಹಂಕಾರವಿತ್ತು. ಯುದ್ಧದಲ್ಲಿ ವಾಲಿಯು ಮಹಿಷರೂಪದ ದುಂದುಭಿಯನ್ನು ಕೊಂದು ಅವನ ಶರೀರವನ್ನು ಭೂಮಿಯ ಮೇಲೆ ತೀಡಿದನು. ನಂತರ ಅದನ್ನು ತೂಗಿಸಿ ಒಂದು ಯೋಜನದೂರವೆಸೆಯಲು ಅದು ರಕ್ತವನ್ನು ಸೋರಿಸುತ್ತಾ ಮತಂಗಮುನಿಗಳ ಆಶ್ರಮದಲ್ಲಿ ಬೀಳುವಂತಾಯಿತು. ಇದರಿಂದ ಕ್ರುದ್ಧನಾದ ಮುನಿಯು ತನ್ನ ಆಶ್ರಮವನ್ನು ಅಪವಿತ್ರ ಮಾಡಿದವನು ಆ ಪ್ರದೇಶಕ್ಕೆ ಬಂದರೆ ಅವನ ಮೃತ್ಯು ಸಂಭವಿಸಲೆಂದೂ ಅಲ್ಲಿಂದ ಮುಂದೆ ಯಾವ ವಾನರನೂ ಆಶ್ರಮದ ಹತ್ತಿರ ಸಹ ಸುಳಿಯಬಾರದೆಂದೂ ಶಪಿಸಿದನು (ಇಹ ತೇನಾಪ್ರವೇಷ್ಟವ್ಯಂ ಪ್ರವಿಷ್ಟಸ್ಯ ವಧೋ ಭವೇತ್ –ಶ್ಲೋ. ೫೩). ಇದರಿಂದಾಗಿ, ವಾಲಿಯ ಭಯದಿಂದ ಓಡಿಹೋದ ಸುಗ್ರೀವನು ತನ್ನ ಸಚಿವರೊಡನೆ ಋಷ್ಯಮೂಕ ಪರ್ವತದಲ್ಲಿ ವಾಸಿಸಲು ಸಾಧ್ಯವಾಯಿತು. ಅಲ್ಲಿಗೆ ಬಂದು ಅವನನ್ನು ಕೊಲ್ಲಲು ವಾಲಿಗೆ ಶಾಪದ ಭಯವಿತ್ತು. ರಾಮನು ಅಲ್ಲಿಗೆ ಬಂದು ಸುಗ್ರೀವನೊಡನೆ ಸ್ನೇಹವನ್ನು ಪಡೆದು ಅವನಿಗಾಗಿ ವಾಲಿಯನ್ನು ಕೊಂದು ಅವನನ್ನು ವಾನರರಾಜನನ್ನಾಗಿ ನಿಯಮಿಸುತ್ತಾನೆ. ಸುಗ್ರೀವನೂ ಸಹ ಕೃತಜ್ಞತೆಯಿಂದ ತನ್ನ ಅನುಚರರನ್ನು ಎಲ್ಲೆಡೆ ಕಳುಹಿಸಿ ಲಂಕೆಯಲ್ಲಿ ಸೀತೆಯಿರುವುದನ್ನು ತಿಳಿದುಕೊಂಡನು. ನಂತರ ರಾವಣಾದಿಗಳ ವಧೆ ಸಾಧ್ಯವಾಯಿತು.

### ೧೦. ರಾವಣನಿಗೆ ಬಂದ ಶಾಪಗಳು ಅನೇಕ

ರಾವಣನಿಗೆ ಬಂದ ಶಾಪಗಳು ಯುದ್ಧಕಾಂಡದಿಂದ ಪ್ರಾರಂಭಿಸಿ ಉತ್ತರ ಕಾಂಡದಲ್ಲೂ ಕಂಡುಬರುತ್ತವೆ. ಬ್ರಹ್ಮನಿಂದ ಕೊಡಲ್ಪಟ್ಟ ಶಾಪವನ್ನು (ಸರ್ಗ ೧೩) ಅವನೇ ಸ್ಮರಿಸುತ್ತಾನೆ. ಪಂಚವಟಿಯಲ್ಲಿ ರಾಮಲಕ್ಷ್ಮಣರಿಲ್ಲದ ವೇಳೆ ಸೀತೆಯನ್ನು ಮಾರೀಚನ ಸಹಾಯದಿಂದ ಅಪಹರಿಸಿ ಲಂಕೆಗೆ ತಂದು ಅಲ್ಲಿ ಅಶೋಕವನದಲ್ಲಿ ರಾಕ್ಷಸಿಯರ ರಕ್ಷಣೆಯಲ್ಲಿರಿಸುತ್ತಾನೆ. ಆಗಾಗ್ಗೆ ಅಲ್ಲಿಗೆ ಹೋಗಿ ಅವಳನ್ನು ಅನುನಯದಿಂದ ತನ್ನ ರಾಣಿಯಾಗುವಂತೆ ಕೇಳಿಕೊಳ್ಳುತ್ತಾನೆ. ಅವನಿಚ್ಛೆಯಿಂತೆ ಅವನಿಗೆ ಸೀತೆಯು ಒಲಿಯದಿದ್ದಾಗ, ಮಹಾಪಾರ್ಶ್ವನೆಂಬುವನು ಬಲಾತ್ಕಾರದಿಂದ ಅವಳನ್ನು ಅನುಭವಿಸ ಬಾರದೇಕೆಂದು ರಾವಣನನ್ನು ಪ್ರೇರೇಪಿಸಲು, ಹಿಂದೊಮ್ಮೆ ಪಿತಾಮಹ ಬ್ರಹ್ಮನ ಭವನಕ್ಕೆ ಹೋಗುತ್ತಿದ್ದ ಪುಂಜಿಕಸ್ಥಲಾ ಎಂಬ ಅಪ್ಸರೆಯನ್ನು ಬಲಾತ್ಕಾರದಿಂದ ಭೋಗಿಸಿದ್ದಕ್ಕಾಗಿ ಬ್ರಹ್ಮನು ಕೋಪಗೊಂಡು ಮುಂದೆ ಹೀಗೆ ಬಲಾತ್ಕಾರದಿಂದ ಯಾರನ್ನಾದರೂ ಅನುಭವಿಸಿದರೆ ಅವನ ತಲೆಯು ನೂರು ಹೋಳಾಗಲೆಂದು ಶಪಿಸಿದ್ದನ್ನು ಸ್ಮರಿಸುತ್ತಾನೆ (ಶತಧಾ ಮೂರ್ಧಾ ಫಲಿಷ್ಯತಿ –ಶ್ಲೋ. ೧೪). ಆದ್ದರಿಂದ ಸೀತೆಯನ್ನು ತಾನು ಬಲಾತ್ಕರಿಸಲಿಷ್ಟಪಡುವುದಿಲ್ಲವೆನ್ನುತ್ತಾನೆ.

## ೧೧. ನಂದೀಶ್ವರನ ಶಾಪ – ಉತ್ತರಕಾಂಡದಲ್ಲಿ (ಸರ್ಗ ೧೬)

ಇನ್ನೊಂದು ಸಮಯದಲ್ಲಿ ರಾವಣನು ಪುಷ್ಪಕವಿಮಾನದಲ್ಲಿ ಪಯಣಿಸುತ್ತಿದ್ದಾಗ, ಕಾರ್ತಿಕೇಯನ ಜನ್ಮಭೂಮಿಯಾದ ಶರವಣವೆಂಬ ಕಾಡಿನ ಬಳಿ ಬರುತ್ತಾನೆ. ಆಗ ವಿಮಾನವು ಮುಂದೆ ಹೋಗದೇ ನಿಂತುಹೋಗುತ್ತದೆ. ಹೀಗೇಕಾಯಿತೆಂದು ಯೋಚಿಸುತ್ತಿದ್ದಾಗ, ದೂರದಲ್ಲಿ ರಕ್ಷಕನಾಗಿ ನಿಂತಿದ್ದ ನಂದೀಶ್ವರನು ಕಾಣಿಸಿಕೊಂಡು ಆ ಪ್ರದೇಶವು ಶಿವನು ಕ್ರೀಡಿಸುವಸ್ಥಲವೆಂದೂ ಅದರ ಮೂಲಕ ದೇವ, ರಾಕ್ಷಸ, ನಾಗ, ಯಕ್ಷ, ಗಂಧರ್ವರಲ್ಲಿ ಯಾರೂ ಹೋಗಲು ಸಾಧ್ಯವಿಲ್ಲವೆಂದೂ ಹೇಳುತ್ತಾನೆ. ಅವನನ್ನು ನೋಡಿ ರಾವಣನು ತನ್ನ ಬಲದ ಮದದಿಂದ ವಾನರಮುಖದವನೆಂದು ಹಾಸ್ಯ ಮಾಡಿದನು. ಕುಪಿತನಾದ ನಂದಿಯು ಮುಂದೆ ತನ್ನಂತೆಯೇ ಮುಖವಿರುವ ವಾನರವೀರನು ಅವನನ್ನು ಸಪರಿವಾರವಾಗಿ ನಾಶ ಮಾಡುತ್ತಾರೆಂದು ಶಪಿಸಿದನು (ಉತ್ಪತ್ಸ್ಯಂತಿ ವಧಾರ್ಥಂ ಹಿ ಕುಲಸ್ಯ ತವ ವಾನರಾಃ –ಶ್ಲೋ. ೧೭).

## ೧೨. ವೇದವತಿಯ ಶಾಪ (ಸರ್ಗ ೧೭)

ಹಿಂದೆ ಕೃತಯುಗದಲ್ಲಿ ಬೃಹಸ್ಪತಿಯ ಮಗನಾದ ಕುಶಧ್ವಜನೆಂಬ ಬ್ರಹ್ಮರ್ಷಿಗೆ ವೇದವತಿಯೆಂಬ ಅತಿಸುಂದರಳಾದ ಮಗಳಿದ್ದಳು. ಅವಳನ್ನು ವಿಷ್ಣುವಿಗೆ ಕೊಟ್ಟು ವಿವಾಹ ಮಾಡಲು ಕುಶಧ್ವಜನು ಆಲೋಚಿಸಿದ್ದನು. ಅವಳ ಸೌಂದರ್ಯವನ್ನು ಕೇಳಿ ಅವಳನ್ನು ವರಿಸಬಂದವರಲ್ಲಿ ಶಂಭು ಎಂಬ ದೈತ್ಯನೂ ಒಬ್ಬನು. ತನಗೆ ವೇದವತಿಯು ದೊರಕುವುದಿಲ್ಲ ಎಂದಾಗ ರಾತ್ರಿ ಮಲಗಿದ ಸಮಯದಲ್ಲಿ ಕುಶಧ್ವಜನನ್ನು ಕೊಲ್ಲುತ್ತಾನೆ. ಇದನ್ನು ಕಂಡ ಅವನ ಹೆಂಡತಿಯು ಗಂಡನೊಡನೆ ಸಹಗಮನ ಮಾಡುತ್ತಾಳೆ. ವೇದವತಿಯು ತಂದೆಯ ಆಸೆಯನ್ನು ಈಡೇರಿಸಲು, ನಾರಾಯಣನನ್ನೇ ಪತಿಯಾಗಿ ಪಡೆಯಲು ತಪಸ್ಸು ಮಾಡಲಾರಂಭಿಸುತ್ತಾಳೆ. ಪ್ರಪಂಚದ ವೀರರನ್ನೆಲ್ಲಾ ಜಯಿಸಬಯಸಿದ್ದ ರಾವಣನು ಅಲ್ಲಿ ಬಂದಾಗ, ಅವಳ ರೂಪವನ್ನು ಕಂಡು ಕಾಮಾಸಕ್ತನಾಗಿ ಅವಳನ್ನು ಬಯಸುತ್ತಾನೆ. ಆಗವಳು ನಾರಾಯಣನ ಹೊರತು ಇನ್ನಾರನ್ನೂ ಪತಿಯಾಗಿ ಆಶಿಸುವುದಿಲ್ಲವೆನ್ನುತ್ತಾಳೆ (ನಾರಾಯಣೋ ಮಮ ಪತಿಃ ಪುರುಷೋತ್ತಮಾತ್ –ಶ್ಲೋ. ೧೮). ಅವಳು ಎಷ್ಟು ವಿರೋಧಿಸಿದರೂ ಗಮನ ಕೊಡದೆ, ರಾವಣನು ಬಲಾತ್ಕಾರದಿಂದ ಅವಳ ಕೂಲದನ್ನು ಹಿಡಿದೆಳೆಯುತ್ತಾನೆ. (ಮೂರ್ಧಜೇಷು ತದಾ ಕನ್ಯಾಂ ಕರಾಗ್ರೇಣ ಪರಾಮೃಶತ್ –ಶ್ಲೋ. ೨೮). ವೇದವತಿಯು ಕೂಡಲೇ ಕತ್ತಿಯಿಂದ ರಾವಣನ ಕೈಸ್ಪರ್ಶವಾದಷ್ಟು ಕೂಲದನ್ನು ಕತ್ತರಿಸಿ, ಅಪವಿತ್ರಳಾದ ತಾನು ಇನ್ನು ಬದುಕುವುದಿಷ್ಟಲ್ಲವೆಂದು ನಿಶ್ಚಯಿಸಿ, ಮುಂದೆ ತಾನೇ ಅಯೋನಿಜೆಯಾಗಿ ಜನಿಸಿ ಅವನ ಮೃತ್ಯುವಿಗೆ ಕಾರಣಳಾಗುವುದಾಗಿ ಅವನನ್ನು ಶಪಿಸಿ ಅಗ್ನಿಯಲ್ಲಿ ಬಿದ್ದು ಮರಣಿಸುತ್ತಾಳೆ. ಅವಳೇ ಮುಂದೆ ತ್ರೇತಾಯುಗದಲ್ಲಿ ಸೀತೆಯಾಗಿ ಜನಿಸಿ ರಾವಣನ ವಧೆಗೆ ಕಾರಣಳಾಗುತ್ತಾಳೆ (ಧರ್ಷಿತಾಯಾಸ್ತ್ವಯಾನಾರ್ಯ ನ ಮೇ ಜೀವಿತಮಿಷ್ಯತೇ –ಶ್ಲೋ. ૩೦; ತವ ವಧಾರ್ಥಂ ಹಿ ಸಮುತ್ಪತ್ಸ್ಯೇ ಹ್ಯಹಂ ಪುನಃ –ಶ್ಲೋ. ೩೨).

## ೧೩. ಅನರಣ್ಯನ ಶಾಪ (ಸರ್ಗ ೧೯)

ಅಲ್ಲಿಂದ ಮುಂದೆ ಪ್ರಯಾಣ ಮಾಡುತ್ತಾ ಒಬ್ಬರಾದ ಮೇಲೊಬ್ಬ ರಾಜನನ್ನು ಗೆಲ್ಲುತ್ತಾ ಅಯೋಧ್ಯಾಧಿಪತಿ ಅನರಣ್ಯನನ್ನು ರಾವಣನು ಸಮೀಪಿಸಿ ಅವನೊಡನೆ ದ್ವಂದ್ವಯುದ್ಧವನ್ನು ಬಯಸುತ್ತಾನೆ. ಯುದ್ಧದಲ್ಲಿ ಅನರಣ್ಯನು ಸೋತು ಮರಣಿಸುತ್ತಾನೆ. ತನ್ನನ್ನು ಜಯಿಸುವ ವೀರರೇ ಇಲ್ಲವೆಂದು ರಾವಣನು ಅಹಂಕಾರದಿಂದ ನುಡಿಯಲು ಮುಂದೆ ಇಕ್ಷ್ವಾಕುವಂಶದಲ್ಲಿಯೇ ಶ್ರೀರಾಮನು ಅವತರಿಸಿ ರಾವಣನನ್ನು ಸಂಹರಿಸುತ್ತಾನೆಂದು ಶಾಪವಿತ್ತು ಅನರಣ್ಯನು ಸ್ವರ್ಗಲೋಕಕ್ಕೆ ತೆರಳುತ್ತಾನೆ (ರಾಮೋ ದಾಶರಥಿರ್ನಾಮ ಸ ತೇ ಪ್ರಾಣಾನ್ ಹರಿಷ್ಯತಿ –ಶ್ಲೋ. ೩೦).

## ೧೪. ಬಲಾತ್ಕಾರದಿಂದ ಕರೆದೊಯ್ದ ಸ್ತ್ರೀಯರ ಶಾಪ (ಸರ್ಗ ೨೪)

ರಾವಣನು ಜಯಿಸಿದಲ್ಲೆಲ್ಲ ತನಗಿಷ್ಟವಾದ ಸ್ತ್ರೀಯರನ್ನು ವಿವಾಹಿತರಾಗಲೀ, ಅವಿವಾಹಿತರಾಗಲೀ ಬಲಾತ್ಕಾರದಿಂದ ಅವರನ್ನು ತನ್ನ ವಿಮಾನದಲ್ಲಿ ತುಂಬಿಕೊಂಡು ಹೋಗುತ್ತಿದ್ದನು. ಅವರಲ್ಲಿ, ನಾಗಕನ್ಯೆಯರು, ಋಷಿಪುತ್ರಿಯರು, ದೈತ್ಯದಾನವ ಸ್ತ್ರೀಯರು ಇದ್ದರು. ತಮ್ಮ ಮಾತಾಪಿತೃಗಳ, ಪತಿಗಳ, ಮಕ್ಕಳ ವಿಯೋಗವನ್ನು ಸಹಿಸಲಾರದೇ ಪ್ರಲಾಪಿಸುತ್ತಾ, ಆ ಸ್ತ್ರೀಯರು ಹೀಗೆ ಪರಸ್ತ್ರೀಯರನ್ನು ಬಲಾತ್ಕಾರದಿಂದ ಅವರಿಚ್ಛೆಗೆ ವಿರೋಧವಾಗಿ ಎಳೆದುಕೊಂಡು ಹೋಗುತ್ತಿರುವ ಪಾಪಕ್ಕೆ ಅವನಿಗೆ ಹೆಂಗಸೊಬ್ಬಳಿಂದಲೇ ಮರಣ ಸಂಭವಿಸಲೆಂದು ಶಾಪವಿಡುತ್ತಿದ್ದರು (ತಸ್ಮಾದ್ ವೈ ಸ್ತ್ರೀಕೃತೇನೈವ ವಧಂ ಪ್ರಾಪ್ಸ್ಯತಿ ದುರ್ಮತಿಃ –ಶ್ಲೋ. ೨೧).

## ೧೫. ನಳಕೂಬರನ ಶಾಪ (ಸರ್ಗ ೨೬)

ಮತ್ತೊಂದು ಸಲ ಸರ್ವಾಲಂಕಾರಯುಕ್ತಳಾಗಿ ರಂಭೆ ಎಂಬ ಅಪ್ಸರೆಯು ತನ್ನ ಪ್ರಿಯನ ಬಳಿ ಹೋಗುತ್ತಿರುವಾಗ ರಾವಣನು ಅವಳನ್ನು ತಡೆದು ತನ್ನೊಡನೆ ರಮಿಸೆನ್ನುತ್ತಾನೆ. ರಂಭೆಯು ಕುಬೇರ ಪುತ್ರನಾದ ನಳಕೂಬರನನ್ನು ಪ್ರೇಮಿಸಿದ್ದಳು ಮತ್ತು ಆಗ ಅವನ ಬಳಿಗೆ ಹೋಗುತ್ತಿದ್ದಳು. ರಾವಣನು ತನಗೆ ಶ್ವಶುರನಾಗಬೇಕೆಂದೂ, ತಾನು ಅವನಿಗೆ ಸೊಸೆಯಂತೆ ಎಂದೂ ತನ್ನನ್ನು ಬಲಾತ್ಕರಿಸುವುದು ಪಾಪವೆಂದೂ ಅನೇಕ ವಿಧದಲ್ಲಿ ಅವಳು ರಾವಣನಿಗೆ ತಿಳಿಯಹೇಳುತ್ತಾಳೆ. ಆದರೆ ಕಾಮಾಂಧನಾದ ರಾವಣನು ಇದೊಂದನ್ನೂ ಕೇಳಿಸಿಕೊಳ್ಳದೆ, ಅಪ್ಸರೆಯರು ಯಾರೊಬ್ಬರ ಹೆಂಡತಿಯಾಗಲಾರರೆಂದೂ ಅವರು ಯಾರನ್ನು ಬೇಕಾದರೂ ಕೂಡಬಹುದೆಂದೂ ಹೇಳುತ್ತಾನೆ. ಬಲಾತ್ಕಾರದಿಂದ ಅವಳನ್ನು ಅನುಭವಿಸುತ್ತಾನೆ. ನಂತರ ದುಃಖಿಸುತ್ತಾ ಅವಳು ನಳಕೂಬರನ ಹತ್ತಿರ ಹೋದಾಗ ಅವಳ ಅವಸ್ಥೆಯನ್ನು ನೋಡಿ, ಅವಳಿಂದ ಎಲ್ಲವನ್ನೂ ತಿಳಿದು ಕೋಪಗೊಂಡು, ಕಾಮಿಸದ ಸ್ತ್ರೀಯನ್ನು ಈ ರೀತಿ ಇನ್ನೊಮ್ಮೆ ರಾವಣನು ಬಲಾತ್ಕರಿಸಿದರೆ ಅವನ ತಲೆ ಏಳು ಹೋಳಾಗಲೆಂದು ಶಪಿಸಿದನು (ಯದಾ ಹ್ಯಕಾಮಾಂ ಕಾಮಾರ್ತೋ ಧರ್ಷಯಿಷ್ಯತಿ ಯೋಷಿತಂ –ಶ್ಲೋ. ೫೫; ಮೂರ್ಧಾ ತು ಸಪ್ತಧಾ ತಸ್ಯ ಶಕಲೀ ಭವಿತಾ ತದಾ –ಶ್ಲೋ. ೫೬). ಈ ರೀತಿ ಮೂರು

ಲೋಕಗಳನ್ನು ಶಾಸಿಸಲು ಶಕ್ತನಾಗಿದ್ದ ರಾವಣನು ತನ್ನ ಪಾಪಕೃತ್ಯಗಳಿಂದಾಗಿ ಅನೇಕರಿಂದ ಶಪಿಸಲ್ಪಟ್ಟು ಕೊನೆಗೆ ಕುಟ್ಟೆ ಹಿಡಿದ ಮರದಂತೆ ಸತ್ತ್ವಹೀನನಾಗಿ ಹೋಗಿದ್ದನು. ಆದ್ದರಿಂದಲೇ ತನ್ನ ಮೃತ್ಯುವಿಗೆ ಕಾರಣರಾಗಬಹುದೆಂಬ ಪಟ್ಟಿಯಲ್ಲಿ ನರರನ್ನೂ ವಾನರರನ್ನೂ ಸೇರಿಸದೆ ವರವನ್ನು ಪಡೆದಿದ್ದನು. ಹಾಗಾಗಿ, ರಾಮಾವತಾರದಲ್ಲಿ ನರರೂಪಿ ರಾಮನಿಂದಲೇ ವಾನರರ ಸಹಾಯದಿಂದ ರಾವಣನು ಕೊಲ್ಲಲ್ಪಟ್ಟನು.

**೧೬. ಹನುಮಂತನಿಗೆ ಋಷಿಗಳ ಶಾಪ (ಸರ್ಗ ೩೬)**

ಹನುಮಂತನು ಇನ್ನೂ ಚಿಕ್ಕವನಾಗಿದ್ದಾಗಲೇ ಹಸಿವಾದ್ದರಿಂದ ಆಕಾಶದಲ್ಲಿನ ಸೂರ್ಯನನ್ನು ಹಣ್ಣೆಂದು ಭಾವಿಸಿ ಅವನನ್ನು ನುಂಗಲು ಧಾವಿಸುತ್ತಾನೆ. ಇದನ್ನು ಕಂಡ ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಹನುಮಂತನು ಪ್ರಾಣಹೀನನಾಗಿ ಭೂಮಿಯ ಮೇಲೆ ಬೀಳುತ್ತಾನೆ. ಇದರಿಂದ ದುಃಖಿತನಾದ ಆತನ ತಂದೆ ವಾಯುದೇವನು ಬೀಸುವುದನ್ನು ನಿಲ್ಲಿಸಿದ ಕಾರಣ ಪ್ರಾಣಿಗಳು ಉಸಿರಾಡುವುದೇ ಕಷ್ಟವಾಗುತ್ತದೆ. ಅವನನ್ನು ಸಮಾಧಾನ ಮಾಡಲು ಹನುಮಂತನನ್ನು ಮತ್ತೆ ಜೀವಿಸುವಂತೆ ಮಾಡಿ ಅವನಿಗೆ ಎಲ್ಲ ದೇವತೆಗಳೂ ತಮ್ಮ ತಮ್ಮ ಶಕ್ತಿಯನ್ನು ಕೊಡುತ್ತಾರೆ. ತಮ್ಮ ಅಸ್ತ್ರಶಸ್ತ್ರಗಳಿಂದ ಅವಧ್ಯತ್ವವನ್ನು ಅನುಗ್ರಹಿಸುತ್ತಾರೆ. ಬ್ರಹ್ಮದಂಡದಿಂದಾಗಲೀ, ವಜ್ರಾಯುಧದಿಂದಾಗಲೀ ಅವನ ಬಲವನ್ನು ಕುಂದಿಸಲಾಗದಂತೆ ಆಶೀರ್ವದಿಸಿ, ದೀರ್ಘಾಯುಷ್ಯವನ್ನು ಕರುಣಿಸುತ್ತಾರೆ. ಹೀಗೆ ಅನೇಕ ವರದಾನದರ್ಪಿತನಾದ ಹನುಮಂತನನ್ನು ತಡೆಯುವವರೇ ಇಲ್ಲದಂತಾಗುತ್ತದೆ. ಅವನು ಋಷಿಮುನಿಗಳ ಆಶ್ರಮಕ್ಕೆ ಹೋಗಿ ಅವರ ತಪಸ್ಸಿಗೆ, ಯಜ್ಞಯಾಗಾದಿಗಳಿಗೆ ವಿಘ್ನವುಂಟು ಮಾಡಲಾರಂಭಿಸುತ್ತಾನೆ. ಇದನ್ನು ಸಹಿಸಲಾರದೆ, ಋಷಿಗಳು ಅವನಿಗೆ ತನ್ನ ಬಲದ ಬಗ್ಗೆ ವಿಸ್ಮೃತಿಯುಂಟಾಗಲೆಂದೂ, ಯಾರಾದರೂ ಬೇರೆಯವರು ಅವನ ಕೀರ್ತಿಯ ಸ್ಮರಣೆ ಮಾಡಿದಾಗ ಮತ್ತೆ ಬಲದ ಜ್ಞಾಪಕವಾಗಲೆಂದೂ ಶಾಪ ಹಾಗೂ ವಿಮೋಚನೆಯನ್ನು ಕೊಟ್ಟರು (ಯದಾ ತೇ ಸ್ಮಾರ್ಯತೇ ಕೀರ್ತಿಃ ತದಾ ತೇ ವರ್ಧತೇ ಬಲಂ –ಶ್ಲೋ. ೩೫). ಆದ್ದರಿಂದಲೇ ಸುಗ್ರೀವನೊಡನೆ ಬಾಲ್ಯದಿಂದಲೇ ಸ್ನೇಹವಿದ್ದರೂ, ವಾಲಿಯ ಉಪಟಳದಿಂದ ಸುಗ್ರೀವನನ್ನು ರಕ್ಷಿಸಲಾಗಲಿಲ್ಲ. ಅವನನ್ನು ಮೀರಿಸಿದ ಶಕ್ತಿವಂತರು ಈ ಲೋಕದಲ್ಲೇ ಇರಲಿಲ್ಲವಾದರೂ ಹನುಮಂತನು ಶಾಪದಿಂದ ತನ್ನ ಶಕ್ತಿಯ ನೆನಪಿಲ್ಲದೇ ಏನೂ ತಿಳಿಯದ ಹಸುಳೆಯಂತಾದನು. ಮುಂದೆ ಸೀತೆಯನ್ನು ಲಂಕೆಗೆ ಹೋಗಿ ಹುಡುಕಲು ಸಮುದ್ರಲಂಘನ ಮಾಡಬೇಕಾದಾಗ ಇತರ ವಾನರವೀರರು ತಮಗೆ ಸಾಧ್ಯವಿಲ್ಲವೆಂದರು. ಆಗ ಜಾಂಬವಂತನು ಹನುಮಂತನನ್ನು ಕೊಂಡಾಡಿ ಅವನ ಬಲ ವೀರ್ಯಗಳ ಸ್ಮರಣೆ ಮಾಡಿಸುತ್ತಾನೆ. ಕೂಡಲೇ ಶಾಪವಿಮೋಚನೆಯಾಗಿ ಅತಿ ಸುಲಭವಾಗಿ ಸಮುದ್ರವನ್ನು ಲಂಘಿಸಿ ಸೀತಾವೃತ್ತಾಂತವನ್ನು ತಂದು ಎಲ್ಲರನ್ನೂ ಕಾಪಾಡಿದನು. ಹಾಗೆಯೇ ಲಂಕೆಯನ್ನು ದಹಿಸಿ, ರಾವಣನ ಸೈನ್ಯದ ಒಂದು ಭಾಗವನ್ನು ನಾಶ ಮಾಡಿ, ಅನೇಕ ರಾಕ್ಷಸವೀರರನ್ನು ಸಂಹರಿಸಿ, ರಾವಣನಿಗೆ ಭಯವನ್ನುರುಹಿ ವಾಪಸಾಗುತ್ತಾನೆ. ಅವನ ಬಲದ ಸ್ಮರಣೆ ಆಗಬೇಕಾದ ಕಾಲದಲ್ಲಿ ಆದಂತಾಯಿತು.

ಇಲ್ಲದಿದ್ದರೆ ವಾಲಿವಧೆ ಯಾವಾಗಲೋ ಆಗಿಹೋಗಿರಬಹುದಾಗಿತ್ತು. ರಾಮಸುಗ್ರೀವರ ಸಖ್ಯವಾಗುವುದು ಹೇಗೆ ? ಕಥೆಯ ನಡಿಗೆಯೇ ಬೇರೆಯಾಗುತ್ತಿತ್ತು.

**೧೭. ಭೃಗುವಿನಿಂದ ಮಹಾವಿಷ್ಣುವಿಗೆ ಶಾಪ (ಸರ್ಗ ೫೧)**

ಗರ್ಭಿಣಿಯಾಗಿದ್ದ ಸೀತೆಯನ್ನು ಜನಾಪವಾದಕ್ಕೆ ಹೆದರಿ ಶ್ರೀರಾಮನು ಅವಳನ್ನು ವಾಲ್ಮೀಕಿಗಳ ಆಶ್ರಮದ ಬಳಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆದೇಶಿಸುತ್ತಾನೆ. ಅವನು ಹಾಗೇ ಮಾಡಿ ವಾಪಸಾಗುತ್ತಿದ್ದಾಗ ಸುಮಂತ್ರನು ಲಕ್ಷ್ಮಣನಿಗೆ ಭೃಗುವಿನ ಶಾಪದ ಬಗ್ಗೆ ತಿಳಿಸುತ್ತಾನೆ. ದೇವತೆಗಳೂ ಅಸುರರೂ ಯುದ್ಧ ಮಾಡುತ್ತಾ ಅಸುರರು ಪರಾಜಿತರಾಗಿ ಭೃಗುಪತ್ನಿಯನ್ನು ಶರಣು ಹೊಕ್ಕರು. ವಿಷ್ಣುವು ಶರಣು ಕೊಟ್ಟ ಭೃಗುಪತ್ನಿಯ ಮೇಲೆ ಕೋಪಗೊಂಡು ತನ್ನ ಚಕ್ರದಿಂದ ಅವಳ ಶಿರಸ್ಸನ್ನು ಕತ್ತರಿಸಿದನು. ವಧಾರ್ಹಳಲ್ಲದ ತನ್ನ ಪತ್ನಿಯನ್ನು ಕೊಂದನೆಂಬ ಕಾರಣ ಕೋಪಗೊಂಡ ಭೃಗು ಮಹರ್ಷಿಯು ವಿಷ್ಣುವನ್ನು ಮನುಷ್ಯಲೋಕದಲ್ಲಿ ಜನಿಸೆಂದೂ (ಯಸ್ಮಾದವಧ್ಯಾಂ ಮೇ ಪತ್ನೀಮವಧೀಃ... ತಸ್ಮಾತ್ ತ್ವಂ ಮಾನುಷೇ ಲೋಕೇ ಜನಿಷ್ಯಸಿ ಜನಾರ್ದನ –ಶ್ಲೋ. ೧೫) ಆಗ ಬಹಳ ವರ್ಷಗಳ ಕಾಲ ಪತ್ನೀವಿಯೋಗವನ್ನನುಭವಿಸೆಂದೂ (ಪತ್ನೀವಿಯೋಗಂ ಪ್ರಾಪ್ಸ್ಯಸೆ ಬಹುವಾರ್ಷಿಕಂ –ಶ್ಲೋ. ೧೬) ಶಾಪವಿತ್ತನು. ಕೂಡಲೇ ಭಗವಂತನಾದ ವಿಷ್ಣುವನ್ನು ಶಪಿಸಿದೆನಲ್ಲ ಎಂದು ನೊಂದು ಲೋಕಹಿತಕ್ಕಾಗಿ (ಲೋಕಾನಾಂ ಸಂಪ್ರಿಯಾರ್ಥಂ –ಶ್ಲೋ. ೧೮) ತನ್ನ ಶಾಪವನ್ನು ಗ್ರಹಿಸಬೇಕೆಂದೂ ಪ್ರಾರ್ಥಿಸಿದನು.

ವಿಷ್ಣುವು ಹಾಗೇ ಆಗಲೆಂದು ಹೇಳಿ ಮುಂದೆ ರಾಮಾವತಾರದಲ್ಲಿ ದಶರಥನ ಪುತ್ರನಾಗಿ ಅವತರಿಸಿ ಲೋಕಕಂಟಕನಾಗಿದ್ದ ರಾವಣನನ್ನು ಸಂಹರಿಸಿ ಪ್ರಜಾಸಂರಕ್ಷಣೆಯನ್ನು ಮಾಡಿದನು. ಭೃಗುಪತ್ನಿ ಶರಣುಬಂದ ಅಸುರರಿಗೆ ಆಶ್ರಯ ನೀಡಿದ್ದು ತಪ್ಪೇನಲ್ಲ. ಆದರೆ ವಿಷ್ಣುವು ಅಪರಾಧ ಮಾಡದ ಅವಳನ್ನು ಕೊಂದದ್ದು ಪಾಪ. ಅದಕ್ಕಾಗಿ ಭೃಗುಶಾಪ ಕೊಟ್ಟದ್ದು ಸರಿಯೇ. ವಿಷ್ಣುವು ಶಾಪವನ್ನು ಪರಿಗ್ರಹಿಸದಿದ್ದರೆ ಅದು ವ್ಯರ್ಥವಾಗುತ್ತಿತ್ತು. ಹಾಗಾಗಕೂಡದು. ಅದಕ್ಕಾಗಿ ಭೃಗು ವಿಷ್ಣುವನ್ನು ಒಪ್ಪಿಕೊಳ್ಳುವಂತೆ ಪ್ರಾರ್ಥಿಸಬೇಕಾಯಿತು. ನೀಡಿದ ಶಾಪ ವ್ಯರ್ಥವಾಗಬಾರದು ಎನ್ನುವುದನ್ನು ಈ ಪ್ರಸಂಗವು ತಿಳಿಸುತ್ತದೆ.

**೧೮. ನೃಗನೆಂಬ ರಾಜನಿಗೆ ಬಂದ ಶಾಪ (ಸರ್ಗ ೫೩)**

ನೃಗಮಹಾರಾಜನು ಒಮ್ಮೆ ಪುಷ್ಕರತೀರ್ಥದಲ್ಲಿ ಸುವರ್ಣಾಲಂಕೃತ ಕೋಟಿ ಹಸುಗಳನ್ನು ಕರುಗಳ ಸಮೇತ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಆ ವೇಳೆ ಗುಂಪಿನಲ್ಲಿ ಬಂದು ಸೇರಿಹೋಗಿದ್ದ ದರಿದ್ರ ಬ್ರಾಹ್ಮಣನೊಬ್ಬನ ಹಸುವನ್ನೂ ಕರುವಿನೊಡನೆ ತಿಳಿಯದೇ ದಾನ ಮಾಡಿಬಿಟ್ಟನು. ಬ್ರಾಹ್ಮಣನು ತಪ್ಪಿಹೋಗಿದ್ದ ತನ್ನ ಹಸುವನ್ನು ಹುಡುಕುತ್ತಾ ಕೊನೆಗೆ ದಾನ ಸ್ವೀಕರಿಸಿದ್ದವನ ಮನೆಯಲ್ಲಿ ತನ್ನ ಹಸು ಮತ್ತು ಕರುವನ್ನು ಗುರುತಿಸಿ ಅದನ್ನು ಹೆಸರಿನಿಂದ ಕೂಗಿ ಕರೆದನು. ಅವೂ ಸಹ ಪರಿಚಿತವಾದ ತಮ್ಮ ಯಜಮಾನನ ಧ್ವನಿಯನ್ನು ಕೇಳಿ ಅವನ ಬಳಿ ಓಡಿಬರಲು ಅವನು ಅವುಗಳೊಡನೆ

ತನ್ನ ಮನೆಯ ಕಡೆ ಹೊರಟನು. ಇದನ್ನು ನೋಡಿ ದಾನ ಸ್ವೀಕರಿಸಿದ್ದವನು ಅದು ತನ್ನ ಹಸುವೆಂದೂ ಬ್ರಾಹ್ಮಣನು ಅದು ತನ್ನ ಹಸುವೆಂದೂ ವಾದ ಮಾಡುತ್ತಾ ಕೊನೆಗೆ ನ್ಯಾಯಕ್ಕಾಗಿ ರಾಜನಲ್ಲಿಗೆ ಬಂದು ಬಹಳ ದಿನಗಳಾದರೂ ರಾಜನ ದರ್ಶನವಾಗದೇ ಹೋಯಿತು. ವಿವಾದ ನಿರ್ಣಯ ಮಾಡಲು ರಾಜನು ಕಾಣಿಸಿಕೊಳ್ಳಲಿಲ್ಲವೆಂದು ಅವರಿಬ್ಬರೂ ಕೋಪದಿಂದ, ನೀನು ಎಲ್ಲರ ದೃಷ್ಟಿಯಿಂದ ದೂರನಾಗಿ ಸಹಸ್ರಾರು ವರ್ಷಗಳು ಓತೀಕೇತನ ರೂಪವನ್ನು ಹೊಂದಿ ಕಲ್ಲಿನ ಸಂದಿಗಳಲ್ಲಿ ವಾಸವಾಗಿರೆಂದು ಶಾಪವಿತ್ತು (ಅದೃಶ್ಯಃ ಸರ್ವಭೂತಾನಾಂ ಕೃಕಲಾಸೋ ಭವಿಷ್ಯಸಿ –ಶ್ಲೋ. ೧೯), ಮುಂದೆ ದ್ವಾಪರಯುಗಾಂತ್ಯದಲ್ಲಿ ಅವತರಿಸುವ ವಾಸುದೇವನಿಂದ ಶಾಪವಿಮೋಚನೆಯಾಗುವುದೆಂದೂ ಹೇಳಿ ಬಡಕಲಾಗಿದ್ದ ವಿವಾದಗ್ರಸ್ತವಾದ ಆ ಹಸು ಮತ್ತು ಕರುವನ್ನು ಬೇರೊಬ್ಬ ಬ್ರಾಹ್ಮಣನಿಗೆ ಇಬ್ಬರೂ ಸೇರಿ ದಾನ ಮಾಡಿದರು. ನ್ಯಾಯ ಕೊಡದ ರಾಜನು ಪಾಪ ಮಾಡಿದವನಾಗುತ್ತಾನೆ. ಅದಕ್ಕೆ ತಕ್ಕ ದಂಡವನ್ನು ಅನುಭವಿಸಬೇಕಾಗುತ್ತದೆಂದು ರಾಜನ ಕರ್ತವ್ಯವನ್ನು ತಿಳಿಸುತ್ತಾ ರಾಮನು ಇದನ್ನು ಲಕ್ಷ್ಮಣನಿಗೆ ವಿಸ್ತರಿಸಿದನು (ಕಾರ್ಯಾರ್ಥಿನಾಂ ವಿಮರ್ದೋ ಹಿ ರಾಜ್ಞಾಂ ದೋಷಾಯ ಕಲ್ಪತೇ –ಶ್ಲೋ. ೨೫).

**೧೮. ನಿಮಿ ಮತ್ತು ವಸಿಷ್ಠರು ಪರಸ್ಪರ ಪಡೆದ ಶಾಪ (ಸರ್ಗ ೫೫)**

ಹಿಂದೆ ಇಕ್ಷ್ವಾಕು ಮಹಾರಾಜನ ಹನ್ನೆರಡನೆಯ ಮಗನಾದ ನಿಮಿಯು ಗೌತಮಮುನಿಯ ಆಶ್ರಮದ ಸಮೀಪದಲ್ಲೇ ಒಂದು ನಗರವನ್ನು ನಿರ್ಮಿಸಿ ಅದಕ್ಕೆ 'ವೈಜಯಂತ'ವೆಂದು ಹೆಸರಿಟ್ಟನು. ಅವನಿಗೆ ದೀರ್ಘಕಾಲಿಕ ಯಜ್ಞವೊಂದನ್ನಾಚರಿಸುವ ಆಸೆಯಾಗಿ ವಸಿಷ್ಠರನ್ನು ಯಜ್ಞ ಮಾಡಿಸಲು ವರಣ ಮಾಡಿದನು. ಆದರೆ ಆ ವೇಳೆಗೇ ಇಂದ್ರನಾಚರಿಸುತ್ತಿದ್ದ ಯಜ್ಞಕ್ಕೆ ಒಪ್ಪಿಕೊಂಡಿದ್ದರಿಂದ ವಸಿಷ್ಠರು ಅದಾದ ನಂತರ ಬಂದು ನೆರವೇರಿಸುವುದಾಗಿ ಹೇಳಿ ಪ್ರತೀಕ್ಷಿಸುವಂತೆ ತಿಳಿಸಿದರು. ಆದರೆ ನಿಮಿಯು ನಿರೀಕ್ಷಿಸದೆ, ಗೌತಮರನ್ನು ಆಸ್ಥಾನಕ್ಕೆ ನಿಯುಕ್ತಿ ಮಾಡಿಕೊಂಡು, ಅತ್ರಿ, ಅಂಗಿರಸ ಮತ್ತು ಭೃಗು ಇವರ ಸಹಾಯದಿಂದ ಐದು ಸಹಸ್ರ ವರ್ಷಗಳ ಕಾಲದ ಯಜ್ಞವನ್ನಾಚರಿಸಿದನು. ವಸಿಷ್ಠರು ವಾಪಸಾದ ನಂತರ ವಿಷಯ ತಿಳಿದು ಕೋಪದಿಂದಲೇ ರಾಜನನ್ನು ನೋಡಲು ಅರಮನೆಗೆ ಹೋದರು. ಆ ಸಮಯದಲ್ಲಿ ರಾಜನು ನಿದ್ರಿಸುತ್ತಿದ್ದನಾದ ಕಾರಣ ದರ್ಶನ ಸಾಧ್ಯವಾಗಲಿಲ್ಲ. ಇದರಿಂದಾಗಿ ವಸಿಷ್ಠರು, ಅವನ ಶರೀರವು ಚೈತನ್ಯಹೀನವಾಗಿ ಬಿದ್ದುಹೋಗಲೆಂದು ಶಾಪವಿತ್ತರು. ನಿದ್ದೆಯಿಂದ ಎಚ್ಚರವಾದ ನಂತರ ಈ ವಿಷಯ ತಿಳಿದ ರಾಜನು ವಸಿಷ್ಠರು ಅಕಾರಣವಾಗಿ ತನ್ನನ್ನು ಶಪಿಸಿದರೆಂದು ತಾನೂ ಸಹ ಪ್ರತಿಯಾಗಿ ಅದೇ ರೀತಿ ಅವರನ್ನು ಶಪಿಸಿದನು (ಚೇತನೇನ ವಿನಾ ಕೃತಃ...ದೇಹಃ –ಶ್ಲೋ. ೧೭).

ಶರೀರವಿಲ್ಲದೆ ಯಾವ ಅನುಷ್ಠಾನವೂ ಸಾಧ್ಯವಿಲ್ಲವಾಗಿ ವಸಿಷ್ಠರು ತಂದೆಯಾದ ಬ್ರಹ್ಮದೇವನ ಬಳಿ ಹೋಗಿ ಇನ್ನೊಂದು ಶರೀರಕ್ಕಾಗಿ ಪ್ರಾರ್ಥಿಸಲು, "ಮಿತ್ರ ಮತ್ತು

ವರುಣರ ವೀರ್ಯದಲ್ಲಿ ಪ್ರವೇಶಿಸಿ, ಅಯೋನಿಜನಾಗಿ ಮತ್ತೆ ಶರೀರವನ್ನು ಪಡೆ" ಎಂದನು. ಆಕಾಲದಲ್ಲಿ ವರುಣನ ಕಾರ್ಯದಲ್ಲಿ ಮಿತ್ರನೂ ಸಹಾಯಕನಾಗಿದ್ದನು. ಒಮ್ಮೆ ಆ ಮಾರ್ಗದಲ್ಲಿ ಹೋಗುತ್ತಿರುವ ಊರ್ವಶಿಯನ್ನು ಕಂಡ ವರುಣನು ಅವಳಲ್ಲಿ ಸಂಭೋಗವನ್ನಿಚ್ಛಿಸಿದನು. ಅವಳಿಗೂ ಅವನಲ್ಲಿಷ್ಟವಿತ್ತು. ಆದರೆ ಅವಳನ್ನು ಮಿತ್ರನು ಆಗಲೇ ವರಿಸಿದ್ದು ಅವನಲ್ಲಿಗೆ ಹೋಗುತ್ತಿದ್ದ ಊರ್ವಶಿಯು ವರುಣನೊಡನೆ ರತಿಕ್ರೀಡೆಗೆ ಅನುಮತಿಸದೇ ಹೋದಳು. ಆದ್ದರಿಂದ ವರುಣನು ಸ್ಖಲನವಾದ ವೀರ್ಯವನ್ನು ಒಂದು ಸ್ಥಾಲಿಯಲ್ಲಿಟ್ಟನು. ಊರ್ವಶಿಯು ಮಿತ್ರನನ್ನು ತಲುಪಿದಾಗ ಈ ವಿಷಯ ತಿಳಿದ ಮಿತ್ರನು ತಾನು ವರಿಸಿದ ಮೇಲೆ ವರುಣನನ್ನು ಪತಿಯಾಗಿ ವರಿಸಿದಳೆಂದು ಕೋಪಗೊಂಡು, "ಕೆಲವು ಕಾಲ ಮನುಷ್ಯಲೋಕದಲ್ಲಿ ವಾಸವಾಗಿರೆಂದೂ ಆಗ ಕಾಶೀರಾಜನಾದ ಪುರೂರವನನ್ನು ಪತಿಯಾಗಿ ವರಿಸೆಂದೂ" ಶಾಪವಿತ್ತನು. ಊರ್ವಶಿಯು ಬರುವುದು ತಡವಾದ್ದರಿಂದ ಮಧ್ಯೆ ವರುಣನನ್ನು ವರಿಸಿದಳೆಂದೂ ಮಿತ್ರನು ವರುಣನಿಗೂ ಮೊದಲೇ ಕುಂಭದಲ್ಲಿ ತನ್ನ ವೀರ್ಯವನ್ನು ಸ್ಥಾಪಿಸಿದ್ದನು. ಅದು ತಿಳಿಯದೇ ವರುಣನೂ ಅದೇ ಕುಂಭದಲ್ಲಿ ತನ್ನ ಸ್ಖಲಿಸಿದ ವೀರ್ಯವನ್ನು ಸ್ಥಾಪಿಸಿದನು. ಆ ಕುಂಭದಿಂದ ಮೊದಲಿಗೆ ಜನಿಸಿದ ಅಗಸ್ತ್ಯನು ತಾನು ಮಿತ್ರನ ಮಗನಲ್ಲ ಎಂದು ಹೇಳುತ್ತಾ ಹೊರಟುಹೋದನು. ನಂತರ ಅದರಿಂದ ವಸಿಷ್ಠರು ಜನಿಸಿದರು. ಅವರು ಮಿತ್ರಾವರುಣರಿಬ್ಬರ ವೀರ್ಯದ ತೇಜಸ್ಸಿನಿಂದಲೂ ಕೂಡಿದವರಾಗಿದ್ದರು. ಅವರನ್ನು ಇಕ್ಷ್ವಾಕು ಮಹಾರಾಜನು ತನ್ನ ಕುಲಪುರೋಹಿತರನ್ನಾಗಿ ಮಾಡಿಕೊಂಡನು.

ನಿಮಿಯ ಶರೀರವನ್ನು ರಕ್ಷಿಸಿಕೊಂಡಿದ್ದ ಭೃಗು ಮೊದಲಾದ ಮಹರ್ಷಿಗಳು ರಾಜನನ್ನು ಬದುಕಿಸಲು ಒಂದು ಯಜ್ಞವನ್ನು ಮಾಡಿ ದೇವತೆಗಳು ಪ್ರಸನ್ನರಾಗುವಂತೆ ಮಾಡಿದರು. ಯಾವ ಶರೀರವನ್ನಿಚ್ಛಿಸುವೆಯೆಂದು ದೇವತೆಗಳು ನಿಮಿಯ ಚೇತನವನ್ನು ಕೇಳಲು, ತಾನು ಎಲ್ಲ ಪ್ರಾಣಿಗಳ ಕಣ್ಣಿನಲ್ಲಿ ವಾಯುರೂಪದಲ್ಲಿರುವಂತೆ ಕರುಣಿಸಿರೆಂದು ವರವನ್ನು ಬೇಡಿದನು. ದೇವತೆಗಳು ಹಾಗೆಯೇ ಆಗಲೆಂದರು. ಋತ್ವಿಜರು ಮುಂದಕ್ಕೆ ರಾಜನಿಲ್ಲದಂತಾಗದಾಗ, ನಿಮಿಯ ಶರೀರವನ್ನು ಅರಣಿಯಲ್ಲಿ ಮಥಿಸಲು ಅದರಿಂದ ಪುತ್ರನೊಬ್ಬನು ಜನಿಸಿದನು. ಅವನೇ ಮಿಥಿ; ಅವನೇ ಜನಕರಾಜ ಮತ್ತು ಶರೀರದ ಸಂಬಂಧವಿಲ್ಲದೇ ಜನಿಸಿದ್ದರಿಂದ ವೈದೇಹನೆನಿಸಿದನು. ರಾಜನನ್ನು ನೋಡಲು ಬಂದಾಗ ಅವನು ದೊರಕದಿದ್ದದ್ದು ಅಪರಾಧ. ಆದ್ದರಿಂದ ವಸಿಷ್ಠರು ಶಪಿಸಿದರು. ಕೋಪವನ್ನು ನಿಯಂತ್ರಿಸಲಾಗದೇ ಕುಲಗುರುಗಳನ್ನು ಪ್ರತಿಯಾಗಿ ಶಪಿಸಿದ್ದು ನಿಮಿಯ ತಪ್ಪು. ಈ ಪ್ರಸಂಗವೂ ಸಹ ನ್ಯಾಯಕ್ಕಾಗಿ ಬಂದಾಗ ರಾಜನು ದರ್ಶನ ನೀಡಬೇಕಾದ್ದು ಅವನ ಕರ್ತವ್ಯವೆನ್ನುವುದನ್ನು ತಿಳಿಯಪಡಿಸುತ್ತದೆ. ಈಗಿನ ಪ್ರಜಾಪಾಲಕರು ಪ್ರಜೆಗಳ ನ್ಯಾಯ ತೀರ್ಮಾನಕ್ಕೆ ದೊರಕುವುದೂ ಇಲ್ಲ. ಅಲ್ಲಿ ನ್ಯಾಯವೂ ಸಿಗುವುದಿಲ್ಲ. ಅವರಿಗೆ ಪ್ರಜೆಗಳ ಶಾಪದ ಭಯವೂ ಇಲ್ಲ.

## ೧೯. ಯಯಾತಿಗೆ ಬಂದ ಶಾಪ (ಸರ್ಗ ೫೮)

ನಹುಷನ ಮಗ ಯಯಾತಿಯು ದೈತ್ಯರಾಜ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನೂ, ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನೂ ವಿವಾಹವಾಗಿದ್ದನು. ಆದರೆ ಅವನಿಗೆ ಶರ್ಮಿಷ್ಠೆ ಅತಿ ಹೆಚ್ಚಿನ ಪ್ರೀತಿ ಪಾತ್ರಳಾಗಿದ್ದಳು. ಶರ್ಮಿಷ್ಠೆಯಲ್ಲಿ ಪುರು, ದೇವಯಾನಿಯಲ್ಲಿ ಯದು ಎಂದು ಅವನಿಗೆ ಇಬ್ಬರು ಪುತ್ರರಾದರು. ರಾಜನಿಗೆ ಪುರುವನ್ನು ಕಂಡರೆ ಹೆಚ್ಚು ಇಷ್ಟವಾಗಿದ್ದರಿಂದ, ಬೇಸರಿಸಿದ ಯದು ಮರಣಿಸಲಿಚ್ಛಿಸುತ್ತಾನೆ. ಆಗ ದೇವಯಾನಿಯು ತಂದೆಯನ್ನು ಸ್ಮರಿಸಲು ಶುಕ್ರಾಚಾರ್ಯರು ಬಂದು ವಿಷಯವೆಲ್ಲವನ್ನೂ ತಿಳಿದು ತನ್ನ ಮಗಳನ್ನು ಪ್ರೀತಿಯಿಂದ ಕಾಣದೇ ಅವಮಾನಿಸಿದನೆಂದು ಯಯಾತಿಗೆ ಯೌವನವು ಹೋಗಿ ಮುಪ್ಪು ಪ್ರಾಪ್ತವಾಗಿ ದುಃಖ ಪಡಲೆಂದು ಶಪಿಸಿದನು (ವಯಸಾ ಜರಯಾ ಜೀರ್ಣಃ ಶೈಥಿಲ್ಯಮುಪಯಾಸ್ಯಸಿ –ಶ್ಲೋ. ೨೫). ಯಯಾತಿಗೆ ಇನ್ನೂ ಕಾಮದ ತೃಪ್ತಿಯಾಗಿರಲಿಲ್ಲ, ಹಾಗಾಗಿ ಅವನು ತನ್ನ ಮುಪ್ಪನ್ನು ಅವನ ಯೌವನದಿಂದ ಬದಲಾಯಿಸಿಕೊಳ್ಳೆಂದು ಯದುವನ್ನು ಪ್ರಾರ್ಥಿಸಲು, ಅವನು "ಯಾರನ್ನು ನೀನು ಹೆಚ್ಚು ಪ್ರೀತಿಸುವೆಯೋ ಅವನನ್ನು ಕೇಳು" ಎಂದು ತಂದೆಯ ಪ್ರಾರ್ಥನೆಯನ್ನು ನಿರಾಕರಿಸಿದನು. ನಂತರ ಪುರುವನ್ನು ಪ್ರಾರ್ಥಿಸಲು ಅವನು ಸಂತೋಷದಿಂದ ತಂದೆಗೆ ತನ್ನ ಯೌವನವನ್ನು ಕೊಟ್ಟು ಅವನಿಷ್ಟಪಟ್ಟಷ್ಟು ಕಾಲದವರೆಗೆ ಕಾಮಭೋಗಗಳನ್ನನು ಭವಿಸುವಂತೆ ಅನುಕೂಲ ಮಾಡಿದನು. ಇದರಿಂದ ತುಷ್ಟನಾದ ಯಯಾತಿಯು ಪುರುವಿಗೆ ರಾಜ್ಯಾಭಿಷೇಕವನ್ನು ಮಾಡಿ ತಪಸ್ಸು ಮಾಡಲು ಕಾಡಿಗೆ ತೆರಳಿದನು. ತನ್ನ ಮಾತನ್ನು ಉಲ್ಲಂಘಿಸಿದ್ದಕ್ಕಾಗಿ, "ಯಾತುಧಾನರೆಂಬ ರಾಕ್ಷಸರನ್ನು ಪಡೆ" ಎಂದು ಪುರುವನ್ನು ಶಪಿಸಿದನು. ಕಾಮಕ್ಕೆ ಕೊನೆಯಿಲ್ಲ. ಅನುಭವಿಸಿ ತೃಪ್ತಿ ಹೊಂದುವುದು ಸಾಧ್ಯವಿಲ್ಲ. ಅದು ಇನ್ನೂ ಹೆಚ್ಚಿನ ಆಸೆಯುಂಟು ಮಾಡುತ್ತದೆ (ನ ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ). ಅದಕ್ಕೇ ಒಬ್ಬ ಋಷಿಯು ಕಾಮವನ್ನು ಅಪಾರವಾದ ಸಮುದ್ರಕ್ಕೆ ಹೋಲಿಸಿದ್ದಾನೆ (ಸಮುದ್ರ ಇವ ಹಿ ಕಾಮಃ/ನೈವ ಹಿ ಕಾಮಸ್ಯಾಂತೋಸ್ತಿ, ನ ಸಮುದ್ರಸ್ಯ). ಶುಕ್ರಾಚಾರ್ಯರು ಕೊಟ್ಟ ಶಾಪವನ್ನು ಯಯಾತಿಯು ಪ್ರತಿಯಾಗಿ ಏನೂ ಹೇಳದೆ ಅನುಭವಿಸಿದನು. ಆದರೆ ವಸಿಷ್ಠರು ಕೊಟ್ಟ ಶಾಪವನ್ನು ಸಹಿಸಲಾರದೇ, ನಿಮಿಯು ಪ್ರತಿಶಾಪವಿತ್ತನು. ತಂದೆಯ ಪ್ರಾರ್ಥನೆಯನ್ನು ತಿರಸ್ಕರಿಸಿದ ಯದುವಿಗೆ ತಕ್ಕ ದಂಡನೆಯಾಯಿತು.

## ೨೦. ಇಕ್ಷ್ವಾಕುಪುತ್ರ ದಂಡನಿಗೆ ಬಂದ ಶಾಪ (ಸರ್ಗ ೮೧)

ಯಜ್ಞ, ಯಾಗ, ದಾನ ಮುಂತಾದ ಉತ್ತಮ ಕಾರ್ಯಗಳನ್ನು ಮಾಡುತ್ತಾ, ಇಕ್ಷ್ವಾಕು ಮಹಾರಾಜನು ನೂರು ಜನ ಪುತ್ರರನ್ನು ಪಡೆದನು. ಅವರಲ್ಲಿ ಕಡೆಯವನೇ ದಂಡನೆಂಬುವನು. ಅವನು ಮೂಢನೂ, ವಿದ್ಯಾಹೀನನೂ ಆಗಿದ್ದನು. ರಾಜನು ಅವನಿಗೆ ವಿಂಧ್ಯ ಮತ್ತು ಶೈವಲ ಪರ್ವತಗಳ ನಡುವಣ ಬೆಂಗಾಡಾದ ಪ್ರದೇಶವನ್ನು ರಾಜ್ಯವಾಳಿಕೊಂಡಿರಲು ಕೊಟ್ಟನು. ದಂಡನು ಅಲ್ಲಿಯೇ ಒಂದು ಸುಂದರ ನಗರವನ್ನು

ನಿರ್ಮಿಸಿ ಅದಕ್ಕೆ "ಮಧುಮಂತ" ವೆಂದು ಹೆಸರಿಟ್ಟು, ಶುಕ್ರಾಚಾರ್ಯರನ್ನು ಪುರೋಹಿತ ರನ್ನಾಗಿ ಮಾಡಿಕೊಂಡು ಉತ್ತಮ ರಾಜ್ಯಭಾರ ಮಾಡುತ್ತಿದ್ದನು.

ಒಂದು ಸಲ ಅವನು ಶುಕ್ರಾಚಾರ್ಯರಿಲ್ಲದಿದ್ದಾಗ ಅವರ ಆಶ್ರಮಕ್ಕೆ ಹೋಗಿದ್ದನು. ಆಗ ಅಲ್ಲಿ ಅವರ ಜ್ಯೇಷ್ಠಪುತ್ರಿ ಅರಜಾ ಎಂಬುವಳನ್ನು ಕಂಡು ಕಾಮಪೀಡಿತನಾಗಿ ಅವಳನ್ನು ಬಲಾತ್ಕಾರದಿಂದ ಅನುಭವಿಸಲೆತ್ನಿಸಿದನು. ತಂದೆಯನ್ನು ಪ್ರಾರ್ಥಿಸಿ ಅವರ ಅನುಮತಿ ಪಡೆದು ತನ್ನನ್ನು ಪಡೆದುಕೊಳ್ಳಬಹುದೆಂದೂ ಅದು ತನಗೂ ಇಷ್ಟವೆಂದೂ ಅವಳು ಎಷ್ಟು ಹೇಳಿದರೂ ಕೇಳಿಸಿಕೊಳ್ಳದೇ, ಅವಳನ್ನು ಮನಬಂದಂತೆ ಅನುಭವಿಸಿ ತನ್ನ ರಾಜ್ಯಕ್ಕೆ ವಾಪಸಾದನು. ಸ್ವಲ್ಪ ಹೊತ್ತಿನ ಮೇಲೆ ಆಶ್ರಮಕ್ಕೆ ಶಿಷ್ಯರೊಂದಿಗೆ ವಾಪಸಾದ ಶುಕ್ರಾಚಾರ್ಯರು ಹಸಿವೆಯಿಂದ ಮಗಳನ್ನು ಕಾಣದೆ ಅವಳನ್ನು ಹುಡುಕಲು ಶಿಷ್ಯರಿಗೆ ಹೇಳಿದರು. ಆಶ್ರಮದ ಹಾಗೂ ಊಟ ಉಪಚಾರಗಳ ಭಾರ ಅವಳದಾಗಿತ್ತು. ವಿಷಯವು ತಿಳಿದ ಮೇಲೆ ಬಲಾತ್ಕಾರದಿಂದ ತನ್ನ ಮಗಳನ್ನು ಅನುಭವಿಸಿದ ಅಪರಾಧಕ್ಕಾಗಿ. ದಂಡನನ್ನು ಏಳು ದಿವಸಗಳಲ್ಲಿ ತನ್ನ ಪ್ರಜೆಗಳೆಲ್ಲರೊಡನೆ ನಷ್ಟವಾಗಲೆಂದೂ ನೂರು ಯೋಜನದವರೆಗಿನ ಅವನ ರಾಜ್ಯವೆಲ್ಲವೂ ಧೂಳಿಯಿಂದ ಕೂಡಿದ ಮಳೆಯಿಂದ ನಾಶವಾಲೆಂದೂ ಶಪಿಸಿ (ಸಪ್ತರಾತ್ರೇಣ ರಾಜಾಸೌ ಸಪುತ್ರಬಲವಾಹನಃ/ ಪಾಪಕರ್ಮಸಮಾಚಾರೋ ವಧಂ ಪ್ರಾಪ್ಸ್ಯತಿ ದುರ್ಮತಿಃ –ಶ್ಲೋ. ೭) ಆಶ್ರಮವನ್ನು ತ್ಯಜಿಸಿ ಶಿಷ್ಯರೊಡನೆ ಅನ್ಯತ್ರ ವಾಸಿಸಲು ಹೋದರು. ಆಶ್ರಮಕ್ಕೆ ಸೇರಿದಂತೆ ಯೋಜನಪರ್ಯಂತವಾಗಿದ್ದ ಸರಸ್ಸಿನಲ್ಲಿ ದೊರಕುವ ವಸ್ತುಗಳಿಂದ ಜೀವಿಸಿರಲು ಮಗಳಿಗೆ ಆದೇಶಿಸಿದರು. ಹಾಗೂ ಏಳು ದಿನಗಳವರೆಗೆ ಆಗುವ ಧೂಳಿನ ಮಳೆಯಿಂದ ಅವಳೊಡನೆ ಇರುವ ಆವುದೇ ಪ್ರಾಣಿಗೆ ಅಪಾಯವಾಗುವುದಿಲ್ಲವೆಂದೂ ವರವಿತ್ತರು. ಶುಕ್ರಾಚಾರ್ಯರ ಶಾಪದಂತೆಯೇ ಆ ಪ್ರದೇಶವೆಲ್ಲಾ ಅರಣ್ಯವಾಗಿ ಮುಂದೆ ಅದು ದಂಡಕಾರಣ್ಯವೆಂದು ಪ್ರಸಿದ್ಧವಾಯಿತು (ತತಃ ಪ್ರಭೃತಿ ಕಾಕುತ್ಸ್ಥ ದಂಡಕಾರಣ್ಯಮುಚ್ಯತೇ –ಶ್ಲೋ. ೧೯). ರಾಜನಾದವನು ಹೀಗೆ ವಿವೇಕವನ್ನು ಕಳೆದುಕೊಳ್ಳಬಾರದು. ಅವನ ಕಾಮದಿಂದಾಗಿ ಅವನು ನಷ್ಟವಾಗುವುದಲ್ಲದೆ ಅವನ ಪ್ರಜೆಗಳೆಲ್ಲರೂ ನಾಶ ಹೊಂದಿದರು (ಯಥಾ ರಾಜಾ ತಥಾ ಪ್ರಜಾಃ). ಅರಜೆಯು ಸಹ ತನ್ನದೇನೂ ತಪ್ಪಿಲ್ಲದಿದ್ದರೂ ದುಃಖಕ್ಕೀಡಾದಳು. ಒಬ್ಬಳೇ ಆಶ್ರಮದಲ್ಲಿ ಉಳಿದಳು (ಇಹೈವ ವಸ ದುರ್ಮೇಧೇ –ಶ್ಲೋ. ೧೩). ರಕ್ಷಣೆ ಕೊಡಬೇಕಾದ ರಾಜನೇ ಶಿಕ್ಷಾರ್ಹನಾದರೆ ಏನು ಗತಿ ? ಮೇಲಾಗಿ ಗುರುಪುತ್ರಿ. ಕಾಮಾತುರರಿಗೆ ಬುದ್ಧಿ ನಷ್ಟವಾಗುತ್ತದೆಂಬುದಕ್ಕೆ ಇನ್ನೊಂದು ಉದಾಹರಣೆ.

### ೨೧. ಲಕ್ಷ್ಮಣನಿಗೆ ದುರ್ವಾಸರ ಶಾಪದ ಭಯ (ಸರ್ಗ ೧೦೫)

ಶ್ರೀರಾಮನು ಅವತರಿಸಿ ಸಾಧಿಸಬೇಕಾದ್ದನ್ನು ಮುಗಿಸಿ ತಾನು ವಚನ ಕೊಟ್ಟಿದ್ದಷ್ಟು ಕಾಲ ರಾಜ್ಯಭಾರ ಮಾಡುತ್ತಾ ಇರಲು ಪಿತಾಮಹನ ಆದೇಶದಂತೆ ಅವನನ್ನು ವೈಕುಂಠಕ್ಕೆ ಬರಮಾಡಿಕೊಳ್ಳಲು ಆಲೋಚಿಸಿ ದೇವತೆಗಳು ಅದನ್ನು ಸ್ಮರಣೆಗೆ ತರಲು ಅವನೇ

ಮೊದಲಿಗೆ ಸೃಷ್ಟಿಸಿದ್ದ ಕಾಲನನ್ನು ದೂತನಾಗಿ ಅವನ ಬಳಿ ಕಳುಹಿಸುತ್ತಾರೆ. ಅವನು
ತಾಪಸವೇಷದಿಂದ ಬಂದು ರಾಮನಿಗೆ ಎಲ್ಲವನ್ನೂ ತಿಳಿಸುವ ಮೊದಲು ತಾವಾಡುವ
ಮಾತುಗಳು ಯಾರ ಕಿವಿಗೂ ಬೀಳಬಾರದೆಂದೂ, ತಮ್ಮನ್ನು ಯಾರೂ
ನೋಡಬಾರದೆಂದೂ ಪ್ರಾರ್ಥಿಸಿಕೊಳ್ಳುತ್ತಾನೆ. ಹಾಗೂ ಇದಕ್ಕೆ ತಪ್ಪಿದವರು
ವಧಾರ್ಹರಾಗುತ್ತಾರೆನ್ನುತ್ತಾನೆ. (ಯಃ ಶೃಣೋತಿ ನಿರೀಕ್ಷೇದ್ ವಾ ಸ ವಧ್ಯೋ
ಭವಿತಾ ತವ –ಶ್ಲೋ. ೧೦೩.೧೩). ರಾಮನು ಹಾಗೇ ಆಗಲೆಂದು ಒಪ್ಪಿಕೊಂಡು,
ಲಕ್ಷ್ಮಣನನ್ನು ಕರೆದು, ದ್ವಾರಪಾಲಕನನ್ನು ಕಳುಹಿಸಿ ಅವನೇ ಬಾಗಿಲಲ್ಲಿ ಕಾವಲಿರಬೇಕೆಂದೂ,
ಖಂಡಿತವಾಗಿ ಯಾರನ್ನೂ ಒಳಗೆ ಬಿಡಬಾರದೆಂದೂ ಆದೇಶಿಸಿದ್ದನು. ಸ್ವಲ್ಪ ಹೊತ್ತಿನಲ್ಲೇ
ಅವರಿಬ್ಬರೂ ಇನ್ನೂ ಮಾತನಾಡುತ್ತಿರುವಾಗಲೇ ದುರ್ವಾಸರು ಬಂದು ತಾನು
ರಾಮನನ್ನು ಆ ಕ್ಷಣವೇ ಕಾಣಬೇಕೆನ್ನುತ್ತಾರೆ. ರಾಮನು ಬೇರೊಂದು ಕಾರ್ಯದಲ್ಲಿ
ಮಗ್ನನಾಗಿರುವನೆಂದೂ ಸ್ವಲ್ಪ ನಿರೀಕ್ಷಣೆ ಮಾಡಬೇಕೆಂದೂ ಲಕ್ಷ್ಮಣನು ಅವರನ್ನು
(ವ್ಯಗ್ರೋ ಹಿ ರಾಘವೋ ಬ್ರಹ್ಮನ್ ಮುಹೂರ್ತಂ ಪರಿಪಾಲ್ಯತಾಮ್ –ಶ್ಲೋ. ೧೦೫.೪)
ಪ್ರಾರ್ಥಿಸುತ್ತಾನೆ. ಆದರೆ ದುರ್ವಾಸಮುನಿಯು ಕೂಡಲೇ ರಾಮನನ್ನು ತಾನು
ನೋಡಲಾಗದಿದ್ದರೆ, ಅಯೋಧ್ಯೆಯನ್ನೂ ರಾಮನನ್ನೂ ಭರತನ ಹಾಗೂ ಲಕ್ಷ್ಮಣನ
ಸಂತತಿಯನ್ನೂ ನಾಶ ಮಾಡಿಬಿಡುವುದಾಗಿ ಶಾಪದ ಭಯವನ್ನು ತೋರಿಸುತ್ತಾನೆ
(ವಿಷಯಂ ತ್ವಾಂ ಪುರಂ ಚೈವ ಶಪಿಷ್ಯೇ ರಾಘವಂ ತಥಾ –ಶ್ಲೋ. ೬). ಅವರ ಶಾಪಕ್ಕೆ
ಹೆದರಿ ಲಕ್ಷ್ಮಣನು ರಾಮನ ಮಾತನ್ನು ಮೀರಿ ಒಳಗೆ ಹೋಗಿ ರಾಮನಿಗೆ ಇದನ್ನು
ತಿಳಿಸುತ್ತಾನೆ.

ದುರ್ವಾಸರು ಸಹಸ್ರ ವರ್ಷಗಳ ಉಪವಾಸ ಮುಗಿಸಿ ಅಂದು ಭೋಜನವನ್ನು
ಅಪೇಕ್ಷಿಸುತ್ತಾ ಅಲ್ಲಿ ಬಂದಿದ್ದರು. ರಾಮನು ಅವರಿಷ್ಟದಂತೆ ಅವರಿಗೆ ಭೋಜನವಿತ್ತು
ತೃಪ್ತಿಪಡಿಸಿ ಕಳುಹಿಸುತ್ತಾನೆ. ನಂತರವೇ ಕಾಲನ ಮಾತುಗಳು ಸ್ಮರಣೆಗೆ ಬಂದು
ತಮ್ಮನ ವಿಯೋಗವನ್ನು ನೆನೆದು ದುಃಖಿಸುತ್ತಾನೆ. ಲಕ್ಷ್ಮಣನು ಹಿಂದೆಯೂ
ಅರಣ್ಯವಾಸದಲ್ಲಿ ಇದೇ ರೀತಿಯ ತಪ್ಪು ಮಾಡಿದ್ದನು. ಸೀತೆಯ ರಕ್ಷಣೆಗೆ ಅವನನ್ನು
ನಿಯಮಿಸಿ ಜಿಂಕೆಯ ವೇಷದಲ್ಲಿ ಬಂದಿದ್ದ ಮಾರೀಚನ ಹಿಂದೆ ರಾಮನು ಹೋಗುತ್ತಾ,
ಸೀತೆಯನ್ನು ಬಿಟ್ಟು ಯಾವುದೇ ಸಂದರ್ಭದಲ್ಲೂ ಬರಬಾರದೆಂದು ಆದೇಶಿಸಿದ್ದನು.
ಆದರೆ ಮಾರೀಚನು ಸಾಯುವಾಗ ರಾಮನ ಧ್ವನಿಯನ್ನು ಅನುಕರಿಸುತ್ತಾ ಸಹಾಯಕ್ಕಾಗಿ
ಕರೆದನು. ಲಕ್ಷ್ಮಣನು ಹೋಗದೇ ಅಲ್ಲಿಯೇ ನಿಂತಿದ್ದನ್ನು ಕಂಡ ಸೀತೆಯು
ಬಿರುನುಡಿಗಳನ್ನಾಡುತ್ತಾಳೆ. ರಾಮನಿಗೇನೂ ಭಯವಿಲ್ಲವೆಂದು ಎಷ್ಟು ಹೇಳಿದರೂ
ಸೀತೆ ಕೇಳಿಸಿಕೊಳ್ಳಲಿಲ್ಲ. ಆಗ ಅವಳ ಮಾತಿಗೆ ಹೆದರಿದ ಅವನು ರಾಮನನ್ನು ಅರಸುತ್ತಾ
ಹೋಗಿದ್ದನು. ಈಗಲೂ ರಾಮನ ಮಾತು ಮೀರಿ, ದುರ್ವಾಸರ ಶಾಪಕ್ಕೆ ಹೆದರಿ
ಒಳಕ್ಕೆ ಹೋಗಿ ಅವರ ಬರುವನ್ನು ತಿಳಿಸುತ್ತಾನೆ. ಧರ್ಮಸ್ನೇಹಗಳ ನಡುವೆ ಅವನಿಗೆ
ಧರ್ಮವನ್ನು ನಿಶ್ಚಯಿಸುವುದು ಕಷ್ಟವಾಯಿತು. ಧರ್ಮವನ್ನವಲಂಬಿಸಿದ್ದರೆ, ಎರಡು

ಸಲವೂ ಆಗುವಂತಹ ನಷ್ಟವನ್ನು ರಾಮನು ಸರಿಪಡಿಸಲು ಸಮರ್ಥನಾಗಿದ್ದನೆಂಬುದು ಲಕ್ಷ್ಮಣನಿಗೆ ತಿಳಿಯದೇ ಹೋಯಿತು.

ಹೀಗೆ ರಾಮಾಯಣದುದ್ದಕ್ಕೂ ಶಾಪಗಳ ಸುರಿಮಳೆ. ಇಲ್ಲಿ ಋಷಿಮುನಿಗಳು ಕೊಟ್ಟ ಶಾಪಗಳೇ ಹೆಚ್ಚು. ಅನುಗ್ರಹಿಸಲು ಸಮರ್ಥರಾದವರೇ ಶಪಿಸಲೂ ಮುಂದಾಗುತ್ತಾರೆ. ರಾಮಾವತಾರದ ಮುಖ್ಯ ಉದ್ದೇಶ ರಾವವಣನ ವಧೆ. ಅವನನ್ನು ಜಯಿಸುವವರಾರೂ ಇರಲಿಲ್ಲ. ಅವನೇ ತನ್ನ ಸಾವನ್ನು ಹತ್ತಿರ ಮಾಡಿಕೊಂಡ. ಶಾಪದ ಮೇಲೆ ಶಾಪವನ್ನು ತಂದುಕೊಂಡ. ಅವನೇ ನರ ಮತ್ತು ವಾನರರನ್ನು ಹೊರತು ಮಾಡಿ ಇತರರಿಂದ ಸಾವು ಬರದಂತೆ ವರವನ್ನು ಪಡೆದಿದ್ದ. ಶಾಪಗಳಿಂದ ಅವನು ಸತ್ವಹೀನನಾಗದಿದ್ದರೆ ಅವನನ್ನು ಜಯಿಸುವುದು ಕಷ್ಟವಾಗುತ್ತಿತ್ತೆನಿಸುತ್ತದೆ. ಅವನೇ ಕೇಳಿಕೊಂಡಂತೆ ನರನು ವಾನರರೊಡನೆ ಸೇರಿಕೊಂಡು ಅವನನ್ನು ವಧಿಸಬೇಕಾಯಿತು.

ಕಾಮಕ್ರೋಧಗಳೇ ಮನುಷ್ಯನ ಶತ್ರುಗಳು. ಅದಕ್ಕೆ ವಶನಾದವನ ಸಾವು ದಿನದಿನಕ್ಕೆ ಸಮೀಪಿಸುತ್ತದೆ. ಕಾಮದಿಂದ ರಾವಣ ಸತ್ತ. ರಾಜ ದಂಡನೂ ನಾಶವಾದ. ಇಂದ್ರ ತನ್ನ ಪುರುಷತ್ವವನ್ನು ಕಳೆದುಕೊಂಡ. ಕಾಮಕ್ರೋಧಗಳು ನರಕಕ್ಕೆ ದಾರಿ (ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ/ಕಾಮಃ ಕ್ರೋಧಃ ತಥಾ ಲೋಭಃ ತಸ್ಮಾದೇತತ್ ತ್ರಯಂ ತ್ಯಜೇತ್ –ಭ.ಗೀ. ೧೬-೨೧). ಅವುಗಳನ್ನು ಜಯಿಸಿದವನೇ ಜ್ಞಾನಿ. ಅಂಥವನೇ ಶಾಪದ ಪ್ರಸಂಗಗಳನ್ನು ತಪ್ಪಿಸಲು ಸಮರ್ಥನಾಗುತ್ತಾನೆ.

ಹೀಗೆ ಶಾಪಗಳ ಅಧ್ಯಯನ ನಾಡಿನ ಸಂಸ್ಕೃತಿಯನ್ನು ಹಾಗೂ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ.*

* (ಗೀತಾ ಪ್ರೆಸ್, ಗೋರಖ್‌ಪುರದವರು ತಂದಿರುವ ರಾಮಾಯಣ ಸಂಸ್ಕರಣವನ್ನು ಇಲ್ಲಿ ಉಪಯೋಗಿಸಿಕೊಂಡಿದೆ) ಹಾಗೂ ಡಾ. ಟಿ.ಡಿ. ರಾಜಣ್ಣನವರ ಕನ್ನಡ ಶಾಸನ ಮತ್ತು ಸಾಹಿತ್ಯದಲ್ಲಿ ಶಾಪ (ಬಂಡಾರ ಪ್ರಕಾಶನ, ಮಸ್ಕಿ ಎಂಬ ಪುಸ್ತಕದಿಂದ ಪ್ರಯೋಜನ ಪಡೆದಿದೆ).

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# ೨. ತಮಟಕಲ್ಲ (ಗುಣಮಧುರಾಂಕನ) ಶಾಸನ

–ಶಾಸನತಜ್ಞ ಸೀತಾರಾಮ ಜಾಗೀರ್‌ದಾರ್*

ಚಿತ್ರದುರ್ಗ ಜಿಲ್ಲೆಯ–ತಾಲೂಕಿನ–ತಮಟಕಲ್ಲಿನ ಶಾಸನ (cd. 43) ಲಿಪಿಯ ಆಧಾರದ ಮೇಲೆ ಕ್ರಿ.ಶ. ೫೦೦ ಎಂದು ಕಾಲವನ್ನು ನಿಗದಿಸಲಾಗಿದೆ. ಲಿಪಿ ಶಾಸ್ತ್ರದ ಆಧಾರ ಖಚಿತ ತೇದಿಯನ್ನು ತಿಳಿಸುವುದಕ್ಕಿಂತ ಹತ್ತಿರದ ಕಾಲಮಾನವನ್ನು ತಿಳಿಸುತ್ತದೆ ಎಂದರೆ ಸರಿ ಹೋಗುತ್ತದೆ. ದಿ. ಗೌರೀಶಂಕರ ಓಝಾ (ಭಾರತದ ಪ್ರಾಚೀನ ಲಿಪಿಮಾಲಾ), ದಿ. ಡಾ. ಕೆ.ವಿ. ರಮೇಶ ಮುಂತಾದವರ ಅಭಿಪ್ರಾಯದಂತೆ ಕಾಲವು ೨೦೦ ವರ್ಷ ಆ ಕಡೆ ಈ ಕಡೆ ಹೋಗಬಹುದು ಎಂದಿದ್ದಾರೆ. ಅರ್ಥಾತ್ ೪೦೦ ವರ್ಷದ ಒಂದು ವ್ಯಾಪ್ತಿ ಅಲ್ಲಿದೆ. ಆದುದರಿಂದ ಇದರ ಕಾಲ ಕ್ರಿ.ಶ. ೫೦೦ ಎಂದು ಹೇಳಲಾಗದು. ಪದ್ಯದ ಬಗೆಗೂ ಒಂದು ನಿರ್ದಿಷ್ಟ ಪಾಠವಿದ್ದಿಲ್ಲ[೧]. ಶಾಸನದ ಪಡಿಯಚ್ಚನ್ನು ತಂದು ಒಂದು ವಿಶೇಷ ಲೇಖನವನ್ನು ಡಾ. ದೇವರಕೊಂಡಾರೆಡ್ಡಿ ಅವರು ಪ್ರಕಟಿಸಿದ್ದಾರೆ. ಶಾಸನದ ಪಾಠ ಹೀಗಿರುತ್ತದೆ BLR ಪ್ರಕಾರ : (E.C. Vol. II, P. 22) : Transliteration.

ಫಣಿಮಣಿ ಅನ್ತು ಭೋಗಿ ಫಣದುಳ್ಮಣಿವಿಲ್ಮನದೋನ್
ರಣಮುಖದುಳ್ಳ ಕೋಲನೆರೆ[ಯು]ರ್ಕ್ಕುಮನಿನ್ದ್ಯಗುಣನ್ರೆ
ಪ್ರಣಯಿಜನಕ್ಕೆ ಕಾಮನಸಿತೋತ್ಪಲವರ್ಣ್ನನವನ್
ಗುಣಮಧುರಾಜ್ಙ ದಿವ್ಯಪುರುಷನ್ಪುರುಷ ಪ್ರವರನ್

ಇದೊಂದು ಸುಂದರ ವ್ಯಕ್ತಿ ಚಿತ್ರ. 'ಗುಣಮಧುರ' ವೀರನ ಕೀರ್ತ್ತನ, ಕಪ್ಪೆ ಅರಭಟ್ಟನ ಕೀರ್ತ್ತನದ ಹಾಗೆಯೆ ಕೀರ್ತ್ತಿಸಲ್ಪಟ್ಟ ವ್ಯಕ್ತಿ, ಗುಣಮಧುರ.

ಈ ಶಾಸನದ ಅಧ್ಯಯನ ಸರಿಯಾಗಿ ಆಗಿಲ್ಲವೆಂದು ಹೇಳಿದರೆ ಯಾರೂ ತಪ್ಪು ತಿಳಿಯಬೇಕಾಗಿಲ್ಲ. ದಿವಂಗತ ಬಿ.ಎಲ್. ರೈಸ್ ಅವರು ಚಿತ್ರದುರ್ಗ ತಾಲೂಕಿನ

---

* # ೪೦೬/ಬಿ–೧, 'ಕಲ್ಪ' ೩ನೇ ಮೇನ್, ೭ನೇ ಕ್ರಾಸ್, ಸರಸ್ವತೀಪುರಂ, ಮೈಸೂರು–೫೭೦೦೦೯.
ದೂ. ೦೮೨೧–೨೫೪೬೭೭೩

ತಮಟಕಲ್ಲು ಗ್ರಾಮದ ಶಾಸನ ಸಂಖ್ಯೆ-೪೨ ಹಾಗೂ ೪೩ (CD. 42 & 43) ಎರಡನ್ನೂ ಸೇರಿಸಿಯೇ ಓದಿದ್ದಾರೆ. ಮತ್ತು ಉಪೋದ್ಘಾತದಲ್ಲಿ (Introduction) ಟಿಪ್ಪಣಿಯನ್ನು ಸೇರಿಸಿಯೆ ಬರೆದಿದ್ದಾರೆ.[೨] ಇವುಗಳ ಕಾಲವನ್ನು ಪ್ರಶ್ನಾರ್ಥಕ ಚಿಹ್ನೆಯಿಂದ ೫೦೦ ಎಂದು ಸ್ವೀಕರಿಸಿದ್ದಾರೆ-ನಿರೂಪಿಸಿದ್ದಾರೆ. ಅರ್ಥಾತ್ ಅವರಿಗೆ ಈ ಲಿಪಿಯ ಆಧಾರದ ಬಗ್ಗೆ ಸಂದೇಹವಿದೆ. ಶಾಸನದಲ್ಲಂತೂ ಕಾಲವನ್ನು ನಿಗದಿತಪಡಿಸಿಲ್ಲ-ಸ್ಪಷ್ಟವಾಗಿ ಹೇಳಿಲ್ಲ. ಎಪಿ.ಕ. ಸಂಪುಟ II (BRL) ರಲ್ಲಿ ಮೂರು ಭಾಗಗಳಲ್ಲಿ ಶಾಸನವನ್ನು ಪ್ರಸ್ತಾಪಿಸಿದೆ: (E.C. Vol. 11).

೧. ಕನ್ನಡಪಾಠ

cd. 42: ರಾಮದೇವನ ಹೊಲದಲ್ಲಿದ್ದ ಶಾಸನ.

ಪಂಕ್ತಿಗಳು:

೧. ಸ್ವಸ್ತಿ ಶ್ರೀ ಮತ್ಮಾಸಿಕ್ಕಾ ಪುರಾಧಿಪತಿಃ
ಅಥ ಭಾರದ್ವಾಜವಂಶ ಧನಾಗಮಸ್ಯ ಪುತ್ರೋಮನಾ

೨ ಗಮಃ ತಸ್ಯಚಸೂನುಃ ಗುಣಮಧುರೋ
ನಾಮ ಸತಾಃ ತ್ಯಾಗವಾನಿತಿ ಪ್ರಶಸ್ತಃ

cd, 43:

೧. ಬಿಣಮಣಿ ಅನ್ತು ಭೋಗಿ ಬಿಣದುಳ್ಮಣಿ ವಿಲ್ಮನದೋನ್ (ನಜಭಜಜಲಗ)
ರಣಮುಖದುಳ್ಳ ಕೋಲಂ ನೆರಿ [ಯು]ಕ್ರ್ಮಮನೀತ್ಯಗುಣನ್
ಪ್ರಣಯಿ ಜನಕ್ಕೆ ಕಾಮನಸಿ ತೋತ್ಪಲ ವರ್ಣ್ನನವನ್
ಗುಣಮಧುರಾಜ್ಕ ದಿವ್ಯ ಪುರುಷನ್ಪುರುಷ ಪ್ರವರನ್ ॥[೩]

ಇದೊಂದು ಅಕ್ಷರ ವೃತ್ತ ಇದರಲ್ಲಿ ನಜಭಜಜಲಗ ಎಂಬ ಪ್ರಸ್ತಾರವಿದೆ. ಅರ್ಥಾತ್ ೧೭ ಅಕ್ಷರಗಳನ್ನು ಹೊಂದಿರುವ ಅತ್ಯಷ್ಟಿ ಛಂದೋಬಂಧದಲ್ಲಿ ಇದರ ಹೆಸರು ಪಿಂಗಳನ ಪ್ರಕಾರ ಅವಿತಥ (೮.೧೪), ಯತಿ ೭ನೆಯ ಅಕ್ಷರದಲ್ಲಿ ಇದ್ದರೆ, ಅನಂತರದ ೬ನೆಯ ಅಕ್ಷರ ಎಂದರೆ ೧೩ನೆಯ ಅಕ್ಷರದಲ್ಲಿ ಯತಿ ಇದ್ದರೆ ಅದು ಕೋಕಿಲಕ (೮-೧೫) ಜಯದೇವ, ವಿರಹಾಂಕ, ಉತ್ಪಲ (ಬೃಹತ್ ಸಂಹಿತೆಯ ಉತ್ಪಲನ ವ್ಯಾಖ್ಯಾನ), ಜಯಕೀರ್ತಿ, ಕೇದಾರಭಟ್ಟ ಮೊದಲಾದವರು 'ನರ್ಕುಟಕ/ನರ್ದಟಕ/ನತ್ಕುಟಕ/ಕುಟಕ ಇತ್ಯಾದಿ ಹೆಸರುಗಳನ್ನು ಹೇಳಿದ್ದಾರೆ. ನಾಗವರ್ಮನು 'ಕನಕಾಬ್ಜಿನಿ' ಎಂಬ ಹೆಸರನ್ನು ಹೇಳಿದ್ದಾನೆ. ಶಾಸನದ ಕಾಲ ಕ್ರಿ.ಶ. ಐದುನೂರರ ಎಡಬಲ ಎಂಬುದನ್ನು ಗಮನಕ್ಕೆ ತಂದುಕೊಂಡರೆ 'ಕನಕಾಬ್ಜಿನಿ' ಎಂಬುದು ಅಷ್ಟು ಸರಿಯಲ್ಲ. ಕನ್ನಡದಲ್ಲಿ 'ಯತಿ ವಿಲಂಘನ' ಸಹಜ ಪ್ರಕ್ರಿಯೆ. ಆದುದರಿಂದ 'ಅವಿತಥ' ಇಲ್ಲವೇ ನರ್ಕುಟಕ' ಇಲ್ಲವೇ 'ಕೋಕಿಲಕ' ಎಂಬ ಹೆಸರುಗಳಲ್ಲಿ ಯಾವುದಾದರು ಒಂದನ್ನು ಸ್ವೀಕರಿಸಬಹುದು.[೪]

ಈಗ ಈ ಎರಡೂ ಶಾಸನಗಳನ್ನು ಕೂಡಿಸಿಯೇ ಇನಿತು ವಿಶ್ಲೇಷಿಸಿದರೆ ಕಂಡುಬರುವ ಸಂಗತಿಗಳು :

೧. ಈ ಎರಡೂ ಶಾಸನಗಳನ್ನು ಒಂದೇ ಕಾಲಕ್ಕೆ ಬರೆಯಲಾಗಿದೆ. ಇವು ಒಬ್ಬನೇ ವ್ಯಕ್ತಿಗೆ ಸಂಬಂಧಿಸಿವೆ. ಆ ವ್ಯಕ್ತಿ ಗುಣಮಧುರ. ಶಾಸನದ ಗುರಿ ಗುಣಮಧುರನನ್ನು ಸ್ತುತಿಸುವುದೇ ಆಗಿದೆ. ಆತ –'ತ್ಯಾಗವಾನ್'; ಸರ್ಪದ ಫಣಾಮಣಿಯಂತೆ ಅಮೂಲ್ಯ ವ್ಯಕ್ತಿ, ರಣರಂಗದಲ್ಲಿ ಬಾಣ ಬಿಡುವುದರಲ್ಲಿ ನಿಸ್ಸೀಮ ; ಶಕ್ತಿಯುತ ಅಭಿಮಾನಧನ; ಅನಿಂದ್ಯಗುಣನ್ (ನಿಂದನಾತೀತಗುಣ) ಅರ್ಥಾತ್ ಸದ್ಗುಣಿ; ಪ್ರಣಯಿ ಜನಕ್ಕೆ ಕಾಮನ್; ಕನ್ನೈದಿಲೆಯ (ಅರ್ಥಾತ್ ಕಂದು) ಬಣ್ಣದ ದೇಹದವನು. ದಿವ್ಯಪುರುಷ–ಪುರುಷ ಶ್ರೇಷ್ಠ, ಹೆಸರು ಗುಣಮಧುರ.

೨. ಗುಣಮಧುರನ ವಂಶದ ವಿವರ ಹೀಗಿದೆ : ಮಾಸಿಕ್ಯಾಗಿ ಪುರಾಧಿಪತಿ – ಅಲ್ಲಿ ಭಾರದ್ವಾಜ ಗೋತ್ರದ (ಸಂಭವ) ವ್ಯಕ್ತಿ ಧನಾಗಮ – ಆತನ ಪುತ್ರ– ಮನಾಗಮ – ಆತನ ಪುತ್ರ– ಗುಣಮಧುರ.

೩. ಇದುವರೆಗೆ ಈ ಶಾಸನದಲ್ಲಿ ಬಂದಿರುವ ಊರು 'ಮಾಸಿಕ್ಯಪುರ' ಅಥವಾ 'ಮಸಿಕ್ಯಪುರ' ಎಂಬುದನ್ನು ಗುರುತಿಸಲಾಗಿಲ್ಲ. ಅಂತೆಯೆ ಈ ಅರಸರ ಮನೆತನವನ್ನೂ ಗುರುತಿಸಲಾಗಿಲ್ಲ. 'ಮಸಿಕ್ಯಪುರ' ಎಂಬ ಊರು ಎಲ್ಲಿ ಇದ್ದಿತು? ಈ ಪ್ರಶ್ನೆಗೆ ಉತ್ತರ ಅಷ್ಟು ಸರಳವಾಗಿ ದೊರೆಯದು. ದಿ. ಬಿ.ಎಲ್. ರೈಸ್ ಅವರು ಗುರುತಿಸಲು ಆಗುತ್ತಿಲ್ಲ ಎಂದಿದ್ದಾರೆ. ತಮಟಕಲ್ಲಿಗೂ 'ಮಸಿಕ್ಯ + ಪುರ' ಊರಿಗೂ ಏನಾದರೂ ಸಂಬಂಧ ಇದೆಯೆ ? ತಮ + ಅಟ = ತಮಟ ಶಬ್ದರೂಪ ಆಗಿರಬಹುದೆ ? ದಟ್ಟವಾದ ಕಾಡಿನ ಮಧ್ಯ ಇರುವ ಊರಾಗಿರಬಹುದೆ ? ತಮ = ಕತ್ತಲೆ ; ಮಸಕು (darkness) ಎಂದೇ ಅರ್ಥ.

ಇನ್ನೊಂದು ಸಾಧ್ಯತೆಯೂ ಇದೆ. 'ಮಸ್ಕಿ' ನದೀ (ಹಳ್ಳ?) ದಂಡೆಯ ಮೇಲೆ ಇದ್ದ ಊರು ಇದಾಗಿರಬಹುದು. ಅಶೋಕನ ಶಾಸನವಿರುವ ಮಸ್ಕಿ ಊರ ಬಳಿ ಒಂದು ಪ್ರಾಚೀನ ಪ್ರವಾಹ ಇಂದಿಗೂ ಹರಿಯುತ್ತದೆ.[೫] ಈ ಹಳ್ಳ (ನದೀ) ಗಜೇಂದ್ರಗಡ ಊರಿನ ಬಳಿಯಲ್ಲಿ ಹುಟ್ಟಿ ಮುದ್ಗಲ್ ನಗರವನ್ನು ತಟ್ಟಿ ಮಸ್ಕಿ ಹತ್ತಿರದಿಂದ ಹರಿದು ಮುಂದೆ 'ಹಿರಿಹಳ್ಳ' ಎಂಬ ಹೆಸರಿನಿಂದಲೂ ಪ್ರಸಿದ್ಧಿ ಹೊಂದಿದ್ದು ಮಾನ್ವಿ ತಾಲೂಕಿನಲ್ಲಿ ತುಂಗಭದ್ರಾ ನದಿಗೆ ಕೂಡುತ್ತದೆ. ಇದಕ್ಕೆ 'ಮಸ್ಕಿನಾಲಾ' ಎಂದೂ ಕರೆಯುತ್ತಾರೆ. ಕುಷ್ಟಗಿ ತಾಲೂಕಿನ ಉತ್ತರದ ಗಡಿಯಲ್ಲಿ ಈ ನದಿಗೆ ಹತ್ತಿರದಲ್ಲಿ 'ಮಸ್ಕಿಹಟ್ಟಿ' ಎಂಬ ಊರೂ ಇದೆ. ಈ ಭಾಗದಲ್ಲಿ ಇನ್ನಷ್ಟು ಸಂಶೋಧನೆ ಆದರೆ ಸತ್ಯ ಹೊರಬೀಳುತ್ತದೆ.

ಈಗ ನಾವು ಈ ಶಾಸನಗಳಲ್ಲಿ ಬಂದಿರುವ ವಿಷಯದತ್ತ ನಮ್ಮ ದೃಷ್ಟಿಯನ್ನು ಹರಿಸೋಣ.

'ಗುಣಮಧುರ' ವ್ಯಕ್ತಿ ಒಬ್ಬ ಅರಸ–ರಾಜ. ಆತನ ಅಜ್ಜ 'ಧನಾಗಮ' 'ಮಸಿಕ್ಯ' ಪುರಕ್ಕೆ ಒಡೆಯ (ಅಧಿಪತಿ). ಪಲ್ಲವರೂ 'ಭಾರದ್ವಾಜಗೋತ್ರ' ಸಂಭೂತರು, ಇವರೂ ಭಾರದ್ವಾಜ ಸಂಭೂತರು. ಒಂದು ದೃಷ್ಟಿಯಲ್ಲಿ ಒಂದೇ ಗೋತ್ರಕ್ಕೆ ಸೇರಿದ ಕುಲಬಾಂಧವರು, ಸಗೋತ್ರ ಸಂಬಂಧಿಗಳು. ಅರ್ಥಾತ್ ಇವರೂ ಪಲ್ಲವರ ಒಂದು ಶಾಖೆಯವರು. ಹತ್ತಿರದ ಊರು ಅಣಜಿಯಲ್ಲಿ ದೊರೆತ 'ಪಲ್ಲವನಣಕ್ಕಾಸ' ದೊರೆಯ ಉಲ್ಲೇಖವುಳ್ಳ ಶಾಸನವನ್ನು ಗಮನಕ್ಕೆ ತಂದುಕೊಂಡರೆ ಮತ್ತೆ ಹಲ್ಮಿಡಿಯ ಶಾಸನದಲ್ಲಿ ವಿಜ ಅರಸನು "ಕೇಕಯ ಪಲ್ಲವರನ್ನು" ಸೋಲಿಸಿದ ಎಂಬ ಸಂಗತಿಯನ್ನೂ ವಿಶ್ಲೇಷಣೆಗೆ ಎತ್ತಿಕೊಂಡರೆ ಆ ಚಿಕ್ಕ ಪಲ್ಲವ ಸಂಸ್ಥಾನ ಹಲ್ಮಿಡಿಗೆ (ಹಾಸನ ಜಿಲ್ಲೆಗೆ) ಹತ್ತಿರವಿರುವ ಪಕ್ಕದ ಚಿತ್ರದುರ್ಗ ಜಿಲ್ಲೆಯಲ್ಲಿ ಇದ್ದ ಈ ರಾಜ ಮನೆತನ ಎಂದು ಸ್ಪಷ್ಟವಾಗುತ್ತದೆ. "ಧನಾಗಮ" ಎಂಬ ಹೆಸರೂ ಪಲ್ಲವರ "ಶ್ರೀಭರ" ಎಂಬ ಹೆಸರಿಗೆ ತುಂಬ ಹತ್ತಿರವಿದೆ. ಇದು ಅದರ ಪರ್ಯಾಯ ಶಬ್ದ.

ಗಂಗರ 'ಸತ್ಯವಾಕ್ಯ' ಚಾಳುಕ್ಯರ 'ಸತ್ಯಾಶ್ರಯ' ಹಾಗೂ ನೊಳಂಬರ 'ನನ್ನಿ' ಇವು ಮೂರು ರಾಜ ಮನೆತನಗಳು ಬಳೆಸಿದ ಒಂದು ಭಾವದ ದ್ಯೋತಕ. ಮೂರು ಶಬ್ದಗಳು ನೀಡುವ ಅರ್ಥ ಒಂದೇ ಸತ್ಯ (Truth) ಪ್ರತಿಪಾದಕರು. ಅಂತೆಯೆ 'ಶ್ರೀಭರ' ಹಾಗೂ 'ಧನಾಗಮ' ಇವು ಒಂದೇ ಅರ್ಥವನ್ನು ಸೂಚಿಸುವ ಶಬ್ದಗಳು. ಸಂಪತ್ತನ್ನು ಭರಿಸಿಕೊಡುವ–ಸೂಚಿಸುವ–ಶಬ್ದಗಳು. 'ಶ್ರೀಭರ' ಹಾಗೂ 'ಧನಾಗಮ' ಶಬ್ದಗಳ ಬೆಳಕಿನಲ್ಲಿ ಈ ಶಾನಗಳ ಕಾಲ ಕ್ರಿ.ಶ. ೬–೭ನೆಯ ಶತಮಾನ. ಈಗ ಗ್ರಹಿಸಿರುವಂತೆ ೫೦೦ ಅಲ್ಲ–Q.E.D.

'ಗುಣಮಧುರ' ಇದು ಕೂಡ ಪಲ್ಲವರ ಶಾಸನಗಳಲ್ಲಿ ಬಂದಿರುವ ಬಿರುದು, "ಗುಣಭರ" ಇದಕ್ಕೆ ತುಂಬ ಹತ್ತಿರವಾಗಿದೆ. 'ಗುಣಭರ' ಎಂದರೆ ಗುಣಗಳಿಂದ ತುಂಬಿದೆ ಎಂದರ್ಥ, ಮತ್ತೆ ಗುಣಗಳಿಂದ ತುಂಬಿದ ವ್ಯಕ್ತಿ ಎಲ್ಲರಿಗೂ ಪ್ರೀತಿಯ ವ್ಯಕ್ತಿ ಆಗುತ್ತಾನೆ ಅರ್ಥಾತ್ ಮಧುರಗುಣ ಎಲ್ಲರಿಗೂ ಆಪ್ಯಾಯಮಾನವೇ. ಈ ದಿಶೆಯಲ್ಲಿ ಯೋಚಿಸಿದಾಗ "ಗುಣಮಧುರ" "ಗುಣಭರ" ಶಬ್ದಗಳೂ ಒಂದು ರೀತಿಯ ಅನುಕರಣಗೊಂಡ ಶಬ್ದಗಳೆಂದೇ ಭಾಸ ಆಗುತ್ತದೆ. ಈ ಎರಡು ಬಿರುದುಗಳನ್ನು ಪರಿಶೀಲಿಸಿದಾಗ ಇವು ಕಂಚಿಯ ಪಲ್ಲವರ ಬಿರುದುಗಳ ಅನುಕರಣೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಆದುದರಿಂದ ತಮಟಕಲ್ಲಿನ ಶಾಸನಗಳು ಒಂದು ಪಲ್ಲವ ಶಾಖೆಯನ್ನು ಸೂಚಿಸುತ್ತವೆ ಎಂದರೆ ತಪ್ಪಾಗದು. ಇವರ ರಾಜಧಾನಿ 'ಮಸಿಕ್ಯಪುರ', ಅದು ಕರ್ನಾಟಕದಲ್ಲೇ ಇದ್ದಿತು.

## ಟಿಪ್ಪಣಿಗಳು

೧. ನೋಡಿ ದಿ. ಡಾ. ರಂ.ಶ್ರೀ. ಮುಗಳಿ ಅವರ ಪುಸ್ತಕ, "ಕನ್ನಡ ಸಾಹಿತ್ಯ ಚರಿತ್ರೆ", ಪು. ೯ (೧೯೫೩). ಶ್ರೀಯುತರು ಶಾಸನದ ಪಠ್ಯ ಏನೆಂಬುದನ್ನು ತಲಸ್ಪರ್ಶಿಯಾಗಿ ಅಭ್ಯಸಿಸಿ ಬರೆದಿಲ್ಲ. ಖಚಿತ ಪಾಠ ತಿಳಿಸಿಲ್ಲ. ಎರಡೂ ಪಾಠಗಳನ್ನು ನಮೂದಿಸಿ ಹೊಸ್ತಿಲದ ಮೇಲೆ (ದೇಹಲಿಯ ಮೇಲೆ) ದೀಪ ಇಟ್ಟಿದ್ದಾರೆ!

೨. ಎಪಿ.ಕ. ಸಂಪುಟ II, (BLR) ಕನ್ನಡ ಪಠ್ಯ ವಿಭಾಗ, ಪು. ೨೮-೨೯, Transliteration, P. 21 & Translations, P. 12 ಕನ್ನಡ ವಿಭಾಗದಲ್ಲಿ ಕೊಟ್ಟಿರುವ ಪಾಠ ತಪ್ಪಾಗಿದೆ ಎಂಬುದನ್ನು ವಿದ್ವಾಂಸರಾದ ಡಾ. ದೇವರಕೊಂಡಾರೆಡ್ಡಿ ಹಾಗೂ ಡಾ. ಎಂ.ಜಿ. ಮಂಜುನಾಥ ಅವರು ತಮ್ಮ ತಮ್ಮ ಬರಹಗಳಲ್ಲಿ ತೋರಿಸಿದ್ದಾರೆ.

೩. ಹೆಚ್ಚಿನ ವಿಚಾರಕ್ಕೆ 'ಛಂದೋರಚನಾ-ಸಂಶೋಧನೆಗಳು' ಪು. ೧೯೯ನ್ನು ನೋಡುವುದು.

೪.(i)ಮಧ್ಯಕಾಲದಲ್ಲಿ ಮಸ್ಕಿ ಊರನ್ನು 'ಮೊಸಂಘಿ' ಎಂದು ಶಾಸನಗಳಲ್ಲಿ ಕರೆದಿರುವುದರ ಅರಿವು ನನಗಿದೆ. ಕರ್ನಾಟಕ ವಿಷಯ ವಿಶ್ವಕೋಶದಲ್ಲಿ 'ಮಸ್ಕಿನದಿ' ಎಂದು ಬರೆದಿದೆ. ನೋಡಿ : ಕ.ವಿ.ವಿ. ಕೋಶ, ಪು. ೧೧೩೫ (೧೯೭೯).

(ii). ಡಾ. ಬಿ.ಎನ್. ಥಾಪರ್ ಅವರ ಉತ್ಖನನದ ವರದಿ-ಲೇಖನ ಇತ್ಯಾದಿಗಳನ್ನೂ ನೋಡಬಹುದು. (ASI ಪ್ರಕಟಣೆ).

೫. EP. Ind. Vol.

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೫. ವಡ್ಡಾರಾಧನೆಯ ಕಥನಕ್ರಮ ಪ್ರತಿನಿಧಿಸುವ ಅಂಶಗಳು

-ಮಹಾಂತೇಶ ಪಾಟೀಲ*

ಪ್ರಾಚೀನ ಕನ್ನಡ ಸಾಹಿತ್ಯವು ಚಂಪೂವೆಂಬ ಗದ್ಯ ಪದ್ಯ ಸಮ್ಮಿಶ್ರ ಕಥನದಿಂದ ಆರಂಭವಾಯಿತು. ಕನ್ನಡದ ಪ್ರಾಚೀನತೆಯ ಗುರುತಿಸುವಲ್ಲಿ ಮಹತ್ವದ ದಾಖಲೆಯಾಗಿ ನಿಲ್ಲುವ ಶಾಸನಗಳ ರಚನೆಯೂ ಗದ್ಯವೇ ಆಗಿದೆ. ಲಿಖಿತ ದಾಖಲೆಗಳ ಬೆಳವಣಿಗೆ ದೃಷ್ಟಿಯಿಂದ ಗದ್ಯ ಕಥನಕ್ರಮಗಳೇ ಪುರಾತನವೆಂದು ಹೇಳಲು ಅಡೆತಡೆಗಳಿಲ್ಲ. ಮನುಷ್ಯನಿಗೆ ಕಥೆ ಹೇಳುವ ಕಲೆಗಾರಿಕೆಯು ಬಹು ಹಿಂದಿನಿಂದಲೂ ಜನಪದರಲ್ಲಿ ಬೆಳೆದು ಬಂದ ಮನರಂಜನಾ ಕ್ರಮವಾಗಿದೆ. ಈ ನೆಲೆಯಿಂದಲೂ ಕಾವ್ಯಕ್ಕಿಂತ ಕಥೆಗಳೇ ಆದಿಯಾಗಿ ಕಾಣುತ್ತದೆ. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿ ಕಥೆಗಳ ರಚನೆ ಕನ್ನಡ ಭಾಷೆಗಿಂತ ಬಹು ಹಿಂದೆಯೇ ನಡೆದಿರಬೇಕೆನ್ನಿಸುತ್ತದೆ. ಅದನ್ನು ಸಮರ್ಥಿಸುವಂತೆ ಸಂಸ್ಕೃತದ ಬಾಣ ಕಾದಂಬರಿ, ಪಾಕೃತದ ಹರಿಷೇಣನ ಬೃಹತ್ ಕಥಾಕೋಶ ಗದ್ಯ ಕಥನಗಳು ಗುಣ ಮತ್ತು ಕಲಾತ್ಮಕತೆಯಿಂದ ಉದಾತ್ತ ರಚನೆಯಾಗಿವೆ. ಹಳೆಗನ್ನಡದಲ್ಲಿ ರಚನೆಯಾದ ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ' ಕಥನವೂ ಪ್ರಾಕೃತ ಭಗವತಿ 'ಆರಾಧನೆ' ಮೂಲವಾದರೂ, ಕನ್ನಡದ್ದೇ ಎನ್ನುವ ರೀತಿಯಲ್ಲಿ ಅದರ ಕಥನ ಗುಣ ಕಲಾತ್ಮಕತೆಯಿಂದ ಕೂಡಿದೆ. ಇದಕ್ಕೆ ಕನ್ನಡದ ಮೊದಲ ಗದ್ಯ ಕಥನವೆಂಬ ಕೀರ್ತಿಯೂ ಸಹ ಸಲ್ಲುತ್ತದೆ.

ವಡ್ಡಾರಾಧನೆಯ ಕರ್ತೃವಿನ ವಿಚಾರವಾಗಿ ಶಿವಕೋಟ್ಯಾಚಾರ್ಯ, ರೇವಕೋಟ್ಯಾಚಾರ್ಯ ಮತ್ತು ಬ್ರಾಜಿಷ್ಣು ಎಂಬುವ ವಾದಗಳನ್ನು ಸಂಶೋಧಕರು ಮಂಡಿಸಿದ್ದಾರೆ. ಹಾಗೆಯೆ ವಡ್ಡಾರಾಧನೆ (ಉಪಸರ್ಗ ಕೇವಲಿಗಳ ಕತೆ) ಕೃತಿಯ ಹೆಸರು 'ಆರಾಧನಾ ಕರ್ನಾಟಕ ಟೀಕಾ' ಎಂಬ ವಾದವನ್ನು ಈಚೆಗಿನ ಸಂಶೋಧನೆಗಳು ಹುಟ್ಟಿ ಹಾಕಿವೆ. ಇವೆಲ್ಲವುಗಳ ನಡುವೆ ಡಿ.ಎಲ್. ನರಸಿಂಹಾಚಾರ್ಯ ಅವರು ಹೇಳುವ 'ಶಿವಕೋಟ್ಯಾಚಾರ್ಯ' ಕರ್ತೃವೆಂದು, 'ವಡ್ಡಾರಾಧನೆ' ಕೃತಿ ರಚನೆಯ ಕಾಲ ಕ್ರಿ.ಶ. ೯೨೦ಕ್ಕೆ ಸರಿ ಹೊಂದಿಸಿದ್ದು, ಬಹುಜನರು ಒಪ್ಪಿತವಾದ ವಿಚಾರವಾಗಿದೆ. "ಈ ಪೇಳ್ದ ಪತ್ತೊಂಬತ್ತು ಕಥೆಗಳುಂ ಶಿವಕೋಟ್ಯಾಚಾರ್ಯರ್

* ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ-೫೮೫೩೧೧, ಆಳಂದ ತಾ., ಗುಲಬರ್ಗಾ ಜಿಲ್ಲೆ. ಮೊ. ೯೬೨೦೮೫೭೨೬

ಪೇಳ್ದಾರ್ ವಡ್ಡಾರಾಧನೆ ಸಂಪೂರ್ಣಂ" ಎಂಬ ಅಭಿಪ್ರಾಯವನ್ನು ಬೆಂಬಲಿಸುವಂತಿದೆ. ವಡ್ಡಾರಾಧನೆಯ ಮಹತ್ವ ಇರುವುದು ಕನ್ನಡದ ಮೊದಲ ಗದ್ಯ ಕಥನವೆಂಬುವಕ್ಕಿಂತ, ಅದೊಂದು ಪರಿಪೂರ್ಣ ಸಾಹಿತ್ಯಿಕ ಮತ್ತು ಸಾಮಾಜಿಕ ಪಠ್ಯ ಎಂಬುವ ಕಾರಣದಿಂದ. ಅದರೊಳಗಣ ದೇಸೀಯತೆ, ಸಂಭಾಷಣೆಯ ಆಪ್ತತೆ, ಆಶಯದ ಸೊಗಸು, ಭಾಷೆಯ ಸಮಯೋಜಿತ ಬಳಕೆಯಿಂದ ಗಮನ ಸೆಳೆಯುತ್ತದೆ. ಈ ಕೃತಿಯ ವಿಚಾರವಾಗಿ ಸಾಮಾಜಿಕ, ಸಾಹಿತ್ಯಿಕ ಚಿಂತನೆಗಳು ನಡೆದರು ಸಹ, ವಡ್ಡಾರಾಧನೆಯ ಕಥನಕ್ರಮ (ನೆರೇಟಿವ್)ವನ್ನು ಚರ್ಚಿಸುವ ಪ್ರಯತ್ನಗಳು ವಿಸ್ತಾರವಾಗಿ ನಡೆದಿಲ್ಲ. ಆಧುನಿಕ ಕನ್ನಡ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದ 'ಸಣ್ಣ ಕತೆ'ಯ ಮಾದರಿ, ಪಾಶ್ಚಾತ್ಯರಿಂದ ನಮ್ಮಲ್ಲಿಗೆ ಬಂದುದೆಂಬ ವಾದಕ್ಕೆ ಹುರುಳಿಲ್ಲ ಎಂಬುದಕ್ಕೆ 'ವಡ್ಡಾರಾಧನೆಯ ಕಥನ ಕ್ರಮದ' ಸ್ವರೂಪವನ್ನು ಗಮನಿಸಿದಾಗ ವಾಸ್ತವ ಅರಿವಾಗುತ್ತದೆ. ನಾವಿಂದು ಸಣ್ಣಕತೆಯ ಸ್ವರೂಪಗಳನ್ನು ಪಾಶ್ಚಾತ್ಯ ಮಾದರಿಯಿಂದ ಅಧ್ಯಯನಿಸುತ್ತಿದ್ದರೂ, ಅದನ್ನು ಸ್ವರೂಪಿಕರಿಸಿಕೊಂಡ ಕಥನ ಕ್ರಮ ಪ್ರಾಚೀನ ಕನ್ನಡದಲ್ಲಿ ರಚನೆಯಾದ ವಡ್ಡಾರಾಧನೆ ಕೃತಿಯಲ್ಲಿನ ಅಂಶಗಳನ್ನು ನೋಡಬಹುದಾಗಿದೆ. ಹೀಗಾಗಿ ವಡ್ಡಾರಾಧನೆಕಾರರ ಕಥನ ಮಾದರಿ ಆ ಕಾಲಕ್ಕಾಗಲೇ ನವ್ಯವಾಗಿ ಕಾಣಿಸಿದಂತಿದೆ.

ವಡ್ಡಾರಾಧನೆಯ ಭಾಷೆ ಹಳೆಗನ್ನಡ ಎನ್ನಲಾಗುತ್ತಿದ್ದರೂ, ಆಡುನುಡಿಯನ್ನು ಸಮರ್ಥವಾಗಿ ಕೃತಿಕಾರ ಬಳಸಿಕೊಂಡಿರುವುದರಿಂದ, ಅದರ ಕಥನದಲ್ಲಿ ಆಪ್ತವೆನ್ನಿಸುವ ಸರಳ ಭಾಷೆಯನ್ನು ಒಳಗೊಂಡಿದೆ. ಪ್ರಾಕೃತ ಮತ್ತು ಸಂಸ್ಕೃತದ ಪದಜೋಡನೆ ಕ್ರಮದಲ್ಲಿ ಸಾಗುವ ಕಥನದ ನಡಿಗೆಯಲ್ಲಿ ಕೃತಕತೆ ಕಂಡುಬರುವುದಿಲ್ಲ. ಒಂದು ಧರ್ಮದ ನೀತಿಯನ್ನು ನಿಯತವಾಗಿ ಹೇಳುವಲ್ಲಿ ಬಳಕೆಯಾಗುವ ಧಾರ್ಮಿಕ ಪರಿಭಾಷೆಗಳು ಸಹ ಇಲ್ಲಿನ ಕಥನ ಕ್ರಮಕ್ಕೆ ಭಾರವೆನ್ನಿಸಲಾರವು. ಇಲ್ಲಿನ ಕಥೆಗಳ ಆರಂಭದಲ್ಲಿ ಕಾಣಿಸಿಕೊಳ್ಳುವ "ಸುಕುಮಾರಸ್ವಾಮಿಯ ಕಥೆಯಂ ಪೇಳ್ವೆಂ' 'ವಿದ್ಯಚ್ಚೋರನೆಂಬ ರಿಷಿಯ ಕಥೆಯಂ ಪೇಳ್ವೆಂ' 'ಅಗ್ನಿರಾಜನ ಮಗನಪ್ಪ ಸ್ವಾಮಿ ಕಾರ್ತಿಕ ಋಷಿಯ ಕಥೆಯಂ ಪೇಳ್ವೆಂ' ಎಂಬುವ ಬರವಣಿಗೆಯ ಕ್ರಮವೂ, ಅವು ನೀತಿಯನ್ನು ಹೇಳುವ ಕತೆಯಾಗಿ ಕಾಣುತ್ತವೆ. 'ಕೇಳು ಜನಮೇಜಯ...' ಎಂಬುವ ಕುಮಾರವ್ಯಾಸನ ಮಾತು ಸಹ, ವಡ್ಡಾರಾಧನಕಾರನ ಧಾಟಿಯದಾಗಿ ನೆನಪಿಸುತ್ತದೆ. ಈ ಕಥೆಗಳು ನಮ್ಮ ಅತ್ಯಂತ ಪ್ರಾಚೀನ ಕಥನ ಕಲೆಗಾರಿಕೆಯನ್ನು ಪ್ರತಿಪಾದಿಸುವ ಮಹತ್ವದ ಅಂಶಗಳನ್ನು ಒಳಗೊಂಡಿದೆ. ವಾಚಾಳಿ ನಿರೂಪಣೆಗೆ ಅವಕಾಶವಿಲ್ಲ. ಇಲ್ಲಿ ಪಾತ್ರಗಳ ನಡುವೆ ನಡೆಯುವ ಸಂಭಾಷಣೆಯೂ ಸಹ ಆಪ್ತತೆಯಿಂದ ಕೂಡಿದುದಾಗಿದೆ.

ಸಣ್ಣಕಥನದ ಮುಖ್ಯ ಲಕ್ಷಣವಾಗಿರುವ ಸಂಕ್ಷಿಪ್ತತೆ ಮತ್ತು ಸಹಜ ವರ್ಣನೆಗೆ ವಡ್ಡಾರಾಧನೆಯಲ್ಲಿನ ಅನೇಕ ಕಥೆಗಳ ನಿರೂಪಣೆ ಉದಾಹರಣೆಯಾಗಿ ನೋಡಬಹುದು. 'ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು ಕರ್ಪೂರ ಸಂಮ್ಮಿಶ್ರಿತಮಪ್ಪ ತುಂಬುಲಂದಿನುತ್ತಂ' ಎಂಬ ವಿದ್ಯುಚ್ಚೋರನ ಘಟಿಕಾಂಜನೆಯ ಹಚ್ಚಿಕೊಂಡ ವರ್ಣನೆ, 'ಬಸಮ್ ಅಳಿದು ಬೇಸಗೆಯ ಕಡುವಿಸಿಲಿಂದಂ ಝಳದಿಂದಂ ಬೆಂಕಿಯಿಂದಂ

ನೀರಳ್ಕೆಯಧಿಕಮಾಗಿ' ಎಂದು ಕಾರ್ತಿಕ ಋಷಿಯು ಬಿಸಿಲಿನಲ್ಲಿ ಬಳಲಿದ್ದನ್ನು ವರ್ಣಿಸುವಲ್ಲಿ ವಡ್ಡಾರಾಧನೆಕಾರ ಸ್ವಭಾವೋಕ್ತಿ ಅಲಂಕಾರ ತಂದಿದ್ದಾನೆ. ಇದೇ ಕಥೆಯಲ್ಲಿ ತಂದೆ ಮಗಳ ಮದುವೆ ವಿಚಾರ ಹೇಳದೆ ನೇರವಾಗಿ ಕಥೆ ಹೇಳಲು ತೊಡಗುತ್ತಾನೆ. ಕಥೆಯ ಆಶಯವನ್ನು ಪ್ರತಿನಿಧಿಸುವ ಮಾತುಗಳಾಚೆಗಿನ ವಿವರಣೆಯನ್ನು ಬೆಳೆಸುವಲ್ಲಿ ಆಸಕ್ತಿ ವಹಿಸುವುದಿಲ್ಲ. ಹೀಗಾಗಿ ಕಥೆಯು 'ಒಣ ವಿವರಣೆಗಳ' ಭಾರದಿಂದ ಪಾರಾಗುತ್ತದೆ. ಕಾರ್ತಿಕ ಋಷಿಯ ಕತೆಯಲ್ಲಿ ಬರುವ "ಅಬ್ಬಾ ನಿಮ್ಮ ತಂದೆಯಪ್ಪ ಎಮ್ಮ ಅಜ್ಜನೊಳ್ ಆನೊ ಇಲ್ಲೆಯೊ ಎಂದು ಬೆಸಗೊಂಡೊಡೆ ತಾಯ್ ಮನದೊಳ್ ಬಳಲ್ದಳ್ ಆಗಿ ಏನಂ ಪೇಳ್ವೆಂ ಮಗನೆ ನಿನಗೆ ತಂದೆಯಪ್ಪ ಆತನ್ ಎನಗಂ ತಂದೆಯೆಂದು ಪೇಳ್ದೊಡದಂ ಕೇಳ್ದು ಅದುವೇ ವೈರಾಗ್ಯ ಕಾರಣಮ್ ಆಗಿ" ಎಂಬುವ ಕೃತಿಕೆಯ ಮಾತು ಮಗನಾದ ಕಾರ್ತಿಕನಿಗೆ ಹೃದಯವನ್ನು ತಲ್ಲಣಿಸಿ ಬಿಡುತ್ತದೆ. ಈ ಮಾತುಗಳು ಓದುಗನ ಮನಸನ್ನು ರೋಮಾಂಚನಗೊಳಿಸಿ ಬಿಡುತ್ತವೆ. ಅಷ್ಟು ಸಮರ್ಥವಾಗಿ ತಾಯಿ, ಮಗನ ಸಂಭಾಷಣೆಯನ್ನು ವಡ್ಡಾರಾಧನೆಕಾರ ನಿರೂಪಿಸಿದ್ದಾನೆ.

ಶಿವಕೋಟಾಚಾರ್ಯನು ಪ್ರತಿ ಕಥೆಯ ಆರಂಭದಲ್ಲಿ ಬಳಸುವ ಪ್ರಾಕೃತ ಗಾಹೆ ಮತ್ತು ಕಥೆಯ ಕೊನೆಯಲ್ಲಿ ಬಳಸುವ ಶ್ಲೋಕವು ಕಥೆಯ ಆಶಯವನ್ನು ಮತ್ತು ಅದರ ಪರಿಣಾಮವನ್ನು 'ನುಡಿಗಟ್ಟಿನ ರೂಪ'ದಲ್ಲಿ ಸಮರ್ಥವಾಗಿ ಹಿಡಿದಿಡುತ್ತವೆ. ವಿದ್ಯುಚ್ಚೋರನೆಂಬ ರಿಸಿಯ ಕಥೆ ಆರಂಭದಲ್ಲಿರುವ ಗಾಹೆ ಹೀಗಿದೆ. "ದಂಸೇಹಿಯ ಮಸಕೇಹಿಯ ಖಜ್ಜಂತೋ ವೇದಣಂ ಪರಮಘೋರಂ/ವಿಜ್ಜುಚ್ಚೋರೋ ಅಧಿಯಾಸಿಯ ಪಡಿವಣ್ಣೋ ಉತ್ತಮ ಅಟ್ಠಂ" ಎಂಬುದು ಅವನು ಕಡುಕಷ್ಟ ಅನುಭವಿಸಿ, ಚಾರಿತ್ರಶೀಲನಾದುದನ್ನು ಹೇಳುತ್ತದೆ. ಕಾರ್ತಿಕ ಋಷಿ ಕತೆಯ ಕೊನೆಯಲ್ಲಿನ ಶ್ಲೋಕವು ಇಂತಿದೆ. "ರಾಜ್ಞಿ ಧರ್ಮಣಿ ಧರ್ಮಿಷ್ಠಾಃ ಪಾಪೇ ಪಾಪ ಸಮಾಶ್ರಿತಾಃ/ ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ" ಎಂಬುವುದು ಒಟ್ಟು ಕಥೆಯ ಸಾರವನ್ನು ಪ್ರತಿನಿಧಿಸುತ್ತದೆ. ರಾಜನು ಧರ್ಮನಿಷ್ಠನಾಗಿದ್ದರೆ ಪ್ರಜೆಗಳು ಧರ್ಮನಿಷ್ಠರಾಗಿರುತ್ತಾರೆ. ಕಥೆಯಲ್ಲಿ ಅಗ್ನಿರಾಜ ತನ್ನ ಮಗಳಾದ ಕೃತಿಕೆಯನ್ನು ಹೆಂಡತಿಯಾಗಿ ಮಾಡಿಕೊಂಡು ಪಾಪ ಕೃತ್ಯವೆಸಗುತ್ತಾನೆ. ಇದರಿಂದ ಅವನ ಪ್ರಜೆಗಳು ಸಹ ಪಾಪ ಕೃತ್ಯದಲ್ಲಿ ಆಸಕ್ತರಾಗುತ್ತಾರೆ. ಒಂದು ಕೌಟುಂಬಿಕ ವ್ಯವಸ್ಥೆಯ ನೈತಿಕ ಅಧಃಪತನವೂ, ಸಾಮಾಜಿಕ ಅಧಃಪತನಕ್ಕೆ ಕಾರಣವಾಗುವ ದುರಂತವನ್ನು ಕಥೆ ತೆರೆದಿಡುತ್ತದೆ. ವಡ್ಡಾರಾಧನೆಯ ಕಥನಗಳ ಆಶಯವನ್ನು ಒಂದು ಚೌಕಟ್ಟಿನಡಿಯಲ್ಲಿ ಗಾಹೆ ಮತ್ತು ಶ್ಲೋಕಗಳು ಕಟ್ಟಿಕೊಡುವ ಮಾದರಿ ಕಥನ ಕ್ರಮದ ದೃಷ್ಟಿಯಿಂದ ಮುಖ್ಯವಾದುದು.

ವಡ್ಡಾರಾಧನೆಯ ಕಥನ ಕ್ರಮದ ಮತ್ತೊಂದು ವೈಶಿಷ್ಟ್ಯವೆಂದರೆ – ಇಡೀ ಕಥಾಗುಚ್ಛಗಳಲ್ಲಿ ಕೆಲವು ಪುನಾರಾವೃತ್ತಿ ಕಂಡುಬರುತ್ತವೆ. ಆದರೆ ಈ ಪುನರುಕ್ತಿಗಳು ಕತೆಗೆ ಒಂದು ಚೌಕಟ್ಟನ್ನು ಒದಗಿಸಿವೆಯೇ ಹೊರತು, ಕಥನದ ಪರಿಪೂರ್ಣತೆ ತೊಡಕಾಗಿಲ್ಲ. 'ಅದೆಂತೆಂದೊಡೆ : ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್...' 'ಅತ್ಯಂತ ರೂಪ ಲಾವಣ್ಯ ಕಾಂತ ಹಾವ ಭಾವ ವಿಲಾಸವಿಭ್ರಮಂಗಳನೊಡೆಯಳ್....'

'ಅಂತರ್ವಗಳಪ್ಪ ವಿಷಯ ಕಾಮಭೋಗಂಗಳನನುಭವಿಸುತ್ತಿರೆ...' 'ವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹರಿಸುತ್ತಂ...' 'ಸೈರಿಸಿ (ಸಾಧಿಸಿ) ಸ್ವರ್ಗಾಪವರ್ಗ್ಗ ಸುಖಂಗಳನೆಯ್ದುಗೆ', ಎಂಬುವ ಪದಪುಂಜಗಳು ಎಲ್ಲ ಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇಂತಹ ಪದಸಮುಚ್ಚಯಗಳು ಸಿದ್ಧವಾಕ್ಯದಂತೆ ಕಂಡರೂ ಅವೇ ಕಥನ ಕ್ರಮಕ್ಕೆ ಔಚಿತ್ಯವನ್ನು ಒದಗಿಸಿವೆ.

ಕಥೆಯೊಳಗೊಂದು ಕಥೆಯನ್ನು ತರುವುದು ಕಥನಕಲೆಯ ಒಂದು ಆದರ್ಶ ಗುಣವಾಗಿದೆ. ಕಥೆಯೊಳಗಿನ ಕತೆಗಳು ಮುಖ್ಯ ಕಥಾ ವಸ್ತುವಿನ ಆಶಯವನ್ನು ವಿಸ್ತರಿಸುವ ಅಥವಾ ಓದುಗನಿಗೆ ಸ್ಪಷ್ಟಪಡಿಸುವ ಕೆಲಸವನ್ನು ಮಾಡುತ್ತವೆ. ಒಂದು ಕಥೆಯೊಳಗೆ ಒಂದು ಅಥವಾ ಒಂದಕ್ಕಿಂತ ಹೆಚ್ಚು ಕಥೆಗಳನ್ನು ಸಹ ಕಥನಕಾರ ತರಬಹುದು. ಶಿವಕೋಟ್ಯಾಚಾರ್ಯನು ಸುಕುಮಾರಸ್ವಾಮಿ ಕಥೆಯಲ್ಲಿ ಐದು ಉಪಕಥೆಗಳನ್ನು ಮುಖ್ಯ ವಸ್ತುವಿಗೆ ಪೂರಕವಾಗಿ ಜೋಡಿಸಿದ್ದಾನೆ. ಸುಕುಮಾರಸ್ವಾಮಿ ಕತೆಯೊಳಗಿನ ವಸುಸೇನನ ಉಪಕತೆಯು ವಂಚನೆಯನ್ನು ತಿಳಿಸಿದರೆ, ಸುದಾಮೆ ಉಪಕತೆಯು ಕಳ್ಳತನ ಅರುಹಿದರೆ, ಗಂಭೀರೆಯೆಂಬ ಮುದಕಿಯ ಉಪಕತೆ ಮೋಸವನ್ನು ಪ್ರತಿನಿಧಿಸಿದರೆ, ಮೋದಾಳಿ ಉಪಕತೆಯು ಹಾದರವನ್ನು ಚಿತ್ರಿಸುತ್ತದೆ. ವೀರಪೂರ್ಣನ ಉಪಕತೆಯು ದುರಾಸೆಯನ್ನು ನಿರೂಪಿಸುತ್ತದೆ. ಹೀಗೆ ಐದು ಉಪಕತೆಯ ಮೂಲಕವಾಗಿ ಸೋಮಶರ್ಮ ಮತ್ತು ತ್ರಿವೇದಿಯ ಮಗಳಾದ ನಾಗಶ್ರೀಗೆ ನೀತಿಯನ್ನು ಭಟ್ಟಾರರು ಬೋಧಿಸುತ್ತಾರೆ. ಇಲ್ಲಿನ ಉಪಕತೆಗಳು ಒಂದೊಂದು ಪ್ರತ್ಯೇಕ ಕಥೆಯಾಗುವಂತ ಗುಣವನ್ನು ಹೊಂದಿವೆ. ಹಾಗಾಗಿ ಈ ಉಪಕತೆಗಳಿಂದ ಪ್ರಧಾನ ಕಥೆಗೆ ಒಂದು ಸಂಘಟಿತ ಆಶಯ ಶಕ್ತಿಯೂ ದಕ್ಕುವಂತಾಗಿದೆ. ಐವತ್ತು ಪುಟಗಳ ವಿಸ್ತಾರವಿರುವ ಸುಕುಮಾರಸ್ವಾಮಿಯ ಕಥೆ, ಒಂದೂವರೆ ಪುಟದಷ್ಟು ಚಿಕ್ಕದಾಗಿರುವ ಅಭಯಘೋಷನೆಂಬ ರಿಷಿಯ ಕಥೆ, ಎರಡು ಮಾದರಿಯ ಕಥೆಗಳು ವಡ್ಡಾರಾಧನೆಯಲ್ಲಿವೆ. ಕರಿ(ಆನೆ)ಯನ್ನು ಚಿತ್ರಿಸುವ ಕಥನ ವಿಸ್ತಾರ, ಕರಿಯನ್ನು ಕನ್ನಡಿಯೊಳಗೆ ತೋರಿಸುವ ಕಥನ ಗುಣಗಳೆರಡು ಶಿವಕೋಟ್ಯಾಚಾರ್ಯನಿಗೆ ಸಾಧ್ಯಾವಾಗಿರುವುದು, ಅವನ ಕಥನ ಪ್ರತಿಭೆಯ ಉದಾತ್ತ ಗುಣವಾಗಿದೆ.

ಪಾಶ್ಚಾತ್ಯರ ಆಧುನಿಕ ಸಣ್ಣಕತೆಗಳ ನಿರೂಪಣಾ ತಂತ್ರಗಳಲ್ಲಿ ಸಿಂಹಾವಲೋಕನ ವಿಧಾನ (ಫ್ಲ್ಯಾಶಬ್ಯಾಕ್) ಪ್ರಮುಖವಾದುದು. ಕಥಾ ಆರಂಭದಲ್ಲಿಯೇ ಕಥೆ ಮುಗಿದಂತೆ ತೋರುವ ನಿರೂಪಣೆ, ಒಂದೆರಡು ಪುಟದೊಳಗೆ, ಮತ್ತೆ ಮರು ಆರಂಭವಾದಂಥೆ ಕಾಣಿಸುತ್ತದೆ. ಪ್ರಾರಂಭದ ಕಥನವು ಸಾಗುತ್ತ ಅಂತಿಮವಾಗಿ, ಮತ್ತೆ ಆರಂಭಕ್ಕೆ ಪ್ರವೇಶ ಪಡೆಯುತ್ತದೆ. ವಡ್ಡಾರಾಧನೆಯಲ್ಲಿಯೂ ಸಿಂಹಾವಲೋಕನ ತಂತ್ರವನ್ನು ನೆನಪಿಸುವ ಕಥೆಗಳಿವೆ. ಈ ತಂತ್ರಗಾರಿಕೆ ಕೆಲವು ಸಾರಿ, ಸಂದರ್ಭವೊಂದನ್ನು ನೆನಸಿಕೊಂಡು ಕಥನ ಮುಂದುವರಿಯಲು ಅನುಕೂಲವನ್ನು ಮಾಡುತ್ತವೆ. ಕಥೆಯಲ್ಲಿನ ಜನ್ಮಾಂತರಗಳ ನಿರೂಪಣೆಯು ಮುಖ್ಯವಾಗಿ ಸಿಂಹಾವಲೋಕನ ತಂತ್ರವನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆ. ಇದು ಸಹಜವಾಗಿ ಕಂಡುಬರುವುದರಿಂದ ತಂತ್ರಕ್ಕೆ ಮೀರಿದ ಗುಣವಾಗಿ

ಕಾಣುತ್ತದೆ. ವಿದ್ಯುಚ್ಚೋರನೆಂಬ ರಿಷಿಯ ಕತೆಯಲ್ಲಿ ಯಮದಂಡನೆಂಬ ತಳವಾರನ ಕೈಗೆ ಸಿಲುಕಿಕೊಂಡಿದ್ದ ವಿದ್ಯುಚ್ಚೋರನು ತಾನು ಬಾಲಕನಾಗಿರುವಾಗ ಉಪಾಧ್ಯಾಯರಲ್ಲಿ ಅಭ್ಯಾಸ ಮಾಡುವಾಗ ಮಾಡಿದ ಪ್ರತಿಜ್ಞೆಯನ್ನು ತಳವಾರನಿಗೆ ನೆನಪಿಸುತ್ತಾನೆ. "ಒಂದುಂ ದೋಷಮಿಲ್ಲದೆ ನಿನ್ನಂ ಕೊಲ್ಲಿಸಿದೆನೊ ಕೊಲಿಸಿದೆನೊ ಪೂಣ್ದ ಪ್ರತಿಜ್ಞೆಯಂ ನೆನೆವೆಯೋ ನೆನೆಯೆಯೊ..." ಎಂದು ವಿದ್ಯುಚ್ಚೋರ ತಳಾರನಿಗೆ ಹೇಳುವ ಮಾತು ಸಿಂಹಾವಲೋಕನ ಕ್ರಮವಾಗಿದೆ. ಅರಸನ ಬಂಗಾರದ ಸರ ಕದ್ದ ಕಳ್ಳ ಸಿಗದೆ ತಳಾರನಿಗೆ ತಲೆದಂಡವಾಗುವುದನ್ನು ವಿದ್ಯುಚ್ಚೋರನು ಅರಸನಿಗೆ ವಾಸ್ತವ ಅರಿಕೆ ಮಾಡಿ, ಶಿಕ್ಷೆಯಿಂದ ಪಾರು ಮಾಡುತ್ತಾನೆ. ಸುಕುಮಾರಸ್ವಾಮಿ ಕತೆಯಲ್ಲಿ ವಾಯುಭೂತಿ ಜನ್ಮಾಂತರದಲ್ಲಿ ಪೊಲತಿಯಾಗಿ ಕಡು ಕಷ್ಟದಿಂದ ಇರುವುದನ್ನು ಭಟಾರರಿಂದ ಅರಿಯುವ ಅಗ್ನಿಭೂತಿಯ ಕ್ರಮವೂ ಸಿಂಹಾವಲೋಕನ ಮಾದರಿಯಾದ್ದಾಗಿದೆ. ಶಿವಕೋಟ್ಯಾಚಾರ್ಯನ ಈ ಕಥನ ಕ್ರಮದಿಂದ 'ಅವನ ಕಥನ ಪ್ರತಿಭೆ' ಆಧುನಿಕವೆನಿಸುತ್ತದೆ.

ಒಂದು ಕತೆಗೆ ಇರಲೇಬೇಕಾದ ಪ್ರಾಥಮಿಕ ಗುಣವೆಂದರೆ ಕಥನ ಕುತೂಹಲ ನಿರೂಪಣೆ. ಬಹಳ ಸಾರಿ ಕುತೂಹಲರಹಿತವಾದ ಆಕರ್ಷಕ, ಉದಾತ್ತ ಸಂಗತಿಗಳು ಕೂಡಾ ಪರಿಪೂರ್ಣ ಕಥೆಯಾಗಲು ಸಾಧ್ಯವಾಗದೇ ಇರುವುದಕ್ಕೆ, ಕಥನ ಕುತೂಹಲ ಗುಣ ಕಾರಣವಾಗಿರುತ್ತದೆ. ಸುಕುಮಾರಸ್ವಾಮಿ ಕಥೆಯಲ್ಲಿ ಬರುವ ಗಂಭೀರೆಯೆಂಬ ಮುದುಕಿಯ ಉಪಕತೆಯೂ ತನ್ನ ಕುತೂಹಲ ಕಥನದಿಂದ, ಇಲ್ಲಿನ ಉಪಕತೆಯಲ್ಲಿ ವಿಶಿಷ್ಟವಾಗಿ ನಿಲ್ಲುತ್ತದೆ. ವಿದ್ಯುಚ್ಚೋರನೆಂಬ ರಿಷಿಯ ಕತೆಯಲ್ಲಿ ಕುತೂಹಲವು. ಕಳ್ಳ ಯಾರೆಂಬ ತಳವಾರನ ಕುತೂಹಲ ಓದುಗನ ಕುತೂಹಲವಾಗಿಯೂ ಕಂಡು ಬರುತ್ತದೆ. ವಡ್ಡಾರಾಧನೆಕಾರನು ಕಥೆಯಿಂದ ಕಥೆಗೆ ಕುರೂಹಲದ ಭಿನ್ನ ಭಿನ್ನ ಪ್ರಯೋಗ ಮಾಡುತ್ತಾ ಹೋಗಿದ್ದಾನೆ. ಹೀಗಾಗಿ ಅವನೆಲ್ಲ ಕತೆಗಳಿಗೆ ಒಂದು ಆಕರ್ಷಕ ಕಥನ ಕ್ರಮವು ಸಾಧಿತವಾಗಿದೆ. ಕೆಲವು ಕಡೆಗೆ ಕಥೆಯ ವಸ್ತುವೂ ಸಹ ಕುತೂಹಲವನ್ನು ಪೋಷಿಸಿಕೊಂಡು ಬಂದಿರುವುದು ಗಮನಾರ್ಹ ಅಂಶವಾಗಿದೆ.

ಈ ಮೇಲಿನ ಅಂಶಗಳು ಒಂದು ಕಥನ ಕ್ರಮವನ್ನು ಪ್ರತಿನಿಧಿಸುವ ಭಾಷಾ ನಿರೂಪಣಾ ಶೈಲಿ, ವಸ್ತುವಿನ ಸೋಪಜ್ಞತೆ, ಪಾತ್ರಗಳ ವ್ಯಕ್ತಿತ್ವದ ಸ್ವರೂಪ, ತಂತ್ರಗಾರಿಕೆಯನ್ನು ಗಮನದಲ್ಲಿರಿಸಿಕೊಂಡು ಅನುಸಂಧಾನ ಮಾಡಿದಂತಾಯಿತು. ಇದರಾಚೆಗೂ ಒಂದು ಆದರ್ಶ ಕಥನ ವರ್ತಮಾನಕ್ಕೆ ಸ್ಪಂದಿಸುವ ಗುಣವು ಮುಖ್ಯವೆನ್ನಿಸುತ್ತದೆ. ಒಂದು ಸಮರ್ಥವಾದ ಕಥನ ಪಠ್ಯವು ವರ್ತಮಾನದೊಡನೆ ಮುಖಾಮುಖಿಯಾಗುತ್ತಾ, ಸಾರ್ವತ್ರಿಕವಾಗುವ ಹರವುಗಳನ್ನು ಹರಿಬಿಡುತ್ತದೆ. ವಡ್ಡಾರಾಧನೆಯ ಕಥಾಗುಚ್ಚದಲ್ಲಿನ ಅನೇಕ ಕಥೆಗಳು, ಅದು ರಚನೆಯಾದ ಕಾಲದ ಸಾಮಾಜಿಕ ಸ್ಥಿತಿಗತಿಯನ್ನು ತಿಳಿಯಲು ಆಕರಗಳನ್ನು ಒದಗಿಸುತ್ತದೆ. 'ವೀರಶ್ರೀಯೆಂದು ಪೆಸರನಿಟ್ಟು ಬಳೆದೊಡಾಕೆಯಂ ಕೋಗಳಿಯನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರ್...' '...ತೆಂಕನಾಟ ಕಿಷ್ಕಿಂಧಮೆಂಬ ಪರ್ವತಮೆಯ್ದಿದರಿಮೇಗೆ ರಾತ್ರಿ ಪ್ರತಿಮಾಯೋಗಂ ಗೆಯ್ದೊರ್...' ಎಂಬ ವಾಕ್ಯಗಳಲ್ಲಿನ ಕೋಗಳಿ ಮತ್ತು ಕಿಷ್ಕಿಂಧೆ ಪಟ್ಟಣಗಳು ಆ ಕಾಲದ ಭೌಗೋಳಿಕ ಪರಿಸರವನ್ನು

ದಾಖಲಿಸುತ್ತವೆ. ಈ ಮೂಲಕ ಕಥೆ ಕಲ್ಪನೆಯ ದಾಟಿ, ವಾಸ್ತವಕ್ಕೆ ನೆಲೆ ಪಡೆಯುತ್ತದೆ. ಇದೇ ಕಥೆಯಲ್ಲಿ ಬರುವ 'ಪಗರಣ' ಎಂಬುವ ಜನಪದ ಕಲೆಯೊಂದು ಆ ಕಾಲದ ಸಾಂಸ್ಕೃತಿಕ ಸಂಗತಿಯನ್ನು ಉಲ್ಲೇಖಿಸುವುದು ಮಹತ್ವದ ವಿಚಾರ. ಕ್ರೌಂಚನೆಂಬ ಅರಸ ವೀರಶ್ರೀ ಅಣ್ಣನಿಗೊದಗಿದ ದುರ್ಗತಿಯ ದುಃಖದಿಂದ ಪಾರು ಮಾಡಲು, ರಾಣಿ ನಗಿಸಲು 'ಲೋಗರ'ನೊಬ್ಬನು ಪಗರಣ ವೇಷ ಹಾಕಿ ರಾಣಿಯನ್ನು ನಗಿಸುವಲ್ಲಿ ಯಶಸ್ವಿಯಾಗುತ್ತಾನೆ. ಈ ಸಂದರ್ಭವೂ ಉಳಿದ ಸಾಹಿತ್ಯ ಪಠ್ಯಗಳಲ್ಲಿ ಬರುವ 'ಪಗರಣ'ದ ಉಲ್ಲೇಖವನ್ನು ಅರಿಯಲು ಪ್ರಮುಖವಾದ ಆಕರವಾಗಿದೆ.

ರಾಮಾಯಣ ಮಹಾಕಾವ್ಯದಲ್ಲಿ ಅಹಲ್ಯೆಗೆ ಒದಗಿದ ಶಾಪವು, ರಾಮನ ಸ್ಪರ್ಶದಿಂದ ಮುಕ್ತಳಾಗುವಿಕೆ, ಪುರುಷನಿಂದ ಕೊಡಲ್ಪಟ್ಟ ಶಾಪ, ಪುಣ್ಯಪುರುಷನೆಂಬ ರಾಮನಿಂದ ಶಾಪ ಮುಕ್ತಳಾಗುವಿಕೆ ಪುರುಷ ಪ್ರಜ್ಞೆಯದಾದರೆ, ವಡ್ಡಾರಾಧನೆಯ ಸುಕುಮಾರಸ್ವಾಮಿ ಕತೆಯಲ್ಲಿ ವಾಯುಭೂತಿಯ ಅತ್ತಿಗೆಯನ್ನು ಒದ್ದಾಗ, ಅವಳು ಶಾಪ ಹಾಕುವುದು ಮಹಿಳಾ ಪ್ರಜ್ಞೆಯದು. ಸೋಮದತ್ತೆಯು "ಎನ್ನನ್ ಒದೆದ ನಿನ್ನ ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಮಾಗಿ ಅಪ್ಪೊಡಂ ಕೊಂದು ಮಕ್ಕಲ್ವರಸು ತಿಂಬೆನಕೆಂದು ನಿದಾನಂಗೆಯ್ದು" ಎಂಬುವ ಶಾಪದ ಮನೋಭಾವ ಮಹಿಳಾ ಸಂವೇದನೆ ನೆಲೆಯಿಂದ ಮಹತ್ವದ್ದಾಗಿದೆ. ಇದೇ ಕಥೆಯಲ್ಲಿ ವಾಯುಭೂತಿಯು ತಾನು ಮಾಡಿದ ಪಾಪ ಕಳೆಯಲು ಜನ್ಮಾಂತರಗಳಲ್ಲಿ ಹುಟ್ಟುವುದು ಪ್ರಾಣಿ ಮತ್ತು ಅಸ್ಪೃಶ್ಯ ಹೆಣ್ಣಾಗಿಯೇ. "ಚಂಪಾ ನಗರಮೆಂಬುದು ಪೊಳಲಲ್ಲಿ ಪೆಣ್ಣಾಯಾಗಿ ಮಾದೆಗರ ಮನೆಯೊಳ್ ಪುಟ್ಟಿಸತ್ತು ಮತ್ತಮಾಪೊರಲೊಳ್ ಮಾದೆಗರ್ಗ್ಗೆ ಪ್ರಧಾನನಪ್ಪನಿಳನೆಂದ ಮಾದೆಗಂಗೆಂ ಕೇಶಿಯೆಂಬ ಮಾದೆಗಿಗಂ ಮಗಳ್ ದುರೂಪೆ ದುರ್ವ್ವರ್ಣೆ ದುರ್ಗಂಧೆ ದುಸ್ಸ್ವರೆ ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ ವ್ಯಾಧಿಪೀಡಿತೆ ಕ್ಷುಧಾಗ್ನಿಯಿಂ ಬಳ್ದೆದೊಳೊಂದು ದಿವಸಮುದ್ಯಾನವನಕ್ಕೆ ಪೋಗಿ ನೇರಲ ಪಣ್ಗಳಂ ತಡವರಿಸಿಗಾಯಲ್ದುಯ್ದು ತಿನ್ನುತ್ತಿರ್ಪಳ್". ಆ ಬದುಕಿನಲ್ಲಿನ ಕಷ್ಟಗಳನ್ನು ಅನುಭವಿಸಿ, ಸುಖಿಯಾಗಿ ಮಾತ್ರ ಮೇಲ್ಜಾತಿಯ ಗಂಡಾಗಿ ಹುಟ್ಟುವುದು. ಆ ಕಾಲದ ಸಮಾಜದಲ್ಲಿ ಹೆಣ್ಣು ಮತ್ತು ಅಸ್ಪೃಶ್ಯರನ್ನು ಗ್ರಹಿಸುವ ಬಗೆಯನ್ನು ಶಿವಕೋಟ್ಯಾಚಾರ್ಯ ನಿರೂಪಿಸುತ್ತಾನೆ.

ಇವೆಲ್ಲ ಕಥನ ಕ್ರಮ ಪ್ರತಿನಿಧಿಸುವ ಅಂಶಗಳು ಮೂಲಕವಾಗಿ ವಡ್ಡಾರಾಧನೆಯು ಕನ್ನಡದ ಮಹತ್ವದ ಗದ್ಯ ಪಠ್ಯದ ಸ್ಥಾನವನ್ನು ಅಲಂಕರಿಸಿದೆ. ಇಲ್ಲಿನ ಕತೆಗಳು ಪ್ರಾಚೀನವಾದರೂ, ಸಮಕಾಲೀನ ಉದ್ದೇಶವನ್ನು ಅರಿಯಲು ಅನುಕೂಲವಾಗುವ ರೀತಿಯಲ್ಲಿವೆ. ಎಲ್ಲ ಕಥೆಗಳನ್ನು ಅವಲೋಕಿಸಿದಾಗ ಧಾರ್ಮಿಕ ಎನ್ನಿಸುವ ಸಂಗತಿಗಳು ಎಷ್ಟರ ಮಟ್ಟಿಗೆ ಬಂದಿವೆ ಎಂದರೆ, ಪ್ರಜ್ಞಾಪೂರ್ವಕವಾಗಿಯೇ ನಾವೇ ಹುಡುಕಿ ಓದಿಕೊಳ್ಳದ ಹೊರತು, ಒಣಗಿ ಹೋದ ನದಿಯ ಕಪ್ಪೆಚಿಪ್ಪಿನಂತೆ ಮೇಲ್ನೋಟಕ್ಕೆ ಕಾಣಸಿಗಲಾರವು. ಎಲ್ಲ ತೀರ್ಥಂಕರರ ಕಥೆಯನ್ನು ಅರುಹಬೇಕೆಂಬ ತರಾತುರಿಯ ಚಾವುಂಡರಾಯನ ಕಥನ ಧೋರಣೆಯಾಗಲಿ, ದೇಸೀ ಉಪಮೆ, ನುಡಿಗಟ್ಟುಗಳಲ್ಲಿ ಲಲಿತ ಶೈಲಿಯ ನಯಸೇನನ ಧರ್ಮಾಮೃತ ಕಥನದ ಧಾಟಿಗಿಂತ ಭಿನ್ನವಾಗಿ, ವಡ್ಡಾರಾಧನೆಕಾರನ

ಆಪ್ತವೆನ್ನಿಸುವ ಕಥನಕ್ರಮದಿಂದ ಮನಸ್ಸು ಆನಂದಾನುಭೂತಿಗೆ ಒಳಗಾಗುತ್ತದೆ. ಈ ಎಲ್ಲ ಕಾರಣಗಳ ದೆಸೆಯಿಂದ ಶಿವಕೋಟ್ಯಾಚಾರ್ಯರ ವಡ್ಡಾರಾಧನೆ ಕಥನವು ಕನ್ನಡ ಸಾಹಿತ್ಯ ಲೋಕದಲ್ಲಿ ಮಿನುಗು ತಾರೆಯಾಗಿ ನಿಲ್ಲಲು ಸಾಧ್ಯವಾಗಿದೆ. ಪಾಶ್ಚಾತ್ಯ ಕಥನ ಮಾದರಿಯ ಸರ್ವ ಲಕ್ಷಣಗಳನ್ನು ಒಳಗೊಳ್ಳುವ ಪರಿಪೂರ್ಣ ಪಠ್ಯವಾಗಿ ವಡ್ಡಾರಾಧನೆ, ವರ್ತಮಾನದಲ್ಲೂ ಹೊಸ ಹೊಸ ಅಧ್ಯಯನಗಳಿಗೆ ಮುಖಾಮುಖಿಯಾಗುವ ಕಾರಣದಿಂದ 'ಕಾಲಾತೀತ ಪಠ್ಯ'ವಾಗಿ ನಿಲ್ಲುತ್ತದೆ.



ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೪. ಕನ್ನಡ ಸಾಹಿತ್ಯ ಪರಂಪರೆ ಮತ್ತು ಜನಪರತೆ

-ಡಾ. ಪಿ.ವಿ. ನಾರಾಯಣ*

ಈ ಲೇಖನದ ಶೀರ್ಷಿಕೆಯನ್ನು ಗಮನಿಸಿದರೆ ಅಲ್ಲಿ ಎರಡು ಅಂಶಗಳಿರುವುದು ಎದ್ದು ಕಾಣುತ್ತದೆ ; ಅವುಗಳೆಂದರೆ ಸಾಹಿತ್ಯ ಪರಂಪರೆ ಹಾಗೂ ಜನಪರತೆ ಎಂಬಿವು. ಈ ಎರಡರ ಸ್ವರೂಪವನ್ನು ಮೊದಲು ಸ್ಪಷ್ಟಪಡಿಸಿಕೊಂಡರೆ ನಮ್ಮ ಚರ್ಚೆಗೊಂದು ಖಚಿತ ನೆಲೆ ಒದಗುತ್ತದೆ. ಈಗ ಕನ್ನಡ ಸಾಹಿತ್ಯ ಪರಂಪರೆಯ ಬಗ್ಗೆ ಇನ್ನೊಂದು ಅಂಶವನ್ನೂ ನಾವಿಲ್ಲಿ ಮನದಟ್ಟು ಮಾಡಿಕೊಳ್ಳಬೇಕು. ಅದೆಂದರೆ ಬರವಣಿಗೆ ಆರಂಭಗೊಳ್ಳುವ ಮುಂಚಿನಿಂದಲೂ ಜಾನಪದ ಪರಂಪರೆ ಇದ್ದಿರಬೇಕು. ಆದರೆ ಅದರಲ್ಲಿನ ಕೃತಿಗಳ ರಚನಾ ಕಾಲವನ್ನು ನಿಗದಿಪಡಿಸುವುದು ಅಸಾಧ್ಯದ ಮಾತಾಗಿರುವುದರಿಂದ ಅದರಲ್ಲಿನ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಿಲ್ಲ. ಜಾನಪದದ ಅಧ್ಯಯನ ನೆಲೆಗಳು ಬೇರೆಯವೇ ಆದ್ದರಿಂದ ನಾನಿಲ್ಲಿ ಚರ್ಚೆಗೆ ಒಳಪಡಿಸುವುದು ಲಿಖಿತ ಸಾಹಿತ್ಯವನ್ನು ಮಾತ್ರ. ಕನ್ನಡದ ಬರವಣಿಗೆಯು ಒಂದು ಸಾವಿರದ ಆರು ನೂರು ವರ್ಷಗಳಿಂದ ಇರುವ ದಾಖಲೆ ನಮಗೆ ಸಿಕ್ಕಿದರೂ, ಸಾಹಿತ್ಯ ಕಳೆದ ಒಂದು ಸಾವಿರದ ಇನ್ನೂರು ವರ್ಷಗಳಿಂದ ನಿರಂತರವಾಗಿ ಬೆಳೆದು ಬಂದಿರುವುದಕ್ಕೆ ಪುರಾವೆಯಿದೆ. ಅಂದರೆ ಆ ಹಿಂದೆಯೂ ಕನ್ನಡ ಸಾಹಿತ್ಯ ನಿರ್ಮಾಣವಾಗುತ್ತಿತ್ತು. ಆದರೆ ಬರಹ ರೂಪದಲ್ಲಿ ನಮಗಿಂದು ದೊರೆಯುತ್ತಿಲ್ಲ ಎಂದರ್ಥ. ನಮಗೆ ದೊರೆಯುವ ಅತ್ಯಂತ ಪ್ರಾಚೀನ ಕನ್ನಡ ಗ್ರಂಥ, ಎಲ್ಲರಿಗೂ ತಿಳಿದಿರುವಂತೆ, 'ಕವಿರಾಜಮಾರ್ಗ' ನಮಗೆ ಪೂರ್ತಿ ದೊರೆತಿದೆ. ಕಳೆದ ಸುಮಾರು ನೂರ ಹದಿನಾಲ್ಕು ವರ್ಷಗಳಿಂದ (ಅದು ಮೊದಲು ಪ್ರಕಟವಾದದ್ದು ೧೮೯೮ರಲ್ಲಿ, ಕೆ.ಬಿ. ಪಾಠಕ್ ಅದರ ಸಂಪಾದಕರು) ಅದರ ಬಗ್ಗೆ ನಿರಂತರವಾಗಿ ಚರ್ಚೆಗಳು ನಡೆಯುತ್ತಲೇ ಬಂದಿದೆ. ಅದುವರೆಗೆ ಬಂದ ಕನ್ನಡದ ಪ್ರಮುಖ ಲೇಖಕರ ಅನೇಕ ಹೆಸರುಗಳೂ ಉಲ್ಲೇಖಗೊಂಡಿವೆ; ಆದರೆ ಅವುಗಳಲ್ಲಿ ಯಾರ ಗ್ರಂಥವೂ ನಮಗೆ ದೊರೆತಿಲ್ಲ. ಹಾಗೆಯೇ ಆ ಗ್ರಂಥದ ಕಾಲದಿಂದ

* # ೩೦, ತಂಗಾಳಿ, ೨ನೇ ಕ್ರಾಸ್, ಆರ್.ಬಿ.ಐ. ಕಾಲೋನಿ, ಜಯನಗರ ೩ನೇ ಬ್ಲಾಕ್ ಪೂರ್ವ, ಬೆಂಗಳೂರು-೫೬೦೦೧೧. ಮೊ. ೯೯೦೦೧೯೬೫೧೭

ಆಧುನಿಕಪೂರ್ವ ಕಾಲದವರೆಗೆ ಕನ್ನಡದಲ್ಲಿ ರಚಿತವಾದ ಎಲ್ಲ ಕೃತಿಗಳೂ ನಮಗೆ ಸಿಕ್ಕಿಲ್ಲವಾದರೂ, ಸಿಕ್ಕಿರುವ ಗ್ರಂಥರಾಶಿ ಅಪಾರವಾಗಿದೆ; ಇನ್ನು ಹತ್ತೊಂಬತ್ತನೆಯ ಉತ್ತರಾರ್ಧದಿಂದ ಈಚಿನವರೆಗೆ ರಚಿತವಾದ ಅಗಾಧ ಸಾಹಿತ್ಯ ತನ್ನ ಪ್ರಕಾರವೈವಿಧ್ಯ ಹಾಗೂ ಗುಣ-ಗಾತ್ರಗಳಲ್ಲಿ ಗಮನಾರ್ಹವಾಗಿದೆ. ಇದನ್ನು ಗಮನದಲ್ಲಿರಿಸಿಕೊಂಡೇ ಹಲವರು ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿವಿಧ ದೃಷ್ಟಿಕೋನಗಳಿಂದ ರಚಿಸಿದ್ದಾರೆ. ಹೀಗಾಗಿ ಕನ್ನಡ ಸಾಹಿತ್ಯ ಪರಂಪರೆಯ ಕುರಿತಾದ ಎಲ್ಲ ಚರ್ಚೆಗಳೂ ಕವಿರಾಜಮಾರ್ಗದಿಂದಲೇ ಆರಂಭಗೊಳ್ಳುವುದು ಸಹಜ.

ಇನ್ನು ಜನರಪತೆ ಎಂಬುದರ ಬಗೆಗಿನ ನಿರ್ವಚನ. ಎಲ್ಲ ಪರಿಕಲ್ಪನೆಗಳಂತೆಯೇ ಇದೂ ಕಾಲಕಾಲಕ್ಕೆ, ಅಷ್ಟೇಕೆ ವ್ಯಕ್ತಿ ವ್ಯಕ್ತಿಗೆ, ಭಿನ್ನವಾಗಬಹುದು. ಆದ್ದರಿಂದ ನಾನು ಅದನ್ನು ಹೇಗೆ ಪರಿಭಾವಿಸುತ್ತೇನೆ ಎಂಬುದನ್ನು ಸ್ಪಷ್ಟಪಡಿಸಬೇಕು. ಶಬ್ದವೇ ಸೂಚಿಸುವ ಹಾಗೆ ಜನ ಎಂದರೆ ಸಾಮಾನ್ಯ ಜನತೆ; ಅದರ ಅಂತರಂಗವನ್ನು, ಅದರ ಆಕಾಂಕ್ಷೆಗಳನ್ನು, ತವಕ-ತಲ್ಲಣಗಳನ್ನು, ನಿರೀಕ್ಷೆಗಳನ್ನು, ಜೀವನಸ್ವರೂಪ ಹಾಗೂ ಜೀವನದರ್ಶನಗಳನ್ನು ಒಳಗೊಳ್ಳುವುದೇ ಜನಪರತೆ ಎನ್ನಬಹುದೇನೋ. ಏಕೆಂದರೆ ಕಾಲಕಾಲಕ್ಕೆ, ಸಮುದಾಯ ಸಮುದಾಯಕ್ಕೆ ಮೌಲ್ಯಸ್ವರೂಪ ಬದಲುಗೊಳ್ಳುತ್ತದೆ, ಒಂದು ಕಾಲದವರಿಗೆ, ಒಂದು ಸಮುದಾಯಕ್ಕೆ ಒಳಿತೆನಿಸುವುದು ಇನ್ನೊಂದರ ಆ ಪರಿಭಾವನೆಗಿಂತ ಭಿನ್ನವಾಗಿರಬಹುದು. ಹೀಗಾಗಿ ಶ್ರೇಷ್ಠವೆನಿಸಿಕೊಳ್ಳುವ ಸಾಹಿತ್ಯ ಕೃತಿಯೊಂದು ಯಾವುದರ ಬಗ್ಗೆಯೂ ನೇರವಾಗಿ ಪರವಿರೋಧಗಳನ್ನು ವ್ಯಕ್ತಪಡಿಸುವುದಿಲ್ಲ. ಅಥವಾ ವ್ಯಕ್ತಪಡಿಸಬಾರದು. ಹಾಗೆಂದು ಬರಹಗಾರನಿಗೆ ತನ್ನದೇ ಆದ ಒಂದು ನಿಲವು ಇರುವುದಿಲ್ಲ ಎಂದರ್ಥವಲ್ಲ. ಅದು ಕೃತಿಯಲ್ಲಿ ಅಂತರ್ವಾಹಿನಿಯಾಗಿರುತ್ತದೆ. ಇಂಥವು ಜನಮನವನ್ನು ತನ್ನಲ್ಲಿ ಒಳಗೊಳ್ಳುತ್ತದೆ, ಜನಕಲ್ಪನೆಯ ಒಳ್ಳೆಯದು ಅಥವಾ ಕೆಟ್ಟುದನ್ನು ನಿರ್ಭಾವುಕ ನೆಲೆಯಲ್ಲಿ ಒಳಗೊಳ್ಳುತ್ತ, ತನ್ನ ನಿರ್ವಹಣೆಯಲ್ಲಿಯೇ ಅಂಗೀಕಾರಾರ್ಹವಾದುದನ್ನು ಸೂಚಿಸುತ್ತದೆ. ಇದನ್ನೇ, ಹಿಂದಿನವರ ಮಾತಿನಲ್ಲಿ ಹೇಳಬೇಕಾದರೆ, 'ಪ್ರಬಂಧಧ್ವನಿ' ಎನ್ನಬಹುದೇನೋ. ಕೃತಿಯು ಯಾವ ಕಾಲದ್ದೇ ಆಗಿರಲಿ, ಸಮಕಾಲೀನತೆಯನ್ನು ಒಳಗೊಳ್ಳುತ್ತಲೇ ಸಾರ್ವತ್ರಿಕತೆಯನ್ನು (?) ಸೂಚಿಸುತ್ತಿರುತ್ತದೆ. ತನ್ನ ಕಾಲದ ವಾಸ್ತವಗಳ ಚಿತ್ರಣದ ಮೂಲಕವೇ ಆದರ್ಶ ಸ್ಥಿತಿಯನ್ನು ಧ್ವನಿಸುತ್ತಿರುತ್ತದೆ. ಇದು ಸಾಧ್ಯವಾಗುವುದು ಬರಹಗಾರನ ವ್ಯಕ್ತಿತ್ವದ ಎರಡು ನೆಲೆಗಳ ಕಾರಣದಿಂದ; ಒಂದು ಅವನ ವೈಯಕ್ತಿಕ ನೆಲೆ, ಮೇಲೆ ಕಾಣುವ ಮತ್ತು ಜಾಗೃತ ಪ್ರಜ್ಞೆಯ ಅವನ ಬದುಕು ಒಂದಾದರೆ; ಅವನನ್ನು ಲೇಖಕನಾಗಿ ರೂಪಿಸುವ ಅಂತಃಪ್ರಜ್ಞೆ ಇನ್ನೊಂದು. ಈ ಎರಡು ನೆಲೆಗಳು ಎಲ್ಲ ವ್ಯಕ್ತಿಗಳಿಗೂ ಅನ್ವಯಿಸುವ ಮಾತು. ಎಲ್ಲರಲ್ಲಿಯೂ ಒಂದು ಒಳ ವ್ಯಕ್ತಿತ್ವ ಅಥವಾ ಕಾಣದ ವ್ಯಕ್ತಿತ್ವ ಇರುತ್ತದೆ. ಇದು ವ್ಯಕ್ತಿ ವ್ಯಕ್ತಿಗೆ ಭಿನ್ನವಾಗುತ್ತದೆ, ಸ್ವರೂಪದಲ್ಲಿ ಮತ್ತು ಪ್ರಮಾಣದಲ್ಲಿ. ಅದನ್ನೇ ಅಥವಾ ಅಂಥದನ್ನು ಏನೆಂದು ಕರೆಯಬಹುದು? ಹಿಂದಿನವರು ಅದನ್ನು 'ಪ್ರತಿಭೆ' ಎಂದು ಕರೆದರು. ಪ್ರತಿಭೆ ಎಂದರೆ ಹೊಳಹು ಎಂದರ್ಥ; ಎಂದರೆ ಕಾಣದುದನ್ನು ಅಥವಾ ಕಾಣುವುದರ ಹಿಂದಿರುವುದನ್ನು ಸ್ಪಷ್ಟಪಡಿಸಿಕೊಳ್ಳಬಹುದಾದ ಸಾಮರ್ಥ್ಯ

ಎನ್ನಬಹುದು. ಹಾಗೆಯೇ ಬರಹಗಾರನನ್ನಾಗಿ ರೂಪಿಸುವ ಏನೋ ಒಂದು ಅಂಶವಿರುತ್ತದಲ್ಲ (ಹೀಗಿರಲೇಬೇಕು, ಯಾಕೆಂದರೆ ಎಲ್ಲರೂ ಲೇಖಕರಾಗುವುದಿಲ್ಲವಲ್ಲ!) ಅದು ಪಕ್ಷಗಳನ್ನು ವಹಿಸುವಂಥದಲ್ಲ; ಹೇಗೆ ಬೆಳಕು ನಿರ್ಭಾವುಕವಾಗಿ ವಸ್ತುಸ್ವರೂಪವನ್ನು ಕಾಣಿಸುತ್ತದೋ ಹಾಗೆಯೇ ಇದೂ. ಹೀಗಾಗಿ ಈ ನೆಲೆಯಲ್ಲಿ ಮಾನವೀಯತೆ ಮುಖ್ಯವಾಗುತ್ತದೆ. ಇಂಥದೊಂದು ಮಿಡುಕನ್ನು ನಾನು ಜನಪರತೆ ಎಂದು ಕರೆಯುತ್ತೇನೆ. ಈ ತಾತ್ತ್ವಿಕತೆಯ ಹಿನ್ನೆಲೆಯಲ್ಲಿ ನನ್ನ ಮುಂದಿನ ಚರ್ಚೆ ಸಾಗುತ್ತದೆ.

ಈಗ ಕನ್ನಡ ಸಾಹಿತ್ಯ ಪರಂಪರೆಯ ಮೊದಲ ಹಂತ 'ಕವಿರಾಜಮಾರ್ಗ'ದ್ದೇ. ಇದೊಂದು ಶಾಸ್ತ್ರಗ್ರಂಥ, ಇದರಲ್ಲಿ ಒಂದಷ್ಟು ಅಲಂಕಾರಶಾಸ್ತ್ರ, ಒಂದಷ್ಟು ವ್ಯಾಕರಣ – ಎಲ್ಲ ಇವೆ. ಇದಕ್ಕೆ ಪ್ರೇರಕವಾಗಿರುವುದು ದಂಡಿಯ 'ಕಾವ್ಯಾದರ್ಶ' ಮತ್ತು ಭಾಮಹನ 'ಕಾವ್ಯಾಲಂಕಾರ' ಎಂಬ ಎರಡು ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳು. ಆದರೆ ಇದನ್ನು ರಚಿಸಲು ಕಾರಣ, ಅದರ ಮೊದಲ ಪರಿಚ್ಛೇದದಲ್ಲಿ ಸ್ಪಷ್ಟಗೊಳ್ಳುತ್ತದೆ: ಅದೆಂದರೆ ಕನ್ನಡಕ್ಕೆ ಸಂಸ್ಕೃತದಿಂದ ಭಿನ್ನವಾದ, ಹೆಚ್ಚು ಶ್ರೀಮಂತವಾದ(?) ಕಾವ್ಯಸಂಪತ್ತು ಇದೆ; ಹಾಗಾಗಿ ಅದನ್ನು ಅರ್ಥ ಮಾಡಿಕೊಳ್ಳಲು ಕನ್ನಡಕ್ಕೆ ತನ್ನದೇ ಆದ ಒಂದು ಚರ್ಚೆಯ ನೆಲಗಟ್ಟು (ಇದನ್ನೇ ಕಾವ್ಯಮೀಮಾಂಸೆ ಎನ್ನುವುದು) ಬೇಕು, ಅದನ್ನು ರೂಪಿಸುವುದು. ಸಂಸ್ಕೃತಕ್ಕಿಂತ ಕನ್ನಡ ಭಿನ್ನವಾಗಿರಲು ಕಾರಣವೆಂದರೆ ಸಂಸ್ಕೃತ ಬರವಣಿಗೆಯ ಭಾಷೆ, ಕನ್ನಡ ಜನಭಾಷೆ ಎಂಬ ಕಾರಣವನ್ನು ಈ ಕೃತಿ ಬಾಯಿಬಿಟ್ಟು ಹೇಳದಿದ್ದರೂ ಅದು ಅದರ ಮನಸ್ಸಿನಲ್ಲಿದೆ ಎನಿಸುತ್ತದೆ. ಈ ಕನ್ನಡಪರ ನಿಲವಿನಿಂದಾಗಿಯೇ (ಕನ್ನಡವೆಂದರೆ 'ಕವಿರಾಜಮಾರ್ಗ'ದ ದೃಷ್ಟಿಯಲ್ಲಿ ನುಡಿ, ನಾಡು ಮತ್ತು ಜನಪದ – ಈ ಮೂರೂ ಹೌದು) ಇಲ್ಲಿ ಭಾಷೆಯ ಬಗೆಗೆ ಹೇಗೋ ಜನತೆಯ ಬಗೆಗೂ ಅಭಿಮಾನದ ಮಾತುಗಳಿವೆ. ಸಂಸ್ಕೃತದಲ್ಲಿಲ್ಲದ ಬೆದಂಡೆ, ಚತ್ತಾಣ, ಗದ್ಯಕಥೆಯಂತಹ ವಿಶಿಷ್ಟ ಕಾವ್ಯಪ್ರಕಾರಗಳು ಕನ್ನಡದ ವೈಶಿಷ್ಟ್ಯ ಎಂದು ಗ್ರಂಥಕಾರ ಹೇಳುತ್ತಾನೆ. ಮೊದಲೆರಡು ಹೆಸರುಗಳನ್ನು ಗಮನಿಸಿದರೆ ಇವು ನೇರವಾಗಿ ಜಾನಪದಕಾವ್ಯವನ್ನಲ್ಲದಿದ್ದರೂ, ಅದರ ಗುಣಗಳನ್ನೊಳಗೊಂಡ ಗ್ರಾಂಥಿಕ ಪ್ರಕಾರವನ್ನು ಸೂಚಿಸುತ್ತದೆ. ಅಂದರೆ 'ಕವಿರಾಜಮಾರ್ಗ'ವು ಜನತೆಗೆ ಹತ್ತಿರವಾದ ಅಂಶಗಳನ್ನು ಎದ್ದು ಕಾಣುವಂತೆ ಪ್ರಸ್ತಾಪಿಸಿರುವುದೇ ಇದರ ಜನಪರತೆಯ ಪ್ರತೀಕ ಎನ್ನಬಹುದು. ಜೊತೆಗೆ ಸಂಸ್ಕೃತವು ಹೊರೆಯಾಗದ ಹಾಗೆ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳಬೇಕು ಎಂಬ ಬಗ್ಗೆಯೂ ಸುಳುಹುಗಳನ್ನು ಕೃತಿಯು ನೀಡುತ್ತದೆ. ಅಂದರೆ, ಬರಹವು ಜನಸಾಮಾನ್ಯರ ಬದುಕನ್ನು ಒಳಗೊಳ್ಳಬೇಕಾದ ಅವಶ್ಯಕತೆಯನ್ನು ಸೂಚಿಸುವಂತೆ ನನಗೆ ಕಾಣಿಸುತ್ತದೆ.

ಮುಂದಿನ ಎರಡು ಶತಮಾನಗಳಿಗೂ ಹೆಚ್ಚಿನ ಅವಧಿಯಲ್ಲಿ ರಚಿತವಾದ ಕಾವ್ಯಪ್ರಕಾರ ಚಂಪೂ. ಅದರ ಭಾಷೆ ಹಳಗನ್ನಡ, ಬರೆದವರು ರಾಜರಿಗೆ ಹತ್ತಿರವಾಗಿದ್ದವರು, ಮೇಲೆ ನೋಟಕ್ಕೆ ಕಾಣುವಂಥದು ರಾಜಶ್ರೇಷ್ಠತೆಯ ಪ್ರತಿಪಾದನೆ – ಇತ್ಯಾದಿಗಳು. ಆದರೆ ಈ ಪ್ರಕಾರದ ಅತ್ಯುತ್ಕೃಷ್ಟ ಮಾದರಿಯಾದ ಪಂಪ ತನ್ನೆರಡು ಕೃತಿಗಳಲ್ಲಿ ('ಆದಿಪುರಾಣ' ಮತ್ತು 'ವಿಕ್ರಮಾರ್ಜುನವಿಜಯ') ಪ್ರತಿಪಾದಿಸುವುದು

ಜೈನಧರ್ಮದ ವೈಶಿಷ್ಟ್ಯ ಮತ್ತು ರಾಜಶ್ರೇಷ್ಠತೆ ಎನ್ನಿಸಿದರೂ – ಅವುಗಳು ನಾನು ಹಿಂದೆ ಹೇಳಿದ ಸಮಕಾಲೀನ ವಾಸ್ತವಗಳು – ಅವನ ಒಳನೋಟ ಗುರುತಿಸುವುದು ವ್ಯಕ್ತಿಜೀವನದ ಸಾರ್ಥಕ್ಯದ ಸ್ವರೂಪ ಮತ್ತು ತನ್ನ ಕಾಲದ ಜನಸಮುದಾಯದ ಪ್ರಮುಖ ತಲ್ಲಣಗಳಾದ ಜಾತಿದುರಂತ ಮತ್ತು ಸಾಮ್ರಾಜ್ಯಶಾಹಿಯ ಕ್ರೌರ್ಯಗಳನ್ನು, ಇವು ಆ ಕಾಲದಲ್ಲಿ ನೆಲೆಯೂರಿದ್ದುದಕ್ಕೆ ಕಾರಣ 'ಜಾತಿ' ದೈವನಿರ್ಮಿತ ಹಾಗೂ 'ರಾಜಾ ಪ್ರತ್ಯಕ್ಷದೇವತಾ' ಎಂಬ ನಂಬಿಕೆಗಳ ಬಿತ್ತನೆ. ಪ್ರಾಯಶಃ ಈ ನೋಟದ ಭಿನ್ನತೆಯನ್ನೇ ಅವನು 'ಆದಿಪುರಾಣ'ದಲ್ಲಿ 'ಕಾವ್ಯಧರ್ಮ' ಎಂದೂ, 'ವಿಕ್ರಮಾರ್ಜುನ ವಿಜಯ'ದಲ್ಲಿ 'ದೇಸಿ' ಅಥವಾ 'ವರ್ಣಕ' ಎಂದೂ ಕರೆದಿದ್ದಾನೆಂಬುದು ನನ್ನ ತಿಳಿವಳಿಕೆ.

ಈ ಎರಡೂ ಜನವಿರೋಧಿ ಅಂಶಗಳನ್ನೇ – ಜಾತಿ ಮತ್ತು ಸಾಮ್ರಾಜ್ಯಶಾಹಿ – ಪಂಪನಾದ ಎರಡು ಶತಮಾನಗಳ ಬಳಿಕ ಸ್ಫೋಟಿಸಿದ ವಚನ ಚಳವಳಿ ತೀವ್ರವಾಗಿ ವಿರೋಧಿಸಿದ್ದು (ಇದರಿಂದ ಪಂಪನ ದೂರದೃಷ್ಟಿ ಮತ್ತು ಅವನ ಸೂಕ್ಷ್ಮಸಂವೇದನೆ ಎಂಥದೆಂಬುದು ಸ್ಪಷ್ಟವಾಗುತ್ತದೆ). ಈ ಎರಡೂ ವೈದಿಕ ವ್ಯವಸ್ಥೆಯ ಜನವಿರೋಧಿ ಪ್ರಮುಖಾಂಶಗಳು; ಅಸಮಾನತೆಯ ಬೀಜಗಳು. ಆ ಕಾರಣದಿಂದಲೇ ವಚನ ಚಳವಳಿಯು (ಅದರ ಮಿತಿಗಳೇನೇ ಇರಲಿ) ಈ ಎರಡನ್ನೂ ಜೊತೆಗೆ ಲಿಂಗತಾರತಮ್ಯವನ್ನೂ – ಮತ್ತೆ ಮಿತಿಯಲ್ಲಿ – ತೀವ್ರವಾಗಿ ವಿರೋಧಿಸಿತು. 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ಬೀಜಮಂತ್ರದ ಈ ಚಳವಳಿಯು ಜಾತಿವಿಂಗಡಣೆ ಕೃತಕವಾದುದು ಎಂದು ವೈಚಾರಿಕ ನೆಲೆಯಲ್ಲಿ ಪ್ರತಿಪಾದಿಸಿದುದಲ್ಲದೆ, 'ನೆಲನಾಳ್ದನ ಹೆಣನೆಂದಡೆ ಒಂದಡಕೆಗೆ ಕೊಂಬುವರಿಲ್ಲ' ಎಂಬಂತಹ ಮಾತುಗಳಲ್ಲಿ ರಾಜನ ದೈವಾಂಶವನ್ನು ಅಲ್ಲಗಳೆಯಿತು. ವಚನ ಸಾಹಿತ್ಯ ಈ ಚಳವಳಿಯ ಒಂದು ಉಪಉತ್ಪನ್ನ ಅಷ್ಟೆ. ವಚನಗಳನ್ನು ಸಾಹಿತ್ಯವೆಂದು ಪರಿಭಾವಿಸಬೇಕೆಂದು ವಚನಕಾರರು ನಿರೀಕ್ಷಿಸಿರಲಿಲ್ಲ. ಆದರೂ ಅದು ಮುಂದಿನ ಕನ್ನಡ ಸಾಹಿತ್ಯದ ಮೇಲೆ ವ್ಯಾಪಕವೂ ಆಳವೂ ಆದ ಪ್ರಭಾವವನ್ನು ಬೀರಿತು. ಕನ್ನಡ ಸಾಹಿತ್ಯ ಮತ್ತೆಂದೂ ಹಿಂದಿರುಗಿ ನೋಡಲೇ ಇಲ್ಲ.

ವಚನಗಳ ಕಾಲವಾದ ಮೇಲೆ ಅದರಿಂದ ಪ್ರಭಾವಿತವಾದ ಮುಖ್ಯ ಕವಿಗಳೆಂದರೆ ಹರಿಹರ ಮತ್ತು ರಾಘವಾಂಕ. ಐತಿಹ್ಯಗಳ ಪ್ರಕಾರ, ಹರಿಹರ ಹೊಯ್ಸಳ ರಾಜನ ಬಳಿ ನೌಕರನಾಗಿದ್ದವನು, ಅದನ್ನು ಬಿಟ್ಟು ಹಂಪೆಗೆ ಬಂದ. ಅವನು ಮೊದಲು ಚಂಪೂ ಪ್ರಕಾರದಲ್ಲಿ 'ಗಿರಿಜಾ ಕಲ್ಯಾಣ'ವನ್ನು ಬರೆದರೂ, ಮುಂದೆ ಕತೆ ಹೇಳಲು ಬಳಸಿದ್ದು ರಗಳೆಗಳನ್ನು. ವಸ್ತು, ಭಾಷೆ, ಶೈಲಿ, ಕಾವ್ಯಸ್ವರೂಪ, ಆಶಯ – ಈ ಎಲ್ಲದರಲ್ಲಿಯೂ ಅವನು ಹೊಚ್ಚ ಹೊಸತನವನ್ನು – ಸಾಮಾನ್ಯರಿಗೆ ಹತ್ತಿರವಾದುದನ್ನು – ಅಳವಡಿಸಿಕೊಂಡ. ಕಾಯಕಜೀವಿಗಳ ಭಕ್ತಿ–ಕಾಯಕನಿಷ್ಠೆಗಳೇ ರಗಳೆಗಳ ಕಾವ್ಯವಸ್ತು, ನಡುಗನ್ನಡ ಭಾಷೆ, ಸರಳ ಶೈಲಿ, ಅಷ್ಟಾದಶವರ್ಣನೆಗಳಿಲ್ಲದ ಹಾಗೂ ಸಾಮಾನ್ಯರ ಅಸಾಮಾನ್ಯತೆಯನ್ನು ಸಾರುವ ರೀತಿ ಅವನ ಕಾವ್ಯದ ಎದ್ದು ಕಾಣುವ ಅಂಶಗಳು. ರಾಘವಾಂಕನೂ ಹಾಗೆಯೇ, ತನ್ನ ಸೋದರಮಾವ ಹರಿಹರನಂತೆಯೇ, ಹೊಸ

ಆಶಯದೊಡನೆ ಕಾವ್ಯರಚನೆ ಮಾಡಿದ; ತನ್ನ ಅತ್ಯಂತ ಹೃದ್ಯ ಕೃತಿಯಾದ 'ಹರಿಶ್ಚಂದ್ರ ಕಾವ್ಯ'ದಲ್ಲಿ ಅವನು ಸೂಕ್ಷ್ಮವಾಗಿ ತೆರೆದು ತೋರಿಸಿದ್ದೆಂದರೆ ಜಾತಿಯ ಅರ್ಥಹೀನತೆ ಮತ್ತು ರಾಜತ್ವದ ಟೊಳ್ಳುತನ ಹಾಗೂ ಗಟ್ಟಿ ವ್ಯಕ್ತಿತ್ವದ ಸ್ವರೂಪ ಎಂಥದು ಎಂಬಿವುಗಳನ್ನು.

ಈ ಕವಿಗಳಿದ್ದ ಹದಿಮೂರನೇ ಶತಮಾನದ ಬಳಿಕ ಬಂದದ್ದು ವೀರಶೈವ ಪುರಾಣಗಳ ರಚನೆಯ ಯುಗ. 'ಶೂನ್ಯ ಸಂಪಾದನೆ' ಎಂಬ ಅದ್ಭುತ ಕೃತಿಯು ಒಂದು ನೆಲೆಯಲ್ಲಿ ವಚನ ಚಳವಳಿಯ ಮೌಲ್ಯಗಳ ಕ್ರೋಢೀಕರಣವನ್ನು ನಾಟಕೀಯವಾಗಿ ಮಾಡಿದುದು ಮಾತ್ರವಲ್ಲದೆ, ಅಲ್ಲಮಪ್ರಭು ಎಂಬ ರೂಪಕದ ಮೂಲಕ ಜೀವವೊಂದರ ಪಯಣಸ್ವರೂಪವನ್ನು, ಹಾಗೂ ಅದಕ್ಕೆ ಪೂರಕವಾದ ಮೌಲ್ಯಗಳನ್ನು ಚಿತ್ರಿಸುತ್ತದೆ. ಜೊತೆಗೆ, ಅದರ ನಾಲ್ಕು ಪರಿಷ್ಕರಣಗಳ ಹಿಂದೆ ಸಮುದಾಯಪ್ರಜ್ಞೆಯೊಂದು ಕೆಲಸ ಮಾಡಿರುವುದೂ ಅಪೂರ್ವ ಸಂಗತಿ. ಚಾಮರಸನ 'ಪ್ರಭುಲಿಂಗಲೀಲೆ'ಯಂತಹ ಪುರಾಣಗಳು ಜನಭಾಷೆಯಲ್ಲಿ ತಮ್ಮ ನಂಬುಗೆಯ ಮೌಲ್ಯಪ್ರತಿಪಾದನೆಗೆ ತೊಡಗಿದ್ದವು. ಈ ಕಾಲದ ವಚನರಚನೆ ಸಂಪೂರ್ಣವಾಗಿ ಮಠಶಾಹಿಗೆ ಒಳಗಾದರೂ, ಮುಂದೆ ತತ್ತ್ವಪದಗಳ ರಚನೆಗೆ ಅಡಿಪಾಯ ಹಾಕಿ ಕೆಳವರ್ಗದವರೂ ಅದರಲ್ಲಿ ಪಾಲುಗೊಳ್ಳುವಂತಾದದ್ದು ವಿಶೇಷ (ನಾನಿಲ್ಲಿ ಹೇಳುತ್ತಿರುವುದು ಕಾವ್ಯಗಳು ಜನರಿಗೆ ತಲುಪಬೇಕೆಂಬ ಆಕಾಂಕ್ಷೆಯಿಂದ ಅವರಿಗೆ ಹತ್ತಿರವಾದ ಮತ್ತು ಪ್ರಿಯವಾದ ಭಾಷಾ ಶೈಲಿಗಳನ್ನು ಆಯ್ಕೆ ಮಾಡಿಕೊಳ್ಳುವುದರ ಮೂಲಕ ಅವು ಜನಪರತೆಯನ್ನು ತೋರಿಸಿದವು ಎಂಬ ಅಂಶವನ್ನೇ ಹೊರತು, ಅವು ಪ್ರತಿಪಾದಿಸಿದ ಮೌಲ್ಯಗಳ ಶ್ರೇಷ್ಠತೆಯನ್ನಲ್ಲ).

ಈ ಹಂತದ ಮುಂದಿನದು ವಿಜಯನಗರದಂತಹ ಬಲಿಷ್ಠ ಸಾಮ್ರಾಜ್ಯವೊಂದರ ಜೊತೆಜೊತೆಯಲ್ಲಿಯೇ ನಡೆದ ಕನ್ನಡ ಕಾವ್ಯರಚನೆ. ಒಂದೆಡೆ ಚಾಮರಸ-ಕುಮಾರವ್ಯಾಸನಂತಹ ಕವಿಗಳೂ, ಹತ್ತಾರು ಹರಿದಾಸರೂ ರಾಜಶಾಹಿಯ ನೆರಳಿಗೆ ಹೋಗದೆ ರಚನೆಗಳನ್ನು ಮಾಡಿದುದೂ ಒಂದು ವಿಶೇಷ. ಏಕೆಂದರೆ ಕನ್ನಡ ಕಾವ್ಯಪರಂಪರೆ ಚಂಪೂ ನಂತರ ರಾಜನನ್ನು ಹಿಂದಿನ ಆರಾಧನಾ ಭಾವದಿಂದ ನೋಡಲೇ ಇಲ್ಲ. ಆಸ್ಥಾನದಲ್ಲಿ ಕುಳಿತು ರಾಜನನ್ನು ಹೊಗಳಿದ ಕವಿಗಳು ಎರಡನೆಯ ದರ್ಜೆಯವರು ಅಥವಾ ಅದಕ್ಕೂ ಕೆಳಗಿನವರು. ಮಿಕ್ಕವರು ಸ್ವತಂತ್ರಪ್ರವೃತ್ತಿಯವರು. ಹರಿದಾಸ ಪರಂಪರೆಯ ವ್ಯಕ್ತ ಮೌಲ್ಯಗಳೇನೇ ಇರಲಿ ಅದು ಜನತೆಯ ಮನೆ ಬಾಗಿಲಿಗೆ ಹೋಗಿ ಹಾಡಿ ಕುಣಿದದ್ದೂ ಕನ್ನಡದ ಗೇಯತೆಯನ್ನು ಮನವರಿಕೆ ಮಾಡಿಕೊಟ್ಟದ್ದೂ ಸಾಮಾನ್ಯವಲ್ಲ. ಮಿಕ್ಕ ಹರಿದಾಸರು ಒಪ್ಪಿತ ವೈದಿಕ ಹಾಗೂ ದ್ವೈತದ ಮೌಲ್ಯಗಳನ್ನು ಪ್ರತಿಪಾದನೆ ಮಾಡಿದರೂ, ಅದನ್ನು 'ರಾಮಧಾನ್ಯಚರಿತೆ'ಯಲ್ಲಿನ ಧಾನ್ಯಗಳ ರೂಪಕದಿಂದ ತಾರತಮ್ಯವನ್ನು ಪ್ರಶ್ನಿಸಿದುದಲ್ಲದೆ, ಕೀರ್ತನೆಗಳ ಜೊತೆಗೆ ಕಾವ್ಯಗಳನ್ನು ಬರೆದು ಮೊದಲ ಬಂಡಾಯ ಕವಿಯಾದುದು ಅದ್ಭುತ ಸನ್ನಿವೇಶ. ಹಾಗೆಯೇ ನಂಜುಂಡಕವಿಯಂಥವರು ಜಾನಪದ ಛಂದಸ್ಸಾದ ಸಾಂಗ್ಯವನ್ನು ದೀರ್ಘ ಕಾವ್ಯಕ್ಕೆ ಅಳವಡಿಸಿಕೊಂಡದ್ದೂ, ಜಾನಪದ ವೀರನೊಬ್ಬನನ್ನು ಕಾವ್ಯನಾಯಕನನ್ನಾಗಿಸಿಕೊಂಡದ್ದೂ ಸಾಹಿತ್ಯವು ಜನರ ಕಡೆ ಮತ್ತಷ್ಟು ಹತ್ತಿರವಾದದ್ದರ ಸೂಚಕ.

ಮುಂದೆ ಸ್ವಲ್ಪ ಕಾಲ ಚಿಕ್ಕದೇವರಾಜನಂತಹ ರಾಜರ ಆಸ್ಥಾನಕ್ಕೆ ಕಾವ್ಯ ಮತ್ತೆ ಹೋದರೂ, ಅಲ್ಲಿ ಹೊನ್ನಮ್ಮನಂತಹ ಸೇವಕವೃತ್ತಿಯ ಹೆಣ್ಣುಮಗಳಿಗೂ ಕಾವ್ಯರಚನೆಗೆ ಎಡೆಯಾಯಿತೆಂಬುದು ಅಚ್ಚರಿಯ ಸಂಗತಿ. ಆ ಮುಂದೆ ಹೆಳವನಕಟ್ಟೆ ಗಿರಿಯಮ್ಮನಂತಹ ಹಲವರು ಸ್ತ್ರೀಯರು ಕಾವ್ಯರಚನೆ ಮಾಡುವಂತಾದುದನ್ನೂ ನಾವು ಗಮನಿಸಬೇಕು. ಅಲ್ಲದೆ ಯಾವ ಕಟ್ಟುಪಾಡುಗಳಿಗೂ ಒಳಗಾಗದ ಅತ್ಯಂತ ಸ್ವತಂತ್ರ ಪ್ರವೃತ್ತಿಯ ಸರ್ವಜ್ಞ ಕನ್ನಡ ಜನಮನದ ಹಾಗೂ ಜಾನಪದ ವಿವೇಕದ ದನಿಯಾಗಿ ಎಲ್ಲೆಡೆ ಪಸರಿಸಿದುದು ಸಾಹಿತ್ಯವು ಜನರಿಂದಲೇ ಹೊಮ್ಮಿದುದರ ಸಂಕೇತ; ಜನಪದ ಹಾಗೂ ಶಿಷ್ಟಗಳ ಮಿಲನದ ಸಂದರ್ಭ. ಆವರೆಗೆ ಬಹುಪಾಲು ಧರ್ಮದ ಬೊಗಸೆಯಲ್ಲೇ ಬೆಳೆದ ಸಾಹಿತ್ಯದಲ್ಲಿ ಗದ್ಯ ಅಪರೂಪವಾಗಿತ್ತು; ಮುಂದೆ ಅದು ವ್ಯಾಪಕವಾಗಿ ಬೆಳೆದು, ಕೆಂಪು ನಾರಾಯಣನಂಥವನು ಪೂರ್ತಿ ಲೌಕಿಕವೆಂಬಂತಹ ವಸ್ತುವೊಂದನ್ನು ಆಯ್ದುಕೊಂಡು ಹೊಚ್ಚ ಹೊಸ ಗದ್ಯದಲ್ಲಿ ಬರೆದ 'ಮುದ್ರಾಮಂಜೂಷ'ವು ಆಧುನಿಕತೆ ಹಾಗೂ ಸೆಕ್ಯೂಲರ್ ದೃಷ್ಟಿಕೋನಗಳ ಬಾಗಿಲು ತಟ್ಟಿತು. ಆನಂತರ, ಬ್ರಿಟಿಷ್ ಪ್ರವೇಶದಿಂದ ಹಾಗೂ ಪಾಶ್ಚಾತ್ಯ ಪ್ರಭಾವದಿಂದ ನಮ್ಮ ಮನೋದೃಷ್ಟಿ ಸಂಪೂರ್ಣ ಬದಲಾಗಿ, ಒಂದೆಡೆ ಸೆಕ್ಯೂಲರ್ ಮನೋಭಾವ ಮತ್ತೊಂದೆಡೆ ಪ್ರಕಾರವೈವಿಧ್ಯಗಳು ಕನ್ನಡದಲ್ಲಿ ನೆಲೆಯೂರಲು ತೊಡಗಿ ನೂರಾರು ಹಕ್ಕಿಗಳು ಒಮ್ಮೆಗೇ ಚಿಂವುಗುಟ್ಟುವ ಬೆಳಗು ಕಾಣಿಸಿಕೊಂಡಿತು. ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯದ ಪ್ರಮುಖ ಘಟ್ಟಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಮತ್ತು ಆ ಮುಂದಿನ ಸಾಹಿತ್ಯರಚನೆಯಲ್ಲಿ ಒಂದಿಲ್ಲೊಂದು ಬಗೆಯಲ್ಲಿ ಸಾಹಿತ್ಯ ಹೊಸತನವನ್ನೂ ಜನಪರತೆಯನ್ನೂ ಒಳಗೊಂಡುದು ರೋಚಕ ಇತಿಹಾಸ. ಈಗಿನ ಜಾಗತೀಕರಣದ ದಟ್ಟ ಪಾಶ್ಚಾತ್ಯೀಕರಣದ ಅಮಲಿನ ನಡುವೆಯೂ ಗಮನಾರ್ಹವೆನಿಸುವ ಸಾಹಿತ್ಯ ಕೃತಿಗಳಲ್ಲಿ ಕಾಣುವುದು ಸ್ವತಂತ್ರ ಮನೋಭಾವ, ದೇಸೀಪ್ರೀತಿ ಮತ್ತು ಜನತೆಯ ಬಗೆಗಿನ ಕಳಕಳಿ.

ಒಟ್ಟಾರೆ ನಾನಿಲ್ಲಿ ಒತ್ತಿ ಹೇಳಬಯಸುವುದು ಕನ್ನಡ ಸಾಹಿತ್ಯದ ಆರಂಭದಿಂದ ಇಂದಿನವರೆಗೂ ಅದು ಜನಪರವಾಗಿಯೇ ನಡೆದು ಬಂದಿದೆ ಎಂಬ ಅಂಶವನ್ನು. ಮೊದಲೇ ಸ್ಪಷ್ಟಪಡಿಸಿರುವಂತೆ ಜನಪರತೆಯ ಪರಿಕಲ್ಪನೆ ಕಾಲಕಾಲಕ್ಕೆ ಭಿನ್ನವಾಗುವುದು ಸಹಜ. ಆದರೆ ತನ್ನ ಕಾಲಕ್ಕೆ ಅದು ಮುನ್ನುಡಿಯಿಟ್ಟಿತೆಂಬುದನ್ನು ಮಾತ್ರವೇ ನಾನಿಲ್ಲಿ ಗಮನಿಸಿದ್ದೇನೆ. ಬಸವಲಿಂಗಪ್ಪನವರು ಹೇಳಿದಂತೆ ಕನ್ನಡ ಸಾಹಿತ್ಯದಲ್ಲಿ ರಚಿತವಾದ ಒಟ್ಟು ಸಾಹಿತ್ಯರಾಶಿಯಲ್ಲಿ ಬಹುಪಾಲು ಬೂಸಾ ಎನ್ನುವುದು ನಿಜವಿರಬಹುದು. ಆದರೆ ನಮ್ಮ ಸಾಹಿತ್ಯ ಪರಂಪರೆ ಗೌರವಿಸುತ್ತ ಬಂದಿರುವುದು ಹೊರನೋಟಕ್ಕೆ ಪ್ರತಿಗಾಮಿ ಎಂದು ಕಾಣುವುದರ ಬಸಿರಲ್ಲಿಯೇ ಜನಪ್ರೀತಿಯನ್ನು ಅಡಗಿಸಿಕೊಂಡ ಕೃತಿಗಳನ್ನೇ ಎಂಬುದನ್ನು ಮಾತ್ರ ನಾನಿಲ್ಲಿ ಹೇಳುತ್ತಿರುವುದು. ರಾಶಿರಾಶಿ ಅದಿರಲ್ಲಿ ಸಿಕ್ಕುವುದು ಹಿಡಿಯಷ್ಟು ಚಿನ್ನ ತಾನೇ!

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೫. ನೊಳಂಬರ ಕಾಲದ ಶಾಸನಗಳ ಸಾಮಾಜಿಕ, ಧಾರ್ಮಿಕ ದಾನ ದತ್ತಿಗಳು

-ಡಾ. ಎಚ್. ಜಯಮ್ಮ ಕರಿಯಣ್ಣ*

ಕರ್ನಾಟಕದಲ್ಲಿ ನೊಳಂಬರು ಮಹಾಮಾಂಡಲೀಕರಾಗಿ ಕ್ರಿ.ಶ. ೭೫೦ರಿಂದ ಕ್ರಿ.ಶ. ೧೦೭೮ರವರೆಗೆ ಆಗ್ನೇಯ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಇವರು ತಮ್ಮನ್ನು ಈಶ್ವರ ವಂಶದವರೆಂದು ಹೇಳಿಕೊಂಡಿದ್ದಾರೆ. ಈ ವಂಶದ ಮೊದಲ ಅರಸ ಮಂಗಳ ನೊಳಂಬಾಧಿರಾಜ. ಹೇಮಾವತಿ ಶಾಸನದ ಪ್ರಕಾರ ತ್ರಿನಯನ ವಂಶದಲ್ಲಿ ಮಂಗಳ ನೊಳಂಬಾಧಿರಾಜ ಹುಟ್ಟಿದನು. ಇವನ ಮಗ ಸಿಂಹಪೋತ. ಇವನನ್ನು ಹಲವು ಶಾಸನಗಳು ಕಲಿನೊಳಂಬಾಧಿ ರಾಜ, ಕೊಲ್ಲಿಯರಸ, ಸಿಂಘಪೋತ ಮೊದಲಾದ ಬಿರುದುಗಳೊಂದಿಗೆ ದಾಖಲಿಸಿವೆ. ಇವನ ಮಗ ಚಾರುಪೊನ್ನೇರ->ಒಂದನೇ ಪೊಳಲ್ಚೋರ->ಒಂದನೇ ಮಹೇಂದ್ರ-> ಅಯ್ಯಪದೇವ-> ಬೀರನೊಳಂಬ ಅಣ್ಣಿಗೆ->ಇರಿವ ನೊಳಂಬ ದಿಲೀಪ. ಇವರಲ್ಲದೆ ಈ ವಂಶಕ್ಕೆ ಸೇರಿದ ಬೇರೆ ಬೇರೆ ಅರಸು ಮಕ್ಕಳ ಹೆಸರುಗಳು ಶಾಸನಗಳಲ್ಲಿ ಉಕ್ತವಾಗಿವೆ. ಇವರು ಗಂಗರಿಗೆ, ರಾಷ್ಟ್ರಕೂಟರಿಗೆ, ಬಾದಾಮಿ ಚಾಲುಕ್ಯರಿಗೆ ಮತ್ತು ಕಲ್ಯಾಣಿ ಚಾಲುಕ್ಯರಿಗೆ ಮಾಂಡಲೀಕರಾಗಿ, ಸಾಮಂತರಾಗಿ ಆಳ್ವಿಕೆ ಮಾಡಿದ್ದಾರೆ.

ನೊಳಂಬರು ಅಥವಾ ನೊಳಂಬ ಪಲ್ಲವರೆಂದು ಹೇಳಿಕೊಂಡಿರುವ ಇವರ ರಾಜಧಾನಿ ಈಗಿನ ಆಂಧ್ರ ಪ್ರದೇಶದ ಮಡಕಶಿರಾ ತಾಲೂಕಿನ ಹೆಂಜೇರು ಅಥವಾ ಈಗಿನ ಹೇಮಾವತಿ. ಆರಂಭದಲ್ಲಿ ನೊಳಂಬಳಿಗೆ ಸಾಸಿರವೆಂಬ ಸಣ್ಣ ಪ್ರಾಂತ್ಯದಲ್ಲಿ ಆಧಿಪತ್ಯ ನಡೆಸುತ್ತಿದ್ದರು. ಕ್ರಮೇಣ ನೊಳಂಬವಾಡಿ ೩೨,೦೦೦ ಎಂಬ ವಿಸ್ತಾರವಾದ ಪ್ರದೇಶವನ್ನು ಆಳ್ವಿಕೆ ಮಾಡಿದರು. ಈ ಪ್ರಾಂತ್ಯವು ಈಗಿನ ಕರ್ನಾಟಕದ ಕೋಲಾರ, ತುಮಕೂರು, ಬೆಂಗಳೂರು, ಬಳ್ಳಾರಿ, ಚಿತ್ರದುರ್ಗ ಮತ್ತು ಅದಕ್ಕೆ ಸೇರಿದ ಸುತ್ತಮುತ್ತಲಿನ

* # ೨೯೩೩, ೧೩ನೇ ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು-೫೬೦೦೪೦.
ಮೊ: ೯೪೮೩೮೬೯೭೯೪.

ಪ್ರದೇಶಗಳು. ಹಾಗೂ ತಮಿಳು ನಾಡಿನ ಧರ್ಮಪುರಿ ಮತ್ತು ಈಗಿನ ಆಂಧ್ರಪ್ರದೇಶಕ್ಕೆ ಸೇರಿದ ಅನಂತಪುರ ಜಿಲ್ಲೆಗಳನ್ನೂ ಒಳಗೊಂಡಿದ್ದಿತು. ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕವನ್ನು ಆಳ್ವಿಕೆ ಮಾಡಿದ ನೊಳಂಬರು ಕರ್ನಾಟಕದ ಭವ್ಯ ಇತಿಹಾಸ ಪರಂಪರೆಗೆ ಭದ್ರಬುನಾದಿ ಹಾಕಿದರು. ಇವರು ರಾಜಕೀಯ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದಂತೆ ಕರ್ನಾಟಕದ ಸಾಂಸ್ಕೃತಿಕ, ಸಾಮಾಜಿಕ ಮತ್ತು ಧಾರ್ಮಿಕ ಪರಂಪರೆ ಬೆಳೆಸುವುದರಲ್ಲಿಯೂ ಆಸಕ್ತಿ ವಹಿಸಿದರು.

ಇವರ ಕಾಲದ ವಾಸ್ತುಶಿಲ್ಪ ಶೈಲಿಯಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾರೆ. ರಾಜಧಾನಿಯಾಗಿದ್ದ ಹೆಂಜೇರು ಅಥವಾ ಹೇಮಾವತಿಯಲ್ಲಿ ಹಾಗೂ ಅವರ ಆಳ್ವಿಕೆಗೆ ಸೇರಿದ ಪ್ರದೇಶಗಳಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಕೋಲಾರ ಜಿಲ್ಲೆಯ ಆವನಿ ಅಥವಾ ಆವನ್ಯದಲ್ಲಿ, ನಂದಿ, ತಮಿಳುನಾಡಿನ ಧರ್ಮಪುರಿ, ಅರಳಗುಪ್ಪೆ, ನೊಣವಿನಕೆರೆ, ಬರಗೂರು, ಹೆಬ್ಬಟ, ಕಂಬದೂರು, ಬೇತಮಂಗಲ ಮೊದಲಾದ ಸ್ಥಳಗಳಲ್ಲಿ ಇವರ ಶಿಲ್ಪಶೈಲಿಯ ದೇವಾಲಯಗಳನ್ನು ಇಂದಿಗೂ ನೋಡಬಹುದು. ಆದರೆ ಇವರು ರಚಿಸಿದ ಮೂಲಸ್ಥಿತಿಯಲ್ಲಿರುವ ದೇವಾಲಯಗಳು ಹೆಚ್ಚು ಕಾಣಬರುವುದಿಲ್ಲ. ಆದರೂ ಚೆನ್ನೈನಲ್ಲಿರುವ ವಸ್ತುಸಂಗ್ರಹಾಲಯದಲ್ಲಿ ನೊಳಂಬರ ಶಿಲ್ಪಗಳನ್ನು ಸಂಗ್ರಹಿಸಡಲಾಗಿದೆ.

ನೊಳಂಬ ಅರಸರು, ಅವರ ಅಧಿಕಾರಿಗಳು, ಪುರಜನರು ದಾನದತ್ತಿಗಳನ್ನು ನೀಡುತ್ತಿದ್ದರು. ಅಂತಹ ಸಾಮಾಜಿಕ, ಧಾರ್ಮಿಕ ಕಾರ್ಯಗಳನ್ನು ಮಾಡಿದವರನ್ನು ಅರಸರು ಗೌರವಿಸಿ ಪ್ರಶಸ್ತಿ ಪ್ರಧಾನ ಮಾಡುತ್ತಿದ್ದರು.

೧) ಬಿದಿಯೆರೆಯ ಎಂಬುವನು ಬೆದ್ದುಗೊಂಡೆಯ ಕೆರೆ ಕಟ್ಟಿಸಿದಾಗ ವೀರನೊಳಂಬನು ಅವನನ್ನು ಗೌರವಿಸಿ 'ನೊಳಂಬದೊಡ್ಡನೆಂದು' ಹೆಸರನ್ನು ಕೊಟ್ಟು ಕಡಗವಿಡುತ್ತಾನೆ. ಶ್ರೀಮುಖರಾಮನ ಹೆಸರನ್ನು 'ಶ್ರೀಮುಖ ದೊಡ್ಡನೆಂದು' ಹಾಗೂ ಪೊನ್ನೇರರಸನ ಹೆಸರಿನಲ್ಲಿ 'ಪನ್ನೇರ ದೊಡ್ಡನೆಂದು' ಕಡಗಗಳನ್ನು ತೊಡಿಸಿ ಗೌರವಿಸಿದ್ದಾರೆ.

೨) ಇರಿವ ನೊಳಂಬ ಘಟೆಯಂಕಕಾರನು ಕರವಯ್ಯ ಎಂಬುವವನಿಗೆ ಮುಮ್ಮಡಿ ಪಲ್ಲವಾದಿತ್ಯ ನೊಳಂಬಶೆಟ್ಟಿ ಎಂಬ ಹೆಸರನ್ನಿಟ್ಟು, ಪಟ್ಟವನ್ನು ಕಟ್ಟಿ, ಕೊಡೆ, ಕುದುರೆ, ಅಡ್ಡಣಿಗೆ, ಏರಲ್ ಕುದುರೆ, ಕುಂಚ, ತಳಿಗೆ ಮುಂತಾದವುಗಳನ್ನು ಕೊಟ್ಟಿದ್ದಾನೆ.

೩) ವೀರಮಹೇಂದ್ರ ನೊಳಂಬಾಧಿರಾಜನು ಕೀರ್ತಿಗಾವುಂಡನ ಮಗನಿಗೆ ನೊಳಂಬ ಗಾವುಂಡನೆಂದು ಹೆಸರನ್ನು ಕೊಟ್ಟು ಪಟ್ಟ ಕಟ್ಟುತ್ತಾನೆ.

೪) ಕ್ರಿ.ಶ. ೮೮೩ರ ಕಂಬದೂರು ಶಾಸನವು ಮಹೇಂದ್ರನ ಕಾಲದಲ್ಲಿ ಬೆಳ್ದುಗೊಂಡೆಯ ಗಾಮುಂಡರು ಮತ್ತು ಪಾರ್ವರು (ಬ್ರಾಹ್ಮಣರು) ಸೇರಿ ಆದಿತ್ಯಗೃಹಕ್ಕೆ ಕೆಲವು ದತ್ತಿ ಬಿಟ್ಟ ಉಲ್ಲೇಖವಿದೆ.

ಅರಸರು, ದಂಡನಾಯಕರು, ಪೆರ್ಗಡೆ ಮೊದಲಾದವರು ಊರಳವಿನಲ್ಲಿ ಪೆಣ್ಬುಯಿಲಿನಲ್ಲಿ, ತುರುಗಾಳಗದಲ್ಲಿ, ಕಳ್ಳರೊಡನೆ, ಪ್ರಾಣಿಗಳೊಡನೆ ಹೋರಾಡುವ ಸಂದರ್ಭದಲ್ಲಿ ಮಡಿದ ವೀರರಿಗೆ ದಾನ ದತ್ತಿಗಳನ್ನು ನೀಡಿರುವುದಲ್ಲದೆ, ಶಾಸನ ಕಲ್ಲುಗಳನ್ನು ನೆಡಿಸಿ ಅವರ ಸೇವೆಗಳನ್ನು ಸ್ಮರಿಸಿದ್ದಾರೆ.

ಕ್ರಿ.ಶ. ೯೫೦ರಲ್ಲಿ ನೊಳಂಬಾದಿ ರಾಜನ ಆಳ್ವಿಕೆಯಲ್ಲಿ ಬಲ್ಲಹನ (ರಾಷ್ಟ್ರಕೂಟರ) ದಂಡನಾಯಕ ಕೋಟಯ್ಯನು ನೊಳಂಬರಲ್ಲಿ ಮಣ್ಣನ್ನು (ಭೂಮಿ) ಪಡೆದು ವಿಷ್ಣು ಗೃಹವನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ಹನ್ನೆರಡು ಖಂಡುಗ ಭೂಮಿಯನ್ನು ದಾನ ಮಾಡಿದ್ದಾನೆ.

ನೊಳಂಬರ ಶಾಸನೋಕ್ತ ಆರಂಭದ ಅರಸರಲ್ಲಿ ಒಬ್ಬನಾದ ಸಿಂಹಪೋತನ ಕಾಲದಿಂದ ನಮಗೆ ದೇವಾಲಯದ ರಚನೆಯ ಉಲ್ಲೇಖಗಳು ದೊರೆಯುತ್ತವೆ. ಮುಂದೆ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾನಡಿ ಜಯಸಿಂಹನ ಕಾಲದವರೆಗೂ ದೇವಾಲಯಗಳು ಅವ್ಯಾಹತವಾಗಿ ನಿರ್ಮಾಣಗೊಂಡಿವೆ.

ನೊಳಂಬರ ಕಾಲದಲ್ಲಿ ಅವರ ಪದಾಧಿಕಾರಿಗಳು ಇರುವಂತೆ ಕಾಳಾಮುಖ ಯತಿಗಳು ತಾವು ಸ್ಥಾನಪತಿಗಳಾಗಿದ್ದ ದೇವಾಲಯಗಳಲ್ಲಿ ವಾಸವಿದ್ದು ಸಾಮಾಜಿಕ ಕಾರ್ಯಗಳನ್ನು ನಡೆಸುತ್ತಿದ್ದರು. ಇವರಿಗೆ ಮಹಾಜನರಿಗಿದ್ದ ಸ್ಥಾನಮಾನಗಳು ಇರುತ್ತಿದ್ದವು. ಇವರನ್ನು ಶಾಸನಗಳು ಸ್ಥಾನದ ಆಚಾರ್ಯರು, ಯತಿಗಳು, ಗುರುಗಳೆಂದು ಕರೆದಿವೆ. ಮಹಾಜನರು ಇಲ್ಲದಿದ್ದ ಗ್ರಾಮಗಳಲ್ಲಿ ಈ ಯತಿಗಳು ಪ್ರಮುಖ ಪಾತ್ರ ವಹಿಸುತ್ತಿದ್ದರು. ಪ್ರಸ್ತುತ ಕಾಳಾಮುಖ ಯತಿಗಳನ್ನು ಶಾಸನಗಳಲ್ಲಿ ಶಕ್ತಿ ಪಂಡಿತ, ಧರ್ಮಶಕ್ತಿ ಪಂಡಿತ, ಸೋಮಸಿಂಗ ಭಳಾರ, ಉತ್ತಮರಾಶಿ ಪಂಡಿತ, ಚಂದ್ರಾಭರಣಜೀಯ, ಬ್ರಹ್ಮವೇದಿಜೀಯ, ಅನಂತವೀರ್ಯಯತಿ, ಜೇಷ್ಠರಾಶಿಬಳಾರ, ಕೋಗಳಿಮಲೆಯಾಳಪಂಡಿತ, ಇಂದ್ರನಂದಿ ಪಂಡಿತ, ವಿದ್ಯಾನಿಧಿ ಪಂಡಿತ, ತ್ರಿಭುವನ ಕರ್ತಾರದೇವ ಮುಂತಾದ ಹೆಸರುಗಳಿಂದ ಕರೆಯಲಾಗಿದೆ.

ದೇವಾಲಯಗಳಲ್ಲಿನ ಆಗುಹೋಗುಗಳು ಮತ್ತು ಅವುಗಳ ನಿರ್ವಹಣೆ ಇವರ ಕರ್ತವ್ಯವಾಗಿರುತ್ತಿತ್ತು. ಯತಿಗಳು ಇದ್ದ ದೇವಾಲಯಗಳಲ್ಲಿ ಮಠಗಳೂ ಸಹ ಇರುತ್ತಿದ್ದವು. ಬಹುತೇಕ ಈ ಮಠಗಳು ಬ್ರಹ್ಮಚಾರಿ ಮಠಗಳಾಗಿದ್ದು ಅಲ್ಲಿ ಸ್ಥಾನಪತಿಗಳಾಗಿದ್ದ ಯತಿಗಳು ಬ್ರಹ್ಮಚಾರಿಯಾಗಿರಬೇಕಿತ್ತು. ಅಂತಹ ಒಂದು ಮಠದ ಬಗ್ಗೆ, '.... ಪ್ರತಿಪಾಳಿಪ ಸ್ಥಿತಿ ಬ್ರಹ್ಮಚಾರಿಯಪ್ಪುದು. ಬ್ರಹ್ಮಚಾರಿಯಲ್ಲದಾಷ್ವ ಮಠಪತಿಯು ಮಾತನಾಳಿದರಸರುಂ ನಾಡು ಮೂರು ಕೊತ್ತಳಿಯುಮಯ್ದುಂ ಪಾತಕಜ್ಜಳ ಫಲನೆಯ್ದುವರ್' ಎಂದು ಹೇಳಿದೆ. ಇಲ್ಲಿ ಯತಿಯಾಗಿದ್ದವನು ಬ್ರಹ್ಮಚಾರಿಯಾಗಿರಬೇಕೆಂಬ ನಿಬಂಧನೆಯಿಂದ ಮಠದ ಪರಂಪರೆಯು ಬ್ರಹ್ಮಚಾರಿ ಮಠವೆಂಬುದನ್ನು ಧ್ವನಿಸುತ್ತದೆ. ಹಿರೇಹಡಗಲಿಯ ಕ್ರಿ.ಶ. ೮೪೯ರ ಕಾಲದ ಶಾಸನವು 'ಯತಿಯ ಸಂತಾನವಲ್ಲದೆ ಬೇರೆಯವರು ಈ ಸ್ಥಾನದ

ಧರ್ಮವನ್ನು ಆಚರಿಸದೆ ಯತಿಯ ಸಂತಾನ ಮಾತ್ರ ಸರ್ವಬಾಧಾ ಪರಿಹಾರವಾಗಿ ಧರ್ಮವನ್ನು ರಕ್ಷಿಸಬೇಕೆಂದು ಹೇಳಿದೆ.

ಮಹೇಂದ್ರನು ಬರಗೂರಿನಲ್ಲಿ ಬೀಡುಬಿಟ್ಟಾಗ ತನಗೆ ಬಾಹ್ಯಾಭ್ಯಂತರ ಸಿದ್ಧಿಯಾಗಬೇಕೆಂದು ಅರಮನೆಯನ್ನು ಬಿಟ್ಟುಕೊಟ್ಟು, ಮಹೇಂದ್ರೇಶ್ವರ ದೇವಾಲಯವನ್ನು ಕಟ್ಟಿಸಿ ಭೈರವಶಕ್ತಿ ಭಟಾರರ ಕಾಲನ್ನು ತೊಳೆದು ಭೂದಾನ ಮಾಡಿದ್ದನ್ನು ಧರ್ಮಪುರಿ ಶಾಸನ ಉಲ್ಲೇಖಿಸಿದೆ. ಅಯ್ಯಪದೇವನ ಕಾಲದಲ್ಲಿ ಪೆರ್ಬಟ ಗ್ರಾಮವನ್ನು ಭಾವಶಿವನು ತಪೋರಾಜ್ಯವನ್ನಾಗಿ ಮಾಡಿಕೊಂಡಿದ್ದ. ಬೀರನೊಳಂಬ ಅಣ್ಣಿಗನ ಕಾಲದಲ್ಲಿ ನೊಳಂಬೇಶ್ವರ ಸ್ಥಾನವನ್ನು ವರುಣಶಿವಭಟಾರನು ಆಳುತ್ತಿದ್ದ ವಿಷಯವನ್ನು ಶಾಸನವೊಂದು ಉಲ್ಲೇಖಿಸಿದೆ.

ಆವನಿಯಲ್ಲಿ 'ತ್ರಿಭುವನಕರ್ತಾರದೇವನು' ದಿಲೀಪನ ಕಾಲದಿಂದ ಇಮ್ಮಡಿ ಮಹೇಂದ್ರನ ಕಾಲದವರೆಗೆ ಅಂದರೆ ೪-೫ ದಶಕಗಳ ಕಾಲ ಆವನ್ಯದ ಸ್ಥಾನವನ್ನು ಆಳುತ್ತಿದ್ದ. ಈತನನ್ನು ಆವನ್ಯ ಸ್ಥಾನದ ಪುರಪರಮೇಶ್ವರನೆಂದೂ ಕಲಿಯುಗ ರುದ್ರನೆಂದೂ ಶಾಸನಗಳು ಕರೆದಿವೆ. ಈ ಅವಧಿಯಲ್ಲಿ ಎರಡು ದೊಡ್ಡ ಕೆರೆಗಳನ್ನೂ ಐವತ್ತು ದೇವಾಲಯಗಳನ್ನೂ ಕಟ್ಟಿಸಿದ ಉಲ್ಲೇಖಗಳಿವೆ. ಆವನಿಯಲ್ಲಿ ರಾಮೇಶ್ವರ, ಲಕ್ಷ್ಮಣೇಶ್ವರ, ಶತ್ರುಘ್ನೇಶ್ವರ ಮತ್ತು ಸೀತೇಶ್ವರ ದೇವಾಲಯಗಳಿದ್ದು ಇಂದಿಗೂ ಅಲ್ಲಿ ಪೂಜಾ ಕಾರ್ಯಗಳು ನಡೆಯುತ್ತಿವೆ. ಈತ ಗಂಗವಾಡಿ ೯೬೦೦೦ ಮತ್ತು ಬಾಣರವಾಡಿಯ ಪನ್ನಿರ್ಚ್ಛಾರದ ವ್ಯಾಪಾರಿಗಳಿಗೆಲ್ಲಾ ಬೇಕಾದವನಾಗಿದ್ದ. ಈತನು ಸತ್ತಾಗ ಇವನ ಶಿಷ್ಯ ಆವನಿಯಲ್ಲಿ ಇವನ ಹೆಸರಿನಲ್ಲಿ ದೇವಾಲಯವನ್ನು ಕಟ್ಟಿಸಿದ್ದಾನೆ.

ಇವರಲ್ಲದೆ ಇನ್ನೂ ಹಲವಾರು ಯತಿಗಳು ತಮ್ಮ ವರ್ಚಸ್ಸಿನಿಂದ ತಾವಿದ್ದ ಸ್ಥಾನಗಳ ಜನರನ್ನು ಒಗ್ಗೂಡಿಸಿ ಆ ಗ್ರಾಮಗಳಲ್ಲಿನ ದೇವಾಲಯಗಳ ಮತ್ತು ಮಠಗಳಲ್ಲಿನ ಧಾರ್ಮಿಕ ಕಾರ್ಯಗಳಿಗೆ, ವಿದ್ಯಾರ್ಥಿಗಳ ಅಶನ, ವಸನಕ್ಕಾಗಿ ದಾನ ದತ್ತಿಗಳನ್ನು ಪಡೆದು ಸಾಮಾಜಿಕ ಕಾರ್ಯಗಳಿಗೆ ಕೈ ಜೋಡಿಸಿ ನೆರವಾಗಿದ್ದಾರೆ.

ಕಾಳಾಮುಖ ಯತಿಗಳಂತೆ ತಾಯಲೂರು, ಶಿವಾರಪಟ್ಟಣ, ಗುಣಿಮೊರುಬಾಗಿಲು, ಅಗಳಿ, ಹಿಂದೂಪುರ, ಮಧೂಡಿ, ಎಲ್ಲೂರು, ಬಾಗಳಿ, ವಡ್ಡನಹಳ್ಳಿ, ಶಿರಸ್ತಹಳ್ಳಿ ನಂದಿಬೇವೂರು, ಹಳೆಬನ್ನೂರು, ಸೋಮಪುರ ಮೊದಲಾದ ಊರುಗಳ ಮಹಾಜನರು ಗ್ರಾಮಸ್ಥರಿಂದ, ಅಧಿಕಾರಿಗಳಿಂದ ಪಡೆದ ದಾನ ದತ್ತಿಗಳಿಂದ ಕೆರೆ ಕಟ್ಟಿಸುವುದು, ತೂಬು ಇಡಿಸುವುದು, ದೇವಾಲಯಗಳ ರಚನೆ, ಅವುಗಳ ಜೀರ್ಣೋದ್ಧಾರ ಮತ್ತು ಅವುಗಳ ನಿರ್ವಹಣೆ ಮಾಡಿರುವುದಲ್ಲದೆ, ತಾವು ದಾನವಾಗಿ ಸ್ವೀಕರಿಸಿದ ವೃತ್ತಿಯ ಭೂಮಿಯಲ್ಲಿನ ಉತ್ಪತ್ತಿಯ ಕೆಲವು ಭಾಗವನ್ನು ದೇವಾಲಯಗಳ ಜೀರ್ಣೋದ್ಧಾರಕ್ಕೆ ಮತ್ತು ವಿದ್ಯಾದಾನಕ್ಕೆ ಬಳಸುತ್ತಿದ್ದ ಉದಾಹರಣೆಗಳಿವೆ.

ದೊಡ್ಡ ಉಳ್ಳರ್ತಿಯ ಕ್ರಿ.ಶ. ಸು. ೮೦೦ರ ಶಾಸನದಲ್ಲಿ ನೊಳಂಬ ರಾಜನೊಬ್ಬ ರೂಪುಗಳನ್ನು (ಪ್ರತಿಮೆಗಳನ್ನು) ಹಾಗೂ ಅಮರಾಲಯ (ದೇವಾಲಯ) ಮಾಡಿಸಿದಂತೆ

ಹೇಳಿದೆ. ಒಂದನೇ ಮಹೇಂದ್ರನ ಕಾಲದಲ್ಲಿ ತಗಡೂರಿನಲ್ಲಿ (ಧರ್ಮಪುರಿ) ಚಂದಿಯಣ್ಣ, ನಿಧಿಯಣ್ಣ ಎಂಬುವರು ಬಸದಿಯನ್ನು ಮಾಡಿಸಿದರು. ನೊಳಂಬಾಧಿರಾಜ ಮಹೇಂದ್ರನು ತೈಲೂರಿನಲ್ಲಿ ಕಲ್ಲದೇಗುಲ ಮಾಡಿಸಿದ್ದಾನೆ. ಏಕವಾಕ್ಯ ಇರಿವನೊಳಂಬನ ಆಳ್ವಿಕೆಯಲ್ಲಿ ಬಸವಯನಂಕ ಭಟ್ಟನು ಮಾನಸ್ತಂಭ ಮಾಡಿಸಿದ್ದನ್ನು ಹೇಳಿದೆ. ಭೀಮಯ್ಯನು ತಾನು ಕಟ್ಟಿಸಿದ ಭೀಮೇಶ್ವರ ದೇವಾಲಯಕ್ಕೆ ದೇವಭೋಗವಾಗಿ ಖಂಡುಗ ಗದ್ದೆಯನ್ನು ಕೊಟ್ಟ ಉಲ್ಲೇಖವಿದೆ. ಮಧೂಡಿಯ ಕ್ರಿ.ಶ. ೯೫೫ರ ಶಾಸನವು ದಿಲೀಪರಸನ ಆಳ್ವಿಕೆಯಲ್ಲಿ ಬಿಟ್ಟಯ್ಯ ಮತ್ತು ಚಾಮಯ್ಯ ಸತ್ತಾಗ ವಿಷ್ಣುಗೃಹಕ್ಕೆ ಕೆಲವು ದಾನ ಕೊಟ್ಟಂತೆ ಹೇಳಿದೆ. ಕಂಚುಗಾರ ಬೆಳಗಲ್ಲಿನ ಕ್ರಿ.ಶ. ೯೮೧ರ ಶಾಸನವು ಇಮ್ಮಡಿ ಮಹೇಂದ್ರನ ಆಳ್ವಿಕೆಯಲ್ಲಿ ಮೊದಲೇ ಇದ್ದ ಮೂರು ದೇವಾಲಯಗಳಿಗೆ ಹಾಗೂ ವಿಷ್ಣುದೇವರ ಮತ್ತು ಪ್ರಿಯ ದೇವರ ದೇವಾಲಯಗಳಿಗೆ ಭೂದಾನ ನೀಡಿದ್ದಾರೆ. ನೇರಲಗುಂಡಿಯ ಶಾಸನದಲ್ಲಿ ಆಯನೇರಲು ಗುಂಡಿಯ ಹಿಟ್ಟಮಯ್ಯನು ಮಲ್ಲಿಕಾರ್ಜುನ ದೇವಾಲಯಕ್ಕೆ ಗದ್ದೆ ದಾನ ಮಾಡಿದ ಉಲ್ಲೇಖವಿದೆ.

ಬಲ್ಲಕುಂದೆ ಗ್ರಾಮದ ಶಾಸನದಲ್ಲಿ ಘಟಿಯಂಕಕಾರನ ನಿಯೋಗಿ ಕೌಶಿಕ ಗೋತ್ರದ ಮಾಚಿನಾರ್ಯನ ಮಗ 'ಶ್ರೀಧರಾರ್ಯ್ಯ' ಬಲ್ಲಕುಂದೆ ತೀರ್ಥ ವಸತಿಗೆ ಜೈನಬಿಂಬ ಮಾಡಿಸಿದ್ದನ್ನು ತಿಳಿಸಿದೆ. ನೊಳಂಬನ ಬಿನ್ನಹದಂತೆ ಏಚಮ್ಮ ಎಂಬುವನು ಪ್ರತಿಮೆ ಮಾಡಿಸಿ ದಾನ ಕೊಟ್ಟಿದ್ದಾನೆ. ಮಲ್ಲಯ್ಯನಗುಡ್ಡದ ಶಾಸನವು ಜಗದೇಕಮಲ್ಲ ನೊಳಂಬ ಪಲ್ಲವ ಪೆಮಾನಡಿಯು ಮೈಲಾರದೇವರಿಗೆ ಬಲ್ಲಕುಂದೆ ೩೦೦ ರೊಳಗಣ ಪಗರೆ ತಡಿಯ ಸಿರಿಯೂರನ್ನು ದಾನವಾಗಿ ನೀಡಿದಂತೆ ಹೇಳಿದೆ. ಬಾಗಳಿ ಗ್ರಾಮದ ಶಾಸನವು ಇದೇ ಉದಯಾದಿತ್ಯನು ಪಂಪಾಪುರದ ತೀರ್ಥಕ್ಕೆ ಬಾಳ್ಗುಳಿಯ ಕಲಿದೇವಸ್ವಾಮಿಗೆ ಬಿಕ್ಕಿಗಳ್ಪತ್ತರೊಳಗಣ ನಾರಣೋಜ, ಶಂಕರೋಜರ ವಾಜಿಮಯ್ಯನ ಕೆರೆಯೊಳಗೆ ಲೋಗೇಶ್ವರ ಪೊಲದ ಚತುರಾಘಾಟ ಶೀಮೆಯಿಂದೊಳಗುಳ್ಳ ಭೂಮಿಯನ್ನು ದೇವರ ನೈವೇದ್ಯಕ್ಕೆ, ನಂದಾದೀವಿಗೆಗೆ, ತಪೋಧನರ ಸತ್ರಕ್ಕೆ, ಪನ್ನಿರ್ವಸೂಳೆಯರಿಗೆ, ಸೂಳೆವಾಳಂಗೆ, ಪಂಚಿಗರಿಗೆ, ಪರೆಕಾರರಿಗೆ, ಪಾತ್ರಕ್ಕೆ, ದೇಸಿಗಚ್ಛಾತ್ರರ ಭೋಜನಕ್ಕೆಂದು ತ್ರಿಕಾಲ ಭೋಗಂ ನಡೆಯುವಂತೆ ಸೋಮಸಿಂಘಭಳಾರರ ಕಾಲು ತೊಳೆದು ದಾನ ನೀಡಿದ ವಿಚಾರವಿದೆ. ಇದೇ ಶಾಸನದಲ್ಲಿ ಪೆರ್ಗ್ಗಡೆ ನರಸಿಂಘಯ್ಯನೂ ಸಹ ಕಲಿದೇವಸ್ವಾಮಿಗೆ ದಾನ ನೀಡಿದ ಉಲ್ಲೇಖವಿದೆ.

ತುಂಬಿಗೆರೆಯ ಶಾಸನ ಜಗದೇಕಮಲ್ಲನ ಕಾಲದಲ್ಲಿ ಪೆರ್ಗಡೆ ಚನ್ದಿಮಯ್ಯನಾಯಕನು ದೊರೆಗೆ ಬಿನ್ನಹ ಮಾಡಿ ಬಿಕ್ಕಿಗನೆರ್ಪ್ಪರ ಬಳಿಯ ತುಂಬಿಗೆರೆಯ ಮೂಲಸ್ಥಾನ ದೇವರಿಗೆ ದಾನ ಮಾಡಿದ್ದಾನೆ. ಕ್ರಿ.ಶ. ೧೦೩೪ರ ಶಾಸನ ಬ್ರಹ್ಮಾಧಿರಾಜನು ... ವಗ್ಗಾಣಿಜೀಯರ ಶಿಷ್ಯ, ಪ್ರಶಿಷ್ಯಗೆ ಚಂದ್ರಾಭರಣಜೀಯ ಮೇಗಣಗೆರೆಯಲ್ಲಿ ಸ್ವಯಂಭೂದೇವರ ದೇಗುಲವನ್ನು ಮಾಡಿಸಿದ್ದನ್ನು ಹೇಳಿದೆ. ಕ್ರಿ.ಶ. ೧೦೦೮ರ ಬಲ್ಲಕುಂದೆ ನಗರದ ಕೆಲವು ಶ್ರೇಷ್ಠಿಗಳು ಐದು ನಿರ್ವತನ ಭೂಮಿಯನ್ನು ಜಿನಾಲಯಕ್ಕೆ ದಾನವಾಗಿ

ಕೊಟ್ಟಿದ್ದಾರೆ. ಗೊನೆಹಾಳು ಶಾಸನ ಇರಿವ ನೊಳಂಬಾಧಿರಾಜ ಪಂಪಾ(ತೀರ್ಥ)ದಲ್ಲಿ ಮಹಾಕಾಳ ದೇವರಿಗೆ ದಾನ ನೀಡಿದ ಉಲ್ಲೇಖವಿದೆ.

ಕಂಚಿಕೇರಿ ಶಾಸನದಲ್ಲಿ ಜಗದೇಕಮಲ್ಲನ ಸಂಧಿವಿಗ್ರಹಿ ಹರಿದಾಸಯ್ಯನು ಲಿಂಗಪ್ರತಿಷ್ಠೆ ಮಾಡಿಸಿದ್ದನ್ನು ತಿಳಿಸಿದೆ. ಸಿರಿವೂರಿನ ಕ್ರಿ.ಶ. ೧೦೪೨ರ ಶಾಸನ ಕುಂಚವಡಗದ ದಾಸಯ್ಯನು ಸಿರಿವೂರಿನ ಸಿರಿಬಾಗಿಲನ್ನು, ಚಿರಸ್ತಹಳ್ಳಿಯ ಕ್ರಿ.ಶ. ೧೦೪೩ರ ಶಾಸನ ಮಲ್ಲಿಕಯ್ಯನು ಆದಿತ್ಯ, ಮಾತೃಕ, ವಿನಾಯಕ ದೇವರುಗಳನ್ನು ಪ್ರತಿಷ್ಠಾಪಿಸಿದ್ದನ್ನು ಉಲ್ಲೇಖಿಸಿವೆ.

ಕಲ್ಲಂಭದ ಕ್ರಿ.ಶ. ೧೦೨೮ರ ಶಾಸನವು ಚಿಹನಪಟ್ಟಿಯ ಮೂಲಸ್ಥಾನದ ಮಹಾದೇವರಿಗೆ ಸಹಲೆ ಗೌಡ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೦೪೩ರ ಚಿಮ್ಮಹಳ್ಳಿಯ ಶಾಸನ ಮನೆವೆರ್ಗಡೆ ಕೇತೆಯ ನಾಯಕನು ದುಗ್ಗರಾಜ ಪಂಡಿತರ ಕಾಲು ತೊಳೆದು ನೆಲ್ಕುದುರೆಯ ಕಲಿದೇವರಿಗೆ ನಂದಾ ದೀವಿಗೆಗೆ, ಮೂಲಸ್ಥಾನ ದೇವರಿಗೆ ಭೂದಾನ ಮತ್ತು ಹೂದೋಟ ದಾನವಾಗಿ ಕೊಟ್ಟಿದ್ದನ್ನು ಹೇಳಿದೆ.

ತಿಕಣ್ಣ ಮತ್ತು ಲೆಂಕಸಾಸಿರ್ವರು ಸೇರಿ ಮೊರಿಂಗೆರೆಯಲ್ಲಿ ಉದಯಾದಿತ್ಯದೇವನಿಗೆ ಪರೋಕ್ಷವಿನಯವಾಗಿ ೨೪ ಜನರ ಆಹಾರಕ್ಕಾಗಿ ಛತ್ರವನ್ನು ಕಟ್ಟಿಸಿ, ನೊಳಂಬೇಶ್ವರ ದೇವಸ್ಥಾನವನ್ನು ತಮ್ಮ ಹೆಸರಿನಲ್ಲಿ ಲೆಂಕೇಶ್ವರ ದೇವಾಲಯವನ್ನು ವಿರೂಪಾಕ್ಷ ದೇವಾಲಯವನ್ನು ಮಾಡಿಸಿ, ಬಾವಿಯನ್ನು ತೋಡಿಸಿ ಅದಕ್ಕೆ ಸೋಮತೀರ್ಥವೆಂದೂ, ಹೂದೋಟವನ್ನು ಮಾಡಿಸಿ ನಂದನವನವೆಂದೂ ಹೆಸರಿಟ್ಟಿದ್ದನ್ನು ಹೇಳಿದೆ.

ನಂದಿಬೇವೂರಿನಲ್ಲಿ ಬಸದಿಯನ್ನು ನಿರ್ಮಾಣ ಮಾಡಿದ, ಮತ್ತು ಅಸಗೋಡಿನಲ್ಲಿ ಕುಮಾರ ಚೋರಯ್ಯದೇವ ಮತ್ತು ನಾಗತಿಯರಸರು ಸೇರಿ ಅಸಗೋಡಿನ ಸ್ವಯಂಭೂ ದೇವರ ಮತ್ತು ಶಾಸನವನ್ನು ಲಿಂಗದ ಕಲ್ಲಿನಿಂದ ಮಾಡಿಸಿದಂತೆ ಶಾಸನಗಳು ಉಲ್ಲೇಖಿಸಿದೆ. ಹೀಗೆ ಇನ್ನು ಹಲವಾರು ಶಾಸನಗಳು ಬಸದಿಗಳಿಗೆ, ದೇವಾಲಯಗಳ ನಿರ್ಮಾಣ ಮತ್ತು ಇತರ ಸೇವಾಕಾರ್ಯಗಳಿಗೆ ಮಾಡಿದ ದಾನಗಳ ಉಲ್ಲೇಖಗಳಿವೆ.

ಕದಂಬರ ಸಮಕಾಲೀನರಾಗಿ ದಕ್ಷಿಣ ಕರ್ನಾಟಕವನ್ನು ಆಳಿದ ಗಂಗರ ಶಾಸನಗಳಲ್ಲಿ ರಾಣಿಯರು ರಾಜರಂತೆ ಸ್ವತಂತ್ರ ಸಮಾನ ಮನಸ್ಕರಾಗಿ ಅನೇಕ ದೇವಾಲಯಗಳ ಮತ್ತು ಕೆರೆ ಕಟ್ಟೆಗಳ ರಚನೆಗೆ ಕಾರಣರಾಗಿದ್ದಾರೆ. ಅವರಂತೆ ನೊಳಂಬ ವಂಶದ ಅರಸರ ಪತ್ನಿಯರು ನೊಳಂಬವಾಡಿಯ ಕೆಲವು ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಾ ದೇವಾಲಯಗಳನ್ನೂ ಕೆರೆ-ಕಟ್ಟೆಗಳನ್ನೂ ನಿರ್ಮಿಸಿದ್ದಾರೆ. ಅಲ್ಲದೆ ಧಾರ್ಮಿಕ ತಾರತಮ್ಯವಿಲ್ಲದೆ ವಿಷ್ಣು, ಶಿವ ಮತ್ತು ಜೈನ ಬಸದಿಗಳಿಗೆ ದಾನ ನೀಡಿದ ಉಲ್ಲೇಖಗಳಿವೆ.

ನೊಳಂಬರ ಆರಂಭದ ಶಾಸನಗಳಲ್ಲಿ ಸ್ತ್ರೀಯರು ಸಣ್ಣ ಪ್ರದೇಶಗಳನ್ನು ಆಳುತ್ತಿದ್ದರು. ಸಿಂಗಮುತ್ತರಸನ (ಸಿಂಗಪೋತ) ಪತ್ನಿ 'ಮಾದವೆ'ಯು ಹಾಗೂ ಪಲ್ಲವಾದಿತ್ಯ ಚಾರುಪೊನ್ನೇರನ ಪತ್ನಿ ಗವಣಬ್ಬೆ ಮದರಿಕಲ್ಲನ್ನು ಆಳ್ವಿಕೆ ಮಾಡುತ್ತಿದ್ದು 'ಗವಣೇಶ್ವರ'

ಎಂಬ ಶಿವಾಲಯದ ನಿರ್ವಹಣೆಗಾಗಿ ಭೂದಾನ ಮಾಡಿದರು (ಇದನ್ನು ನಾಗಮಾರಬ್ಬೆ ಎಂಬಾಕೆ ಕಟ್ಟಿಸಿದ್ದಳು). ಚಿಕ್ಕಮಧುರೆಯ ಕ್ರಿ.ಶ. ೮೦೦ರ ಶಾಸನವು ಸಿಂಗಮುತ್ತರಸನ ಮಗನ ಆಳ್ವಿಕೆಯಲ್ಲಿ 'ಮಾರಬ್ಬೆ' ಎಂಬುವವಳು ಶಿವಾಲಯವನ್ನು ಕಟ್ಟಿಸಿದ್ದಾಳೆ. ಕ್ರಿ.ಶ. ೮೮೦ರ ಶಾಸನವು ಒಂದನೇ ಮಹೇಂದ್ರನು ಬರಗೂರಿನಲ್ಲಿ ಬೀಡು ಬಿಟ್ಟಿದ್ದಾಗ ಅವನ ಪತ್ನಿಯರಾದ ಬಿಜಮಹಾದೇವಿ, ಪರಮಮಹಾದೇವಿ, ಅಕ್ಕಬ್ಬೆಯರು ತ್ರೈಲೋಕವೊಳಲಿನ ಕೆಲವು ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಿದ್ದರು ಹಾಗೂ ಆ ಗ್ರಾಮಗಳಲ್ಲಿನ ದೇವಾಲಯ ಮತ್ತು ಬಸದಿಗೆ ದಾನ ಕೊಟ್ಟಿದ್ದಾರೆ.

ಬರಗೂರಿನ ಕ್ರಿ.ಶ. ೯೧೯ರ ಶಾಸನ ಅಯ್ಯಪದೇವನ ಪತ್ನಿಯರಾದ ನಾಗಿಯಬ್ಬೆ, ಹೆಲೆಯಬ್ಬೆಯರು ಬರಗೂರಿನ ಮೂಲಸ್ಥಾನದ ಎರಡು ದೇವಾಲಯಗಳ ಪೆಂಜೇರುವಿನ ಪಂಚಮಠಕ್ಕೆ ಮತ್ತು ಮಹೇಂದ್ರೇಶ್ವರನಿಗೆ ದಾನ ಮಾಡುತ್ತಾರೆ. ನಾಗಿಯಬ್ಬೆಯ ತಾಯಿ ನಾರಣಬ್ಬೆ ಕೆರೆ ಕಟ್ಟಿಸಿದ್ದನ್ನು ಶಾಸನ ತಿಳಿಸುತ್ತದೆ. ಕಂಚುಗಾರ ಬೆಳಗಲ್ಲುವಿನ ಶಾಸನ ವೀರನೊಳಂಬ ಪಲ್ಲವ ಪೆರ್ಮಾನಡಿದೇವನ ಪತ್ನಿ ರೇವಲದೇವಿ ಅಲ್ಲಿಯ ದೇವರಿಗೆ ದಾನ ಕೊಟ್ಟದ್ದನ್ನು ಹೇಳಿದೆ.

ಕ್ರಿ.ಶ. ಸು. ೯೮೨ರ ಶಾಸನ ನೊಳಂಬ ಅರಸ ಇಮ್ಮಡಿ ಪೊಳಲ್ಚೋರನ ಪತ್ನಿ ದೀವಬ್ಬರಸಿಯು ಕದಂಬವಂಶದ ರಾಜಕುಮಾರಿ. ನೊಳಂಬರ ರಾಜಧಾನಿಯಾಗಿದ್ದ ಹೆಂಜೇರುವಿನಿಂದ ಪೊಳಲ್ಚೋರನು ಆಳ್ವಿಕೆ ಮಾಡುತ್ತಿದ್ದ. ಈ ಕಾಲವು ನೊಳಂಬರ ಇತಿಹಾಸದಲ್ಲಿ ಸಂಕ್ರಮಣ ಕಾಲವಾಗಿತ್ತು. ಪಾರಂಪರಿಕ ಅರಸರಾದ ತಲಕಾಡಿನ ಗಂಗರನ್ನು ಚೋಳರು ಸೋಲಿಸಿದ್ದರು. ಹಾಗೆಯೇ ದಕ್ಷಿಣ ಭಾರತದ ಪ್ರಬಲ ರಾಜಮನೆತನವಾಗಿದ್ದ ರಾಷ್ಟ್ರಕೂಟರನ್ನು ಮೂಲೆಗೆ ತಳ್ಳಿ ಕಲ್ಯಾಣದ ಚಾಲುಕ್ಯರು ಪಟ್ಟಕ್ಕೆ ಬಂದಿದ್ದರು. ಬಹುಶಃ ಈ ಸಂದರ್ಭದಲ್ಲಿ ದೀವಬ್ಬರಸಿಯು ತನ್ನ ಪತಿ ಇಮ್ಮಡಿ ಪೊಳಲ್ಚೋರ ಮತ್ತು ಹಿರಿಯ ಮಗ ಇಮ್ಮಡಿ ಮಹೇಂದ್ರನ ಸಾವಿನ ನಂತರ ತನ್ನ ಕಿರಿಯ ಮಗ ಪಟ್ಟಕ್ಕೆ ಬಂದು ರಾಜ್ಯವಾಳುವ ಕಾಲವನ್ನು ನೋಡಲು ಕಾತುರಳಾಗಿ ಕಾಯುತ್ತಿರುತ್ತಾಳೆ. ಈ ಅವಧಿಯಲ್ಲಿ ತನ್ನ ಹೆಸರಿನಲ್ಲಿ ಹಾಗೂ ಪತಿ ಪೊಳಲ್ಚೋರನ ಹೆಸರಿನಲ್ಲಿ ಅಗ್ರಹಾರವನ್ನು, ಹಿರಿಯ ಮಗ ಇಮ್ಮಡಿ ಮಹೇಂದ್ರನ ಹೆಸರಿನಲ್ಲಿ ಕೊಳವನ್ನು, ತನ್ನ ಹೆಸರಿನಲ್ಲಿ ಶಿವಾಲಯವನ್ನು, ಮುಕುಂದನ ಆಲಯವನ್ನು ಮತ್ತು ಪಾಪನಾಶಿನಿ ಗಂಟೆಯನ್ನು ಮಾಡಿಸಿ ದಾನ ಮಾಡುತ್ತಾಳೆ. ದೀವಬ್ಬರಸಿ ಕಟ್ಟಿಸಿದ ಕೆರೆಯನ್ನು ಶಾಸನದ ಕವಿ ಗಂಗಾನದಿಗೂ, ಲವಣ ಸಮುದ್ರಕ್ಕೂ ಹೋಲಿಸಿ 'ದೀವಳಬ್ಬಾ ಸಮುದ್ರ' ವೆಂಬ ಶೀರ್ಷಿಕೆಯಲ್ಲಿ 'ಶಾರ್ದೂಲ ವಿಕ್ರೀಡಿತ' ವೃತ್ತದಲ್ಲಿ ಪದ್ಯಗಳನ್ನು ರಚಿಸಿ ಹಾಡಿ ಹೊಗಳಿದ್ದಾನೆ. ದೀವಬ್ಬರಸಿಯನ್ನು 'ಲಕ್ಷ್ಮೀದೇವಿ, ಭೂದೇವಿ, ಪಾರ್ವತಿದೇವಿ, ವಾಕ್ಸಂಪನ್ನಳಾದ ಸರಸ್ವತಿ' ಎಂದು ಹೊಗಳಿ ಪದ್ಯ ರಚನೆ ಮಾಡಿದ್ದಾನೆ (ಆಕೆಯ ಮೇಲೆ ರಚಿತವಾದ ಎರಡು ದೊಡ್ಡ ಪದ್ಯಗಳನ್ನು ಕೈ ಬಿಡಲಾಗಿದೆ).

ಇರಿವ ನೊಳಂಬನ ಪಿರಿಯಬ್ಬರಸಿ ಮಹಾಕಾಳದೇವರಿಗೆ ದಾನ ನೀಡಿದ್ದಾಳೆ. ಘಟೆಯಂಕಕರಾನ ಪತ್ನಿ ಹಾಗೂ ಇರಿವಬೆಡಂಗ ಸತ್ಯಾಶ್ರಯನ ಮಗಳಾಗಿದ್ದ ಮಹಾದೇವಿ ಮರುವೊಳಲನ್ನು ಆಳುತ್ತಿದ್ದು ಅಲ್ಲಿಯ ಬಸದಿಗೆ ದಾನ ನೀಡಿದ್ದಾಳೆ. ಜಗದೇಕಮಲ್ಲದೇವನ ಪತ್ನಿ ದೇವಳದೇವಿ ಕಾಲವಶವಾದಾಗ ಅವಳ ಅಸ್ತಿಯನ್ನು ಗಂಗೆಯಲ್ಲಿ ಬಿಟ್ಟು ಬಂದ ಕೃಷ್ಣಯ್ಯ ಮತ್ತು ಮಾಧವ ಷಡಂಗಿಯರಿಗೆ ದಾನ ನೀಡುತ್ತಾನೆ. ನಾರಸಿಂಘದೇವನ ಪತ್ನಿ ನೊಳಂಬ ಮಹಾದೇವಿ ಹೊಸಗೆರೆಯ ಮಹಾದೇವನಿಗೆ ದಾನ ನೀಡಿದ್ದಾಳೆ. ಅಸಗೋಡಿನ ಶಾಸನ ಕಂಚಿಯಬ್ಬೆಗೆ ಮತ್ತು ಇದೇ ಕಾಲದ ಮತ್ತೊಂದು ಶಾಸನ ಕದಂಬರ ನಾಲ್ವರು ಸೂಳೆಯರಿಗೆ ದಾನ ನೀಡಿದ ಉಲ್ಲೇಖಗಳಿವೆ. ಸಂಘಮಂಗಲದ ಮೊಮ್ಮಗಳು ಮೇಲಕೇರಿ ಒಡೆಯ ದುಗ್ಗಬ್ಬೆ ಮತ್ತು ಇನ್ನೊಂದು ಶಾಸನ 'ಕೊಣ್ಡಲಗಾಮುಣ್ಡರ ಮಗಳನ್ಮಾರಿಯರ್' ತೂಮ್ಬು ಮಾಡಿಸಿದ ಉಲ್ಲೇಖವಿದೆ. ಕಂಚಿಯಬ್ಬೆ ಎಂಬುವಳು ತನ್ನ 'ಕೊಳಂಗಯ್ಯೊಳಗೆ ದೇವ ನೈವೇದ್ಯಕ್ಕೆ ಗದ್ದೆ ದಾನ ಮಾಡಿದ್ದಾಳೆ.

ಹೀಗೆ ಶಾಸನಗಳಲ್ಲಿ ಉಲ್ಲೇಖಿಸಿರುವ ಶಾಸನಗಳು ನೊಳಂಬರ ಕಾಲದಲ್ಲಿ ನಡೆದ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳ ಬಗ್ಗೆ ಮಾಹಿತಿ ನೀಡಿವೆ. ಇನ್ನೂ ಹಲವಾರು ಮಹಿಳೆಯರ ಹೆಸರು ಶಾಸನಗಳಲ್ಲಿ ಬಂದಿದ್ದರೂ ಅವರು ನಿರ್ವಹಿಸಿದ ಬದುಕಿನ ಬಗ್ಗೆ ಬೆಳಕು ಚೆಲ್ಲದಿರುವುದರಿಂದ ಅವುಗಳನ್ನು ಕೈಬಿಟ್ಟು ಸ್ಪಷ್ಟ ಮಾಹಿತಿ ಇರುವುದನ್ನು ಮಾತ್ರ ಇಲ್ಲಿ ಪರಿಗಣಿಸಿದೆ.



ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೬. ಶಾಸ್ತ್ರ ಕೃತಿಗಳಲ್ಲಿ ಕನ್ನಡ ನಾಡು-ನುಡಿ ಪ್ರಜ್ಞೆ

-ಪ್ರೊ. ಜೆ. ಅಬ್ದುಲ್ ಬಷೀರ್*

ಒಂದು ಸಾವಿರದ ಐದುನೂರು ವರ್ಷಗಳ ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದು, ಎಲ್ಲ ಕವಿಗಳೂ ಕಾವ್ಯಗಳನ್ನು ರಚಿಸಿದರೇ ಹೊರತು ನಾಟಕಗಳ ರಚನೆಯನ್ನು ಮಾಡಲಿಲ್ಲ. ಏಕೆಂದರೆ ಅವರಿಗೆ ಮಹಾಕವಿ ಪಟ್ಟದ ಮೇಲೆ ಕಣ್ಣಿದ್ದದ್ದು. ಆದರೂ ನಾಟಕ ಸೃಷ್ಟಿಸುವ ಪ್ರತಿಭಾಶಕ್ತಿ ಕನ್ನಡ ಕವಿಗಳಿಗಿತ್ತು ಎಂಬುದು ರನ್ನನ 'ಸಾಹಸಭೀಮ ವಿಜಯ' (ಗದಾಯುದ್ಧ) ಮತ್ತು ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ಗಳ ನಾಟಕೀಯ ಗುಣದಿಂದ ಸ್ಪಷ್ಟವಾಗುತ್ತದೆ. ಬಹಳಷ್ಟು ಕನ್ನಡ ಕವಿಗಳು ಸಂಸ್ಕೃತ ಪಾಂಡಿತ್ಯವನ್ನು ಪಡೆದಿದ್ದರು. ಅವರು ಪ್ರಯತ್ನಪಟ್ಟಿದ್ದರೆ ಸಂಸ್ಕೃತ ಭಾಷೆಯಲ್ಲಿ ಸುಂದರ ಕಾವ್ಯಗಳ್ನು ರಚಿಸಬಹುದಿತ್ತು. ಸಂಸ್ಕೃತ ಸಾಹಿತ್ಯ ಕೃತಿಗಳ ವಸ್ತು, ಛಂದಸ್ಸು, ಭಾಷೆ, ರಸ, ಅಲಂಕಾರಗಳ ಸಾರವನ್ನು ಹೀರಿ ಕನ್ನಡದಲ್ಲಿ ಸ್ವತಂತ್ರ ರೀತಿಯ ಕಾವ್ಯಗಳನ್ನು ಸೃಷ್ಟಿಸಿದ್ದು ಅವರ ಕನ್ನಡಾಭಿಮಾನಕ್ಕೊಂದು ಜ್ವಲಂತವಾದ ನಿದರ್ಶನವಾಗಿದೆ, ಕನ್ನಡದ ಆದಿಕವಿ, ಅಗ್ರಕವಿ ಪಂಪ ಮಾರ್ಗದೇಸಿಗಳ ಸಮನ್ವಯವನ್ನು ಸಾಧಿಸಿದ್ದು ಸಾಮಾನ್ಯವಾದ ಸಂಗತಿಯೇನಲ್ಲ !

ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನ್,
ಒಂದೆ ಚಿತ್ತದಿಂ ನೆನವೊಡೆ ಕರ್ಣನಂ ನೆನೆಯ,
ಕರ್ಣನೊಳ್ ಆರ್‌ದೊರೆ,
ಕರ್ಣನ ಏಱು,
ಕರ್ಣನ ಕಡು ನನ್ನಿ,
ಕರ್ಣನ ಅಳವು,
ಅಂಕದ,
ಕರ್ಣನ ಜಾಗಂ ಎಂದು,

* ನಿವೃತ್ತ ಕನ್ನಡ ಪ್ರಾಧ್ಯಾಪಕರು, ಸಂಪಾದಕರು, ಸಂ. ೫, ೮ನೆಯ ತಿರುವು, ೪ನೆಯ ಮುಖ್ಯರಸ್ತೆ, ಜಯನಗರ ೧ನೇ ವಿಭಾಗ, ಪೂರ್ವ, ಬೆಂಗಳೂರು-೫೬೦೦೧೧. ಮೊ: ೯೦೦೮೭೬೩೩೬

ಕರ್ಣನ ಪಡೆಮಾತಿನೊಳ್ ಪುದಿದು,
ಕರ್ಣ ರಸಾಯನಂ ಅಲ್ತೆ ಭಾರತಂ

ಪಂಪನ ಕನ್ನಡಾಭಿಮಾನಕ್ಕೆ ಈ ವೃತ್ತ ಒಂದು ಸಣ್ಣ ನಿದರ್ಶನವಷ್ಟೆ! ಎರಡನೆಯದು, ಕೆಲವರು ಮಾತ್ರ ಶಾಸ್ತ್ರ ಕೃತಿಗಳನ್ನು ರಚಿಸಿದರು; ಕೆಲವರು ಸ್ವಂತ ಕೃತಿಗಳನ್ನು ಕನ್ನಡಕ್ಕಳವಡಿಸಿಕೊಂಡು ಕೃತಿಗಳನ್ನು ರಚಿಸಿದರು. ಶಾಸ್ತ್ರ ಕೃತಿಗಳ ರಚನೆಗೆ ಬಹಳಷ್ಟು ಕನ್ನಡಿಗರು ಇಷ್ಟಪಡದಿರಲು ಕಾರಣ ಯಥಾಪ್ರಕಾರ ಅವರ ತಲೆಯ ಮೇಲೆ ಹತ್ತಿದ್ದ ಮಹಾಕವಿ ಪಟ್ಟದ ಭೂತ! ಹೀಗಾಗಿ ಕನ್ನಡದಲ್ಲಿ ವ್ಯಾಕರಣ, ಅಲಂಕಾರ, ಛಂದಸ್ಸುಗಳಂಥ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ಬೆರಳೆಣಿಕೆಯಷ್ಟು ರಚನೆಯಾದವು; ಸಂಖ್ಯೆ ಕಡಿಮೆಯಾದರೂ ಸತ್ವವೇನೂ ಕಡಿಮೆ ಇಲ್ಲ!

ಕನ್ನಡ ಸಾಹಿತ್ಯ ಸೃಷ್ಟಿಯ ಪ್ರಾರಂಭ ಜೈನ ಕವಿಗಳಿಂದ ಆದಂತೆ ಶಾಸ್ತ್ರ ಕೃತಿಗಳ ರಚನೆಯ ಪ್ರಾರಂಭವೂ ಜೈನ ಕವಿಗಳಿಂದಲೇ ಆಯಿತು. ಕನ್ನಡ-ಸಂಸ್ಕೃತ ಭಾಷೆಗಳೆರಡರಲ್ಲಿಯೂ ವೈವಿಧ್ಯ ಪೂರ್ಣವಾದ ಶಾಸ್ತ್ರಕೃತಿಗಳನ್ನು ಅವರು ರಚಿಸಿದ್ದಾರೆ. "ಆಹಾರ, ನಿದ್ರೆ, ಭಯ, ಮೈಥುನ-ಇವು ಪಶುಗಳಿಗೂ ಮನುಷ್ಯನಿಗೂ ಇರುವ ಸಾಮಾನ್ಯ ಲಕ್ಷಣಗಳು. ಮನುಷ್ಯನಲ್ಲಿರುವ ಹೆಚ್ಚಿನ ಲಕ್ಷಣವೆಂದರೆ ಜ್ಞಾನ. ಜ್ಞಾನಹೀನನು ಪಶುವಿಗೆ ಸಮಾನ." ಆದ್ದರಿಂದಲೇ ನಮ್ಮ ಶಾಸ್ತ್ರಕಾರರು ಬಗೆ ಬಗೆಯ ವಿಷಯ-ಜ್ಞಾನಕ್ಕೆ ಸಂಬಂಧಿಸಿದ ಶಾಸ್ತ್ರಕೃತಿಗಳನ್ನು ರಚಿಸಿದರು. ಅದಕ್ಕೆ ಅವರು ಬಳಸಿಕೊಂಡ ಮಾಧ್ಯಮ ಗದ್ಯ, ಪದ್ಯ ಹಾಗೂ ಚಂಪೂ.

ಕನ್ನಡದಲ್ಲಿ ರಚನೆಯಾಗಿರುವ ಕೃತಿಗಳನ್ನು ಮೂರು ಭಾಗ ಮಾಡಬಹುದು.

**೧. ಕಾವ್ಯಕೃತಿಗಳು :** ಪಂಪ, ರನ್ನ, ಕುಮಾರವ್ಯಾಸ, ಮುಂತಾದವರ ಸೃಷ್ಟಿಕಾರ್ಯದ ಆನಂದ ಪ್ರಧಾನವಾದ ಶುದ್ಧ ಸಾಹಿತ್ಯ. ಇದರಲ್ಲಿ ಧರ್ಮ, ನೀತಿ ಹಾಗೂ ತಾತ್ತ್ವಿಕ ವಿಚಾರಗಳ ಸೇರ್ಪಡೆಯೂ ಇದೆ.

**೨. ಶಾಸ್ತ್ರಕೃತಿಗಳು :** ಸೃಷ್ಟಿ ಕಾರ್ಯವಿಲ್ಲದ ಜ್ಞಾನ ಪ್ರಧಾನವಾದ ಕೃತಿಗಳು; ಇವು ಕಲೆಯಲ್ಲ; ಕಾವ್ಯಕ್ಕೂ ಶಾಸ್ತ್ರಕ್ಕೂ ಇರುವ ವ್ಯತ್ಯಾಸವೆಂದರೆ 'ರಸವಂತಿಕೆ'.

ಶಾಸ್ತ್ರ ಕೃತಿಗಳನ್ನು ೧. ಸಾಹಿತ್ಯ ಶಾಸ್ತ್ರ ಕೃತಿಗಳು ೨. ಧಾರ್ಮಿಕ ಶಾಸ್ತ್ರ ಕೃತಿಗಳು ೩. ಲೌಕಿಕ ಶಾಸ್ತ್ರ ಕೃತಿಗಳು ಎಂದು ಮೂರು ಭಾಗ ಮಾಡಬಹುದು.

**೧. ಸಾಹಿತ್ಯ ಶಾಸ್ತ್ರ ಕೃತಿಗಳು :** (ಅ) ಅಲಂಕಾರ ಶಾಸ್ತ್ರ ಕೃತಿಗಳು: ಕವಿರಾಜಮಾರ್ಗ, ಕಾವ್ಯಾವಲೋಕನ, ಉದಯಾದಿತ್ಯಾಲಂಕಾರ, ಅಪ್ರತಿಮ ವೀರಚರಿತೆ, ಕನ್ನಡ ಕುವಲಯಾನಂದ, ನರಪತಿ ವಿಜಯ, ಶೃಂಗಾರ ರತ್ನಾಕರ, ರಸರತ್ನಾಕರ, ನವರಸಾಲಂಕಾರ, ರಸಮಂಜರಿ, ಶಾರದಾವಿಲಾಸ ಇತ್ಯಾದಿ ಗ್ರಂಥಗಳು. (ಆ) ಛಂದಶ್ಶಾಸ್ತ್ರ ಕೃತಿಗಳು: ಛಂದೋಂಬುಧಿ, ಕವಿಜಿಹ್ವಾಬಂಧನ, ಛಂದಸ್ಸಾರ. (ಇ) ವ್ಯಾಕರಣ ಶಾಸ್ತ್ರ ಕೃತಿಗಳು: (ಕವಿರಾಜಮಾರ್ಗ), ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣ, ಶಬ್ದಮಣಿದರ್ಪಣ,

ಶಬ್ದಾನುಶಾಸನ. (ಈ) ನಿಘಂಟು : ರನ್ನಕಂದ, ಕೇಶಿರಾಜನ ಕೋಶಗಳು (ಶಬ್ದಮಣಿದರ್ಪಣದಲ್ಲಿರುವ ಱಳಾಕ್ಷರಯುಕ್ತ ಶಬ್ದಕೋಶ, ಧಾತು, ಅರ್ಥಕೋಶ, ಪ್ರಯೋಗ ಸಾರವೆಂಬ ಶಬ್ದಾರ್ಥಕೋಶ), ಕರ್ಣಾಟಕ ಶಬ್ದಸಾರ, ಕಬ್ಬಿಗರ ಕೈಪಿಡಿ, ಚತುರಾಸ್ಯ ನಿಘಂಟು, ಕರ್ಣಾಟಕ ಶಬ್ದಮಂಜರಿ, ಅಭಿದಾನ ರತ್ನಮಾಲಾಟೀಕೆ, ಮಂಗರಾಜ ನಿಘಂಟು, ಕಾಶಕೃತ್ಸ್ನ ಶಬ್ದ ಕಲಾಪ ಧಾತು ಪಾಠ, ಭಾರತ ನಿಘಂಟು, ಕಿಟ್ಟಲ್ ನಿಘಂಟು, (ಉ) ವಿಶ್ವಕೋಶ, ಕವಿಕಂಠಹಾರ, ಕರ್ಣಾಟಕ ಸಂಜೀವನ (ಸಂಸ್ಕೃತ – ಕನ್ನಡದ ವಸ್ತುಕೋಶ) (ಜ್ಞಾನಕೋಶ)ಗಳು ; ಲೋಕೋಪಕಾರ, ಸಿರಿಭೂವಲಯ, ಅಭಿಲಿಷಾರ್ಥ ಚಿಂತಾಮಣಿ, ವಿವೇಕ ಚಿಂತಾಮಣಿ.

**೨. ಧಾರ್ಮಿಕ ಶಾಸ್ತ್ರ ಕೃತಿಗಳು:** ಜೈನ – ವೀರಶೈವ – ವೈದಿಕ ಧರ್ಮಗಳಿಗೆ ಸಂಬಂಧಿಸಿದ ಕೃತಿಗಳು.

**೩. ಲೌಕಿಕ ಶಾಸ್ತ್ರ ಗ್ರಂಥಗಳು:** ವೈದ್ಯಶಾಸ್ತ್ರ, ಪಾಕ ಶಾಸ್ತ್ರ, ಜ್ಯೋತಿಷ, ಕಾಮಶಾಸ್ತ್ರ, ನೀತಿಶಾಸ್ತ್ರ ಗ್ರಂಥಗಳು.

ಕೆಲವು ಕೃತಿಗಳ ಬಗ್ಗೆ ಪ್ರತ್ಯೇಕವಾಗಿ ಹೇಳುವುದಕ್ಕೆ ಮೊದಲು ಎಲ್ಲಾ ಶಾಸ್ತ್ರ ಕೃತಿಗಳನ್ನು ಒಳಗೊಂಡಂತೆ ಕೆಲವು ಮಾತುಗಳನ್ನು ಹೇಳಬಹುದು.

ಸಂಸ್ಕೃತ ಭಾಷೆಯಲ್ಲಿದ್ದ ಅಲಂಕಾರ, ಛಂದಸ್ಸು, ವ್ಯಾಕರಣ, ವೇದಾಂತ–ಸಿದ್ಧಾಂತ, ನಿಘಂಟು, ವಿಶ್ವಕೋಶಗಳ ಸಾರ – ವಿಚಾರಗಳನ್ನು ಕನ್ನಡ ಜನಕ್ಕೆ ತಿಳಿಯಪಡಿಸಲು ಅವರ ಜ್ಞಾನಾಭಿವೃದ್ಧಿಗೆ ಅವನ್ನು ಅನುವಾದ ಮಾಡುವುದರ ಮೂಲಕವೂ ಅಳವಡಿಸಿಕೊಳ್ಳುವುದರ ಮುಖಾಂತರವೂ ಕನ್ನಡಕ್ಕೆ ತಂದಿದ್ದಲ್ಲದೆ ಸ್ವತಂತ್ರ ಕೃತಿಗಳನ್ನೂ ಕನ್ನಡದಲ್ಲಿ ಬರೆದದ್ದು ಕನ್ನಡ ಶಾಸ್ತ್ರಕಾರರ ವೈಶಿಷ್ಟ್ಯ. ಆ ಮೂಲಕ ಕನ್ನಡ ಭಾಷೆ – ಸಾಹಿತ್ಯಾಂಗಗಳು ಬೆಳೆಯಲಿ ಎಂಬ ಅವರ ಕಳಕಳಿ ಗಮನಿಸಬೇಕಾದ ಸಂಗತಿಯಾಗಿದೆ. ಕರ್ನಾಟಕದ ರಾಜರ ಔದಾರ್ಯ, ಕನ್ನಡ ಸಂಸ್ಕೃತಿ – ನಾಡು – ನುಡಿಯ ಬಗ್ಗೆ ಅವರಿಗಿದ್ದ ಅಭಿಮಾನ ಅದ್ವಿತೀಯ. ನೃಪತುಂಗ, ಅರಿಕೇಸರಿ, ಇಜಿವಬೆಡಂಗ ಸತ್ಯಾಶ್ರಯ, ಚಾವುಂಡರಾಯ, ಅತ್ತಿಮಬ್ಬೆ, ಹೊಯ್ಸಳ ದೊರೆಗಳು, ಕೃಷ್ಣದೇವರಾಯ, ಮೈಸೂರಿನ ಒಡೆಯರಂಥ ರಾಜ–ಸಾಮಂತ ರಾಜರು, ಸಾಹಿತ್ಯಾಭಿಮಾನಿ ಮಂತ್ರಿವರ್ಯರನ್ನಿಲ್ಲಿ ಸ್ಮರಿಸಿಕೊಳ್ಳದಿರಲು ಸಾಧ್ಯವಿಲ್ಲ. ಅವರು ನಮ್ಮ ನಾಡಿನ ಸಂಸ್ಕೃತಿಯ ಪೋಷಕರು, ಅಸದೃಶ ಕನ್ನಡಾಭಿಮಾನಿಗಳು. ಕನ್ನಡ ಭಾಷೆ, ಕಾವ್ಯ ರಚನೆಗೆ ಮಾತ್ರವಲ್ಲ, ಎಲ್ಲಾ ಬಗೆಯ ಶಾಸ್ತ್ರ ಕೃತಿ ರಚನೆಗೂ ಹೇಗೆ ಉಪಯುಕ್ತವಾಗಬಲ್ಲದು, ಶಕ್ತಿಪೂರ್ಣವಾಗಿದೆ ಎಂದು ಕನ್ನಡದಲ್ಲಿ (ಸಂಸ್ಕೃತದಲ್ಲಿಯೂ ಕರ್ಣಾಟಕ ಭಾಷಾಭೂಷಣ, ಕರ್ಣಾಟಕ ಶಬ್ದಾನುಶಾಸನ) ಕೃತಿ ರಚಿಸುವುದರ ಮೂಲಕ ತೋರಿಸಿದರು. ಸಂಸ್ಕೃತ ಶಬ್ದಗಳನ್ನೇ ಪೂರ್ಣವಾಗಿ ಅವಲಂಬಿಸದೆ ಕನ್ನಡ ಶಬ್ದಗಳನ್ನು ಶಾಸ್ತ್ರ ಕೃತಿಗಳ ರಚನೆಗೆ ಎಷ್ಟು ಸಮರ್ಥವಾಗಿ ಬಳಸಿಕೊಳ್ಳಬಹುದೆಂಬುದನ್ನು ಕನ್ನಡ ಶಾಶ್ತ್ರಕಾರರು ತೋರಿಸಿದ್ದಾರೆ. ಶಾಸ್ತ್ರಕಾರರೆಲ್ಲರೂ ಕನ್ನಡ ಭಾಷೆಯನ್ನು ಶಾಸ್ತ್ರದೃಷ್ಟಿಯಿಂದಲೂ ಕಾವ್ಯದೃಷ್ಟಿಯಿಂದಲೂ

ಬಳಸಿಕೊಂಡಿರುವುದರ ಉದ್ದೇಶ ಸಹೃದಯರ ಆಸಕ್ತಿ ಕುಂದದಿರಲಿ ಎಂಬುದು. ವಿಷಯದ ಹರಹು, ಉದಾಹರಣೆಗಳ ಹೆಚ್ಚಳ, ಸೊಗಸು, ಸ್ವತಂತ್ರ ವಿಚಾರದೃಷ್ಟಿ ಕನ್ನಡ ಭಾಷೆಯ ಜೀವಾಳದ ಅರಿವು – ಕವಿರಾಜಮಾರ್ಗ, ಶಬ್ದಸ್ಮೃತಿ ಕರ್ಣಾಟಕ ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನ, ಕಾವ್ಯಾವಲೋಕನ, ಛಂದೋಂಬುಧಿ (ಅನುಭವಾಮೃತ, ಹರಿಕಥಾಮೃತಸಾರದಂಥ ತಾತ್ತ್ವಿಕ ಗ್ರಂಥಗಳು) ಕೃತಿಗಳಲ್ಲಿ ವ್ಯಕ್ತವಾದಂತೆ ಉಳಿದ ಕೃತಿಗಳಲ್ಲಿ ವ್ಯಕ್ತವಾಗಿಲ್ಲ. ಹೀಗಾಗಿ ಇವು ಶಾಸ್ತ್ರಗಳೂ ಹೌದೂ; ಕಾವ್ಯಗಳೂ ಹೌದು; ಕಾವ್ಯಲೇಪವನ್ನು ಪಡೆದ ಶಾಸ್ತ್ರಕೃತಿಗಳು ಎನ್ನುವುದು ಹೆಚ್ಚು ಸೂಕ್ತ. ಲೌಕಿಕ ಶಾಸ್ತ್ರ ಕೃತಿಗಳನ್ನು ಹೊರತುಪಡಿಸಿ ಅಲಂಕಾರ, ಛಂದಸ್ಸು, ವ್ಯಾಕರಣ, ನಿಘಂಟು, ಜ್ಞಾನಕೋಶ, ಧಾರ್ಮಿಕ ಶಾಸ್ತ್ರ ಗ್ರಂಥಗಳು ಶುದ್ಧ ಕಾವ್ಯ ರಚನೆಗೆ ಹಲವಾರು ರೀತಿಗಳಲ್ಲಿ ಸಹಾಯ ಮಾಡುತ್ತವೆ. ಹೀಗಾಗಿ ಇಂಥ ಶಾಸ್ತ್ರ ಗ್ರಂಥಗಳಲ್ಲಿ ಕಾವ್ಯಾಂಶ ಕಾಣಿಸಲು ಕಾರಣ ಅವರ ಕವಿ ಹೃದಯ; ವಿಷಯ ಸ್ಪಷ್ಟತೆಗಾಗಿ, ಲಕ್ಷಣ ಲಕ್ಷ್ಯಗಳ ನಿರೂಪಣೆಯಲ್ಲಿ ಶಾಸ್ತ್ರಕಾರರು ಆರಿಸಿಕೊಂಡಿರುವ ಸುಂದರ ಕವಿತೆಗಳಿಂದ ಅರಿಯಬಹುದು. ಕನ್ನಡವಾಗಲಿ, ಸಂಸ್ಕೃತವಾಗಲಿ ಕಾವ್ಯಾಭ್ಯಾಸಕ್ಕೆ ವ್ಯಾಕರಣ, ನಿಘಂಟು, ಛಂದಸ್ಸು, ಅಲಂಕಾರಗಳೆಂಬ ನಾಲ್ಕು ಶಾಸ್ತ್ರಗಳ ತಿಳಿವಳಿಕೆ ಅತ್ಯಗತ್ಯವಾಗಿರುವುದರಿಂದಲೇ ಇವು ಕಾವ್ಯಾಭ್ಯಾಸದ ಚತುರಂಗಗಳೆನಿಸಿಕೊಂಡವು. ಈ ವಿಷಯವನ್ನು ಮರೆಯದ ನಮ್ಮ ಕನ್ನಡ ಕವಿಗಳು ಕೆಲವಾದರೂ ಕೃತಿಗಳನ್ನು ಬರೆದರು. ಆದರೆ ಅವು ಸಮಗ್ರವಾಗಿವೆ ಎಂಬುದನ್ನು ಗಮನಿಸಬೇಕು.

ಸಮಕಾಲೀನ ಕರ್ನಾಟಕ ಹಾಗೂ ಭಾರತೀಯ ಸಾಂಸ್ಕೃತಿಕ ಪರಂಪರೆಯ ಮೇಲೆ ಬೆಳಕು ಚೆಲ್ಲುವಂಥ ಶಾಸ್ತ್ರಕೃತಿಗಳ ರಚನೆ ಕನ್ನಡದಲ್ಲಾಗಿರುವುದು ಗಮನಿಸಬೇಕಾದ ಮತ್ತೊಂದು ಸಂಗತಿಯಾಗಿದೆ. ಎರಡನೆಯ ನಾಗವರ್ಮ (ಕರ್ನಾಟಕ ಭಾಷಾಭೂಷಣ) ಮತ್ತು ಭಟ್ಟಾಕಳಂಕ (ಕರ್ನಾಟಕ ಶಬ್ದಾನುಶಾಸನ)ರಿಬ್ಬರೂ ಕನ್ನಡ ವ್ಯಾಕರಣ ವಿಚಾರಗಳನ್ನು ಸಂಸ್ಕೃತ ಭಾಷೆಯಲ್ಲಿ ಬರೆಯಲು ಎರಡು ಕಾರಣಗಳಿವೆ. ಕನ್ನಡದಲ್ಲೇನಿದೆ ಎಂದು ಮೂಗು ಮುರಿಯುತ್ತಿದ್ದ ಸಂಸ್ಕೃತ ಸಾಹಿತ್ಯಾಂಧರಿಗೆ ಕನ್ನಡದಲ್ಲಿಯೂ ಬೇಕಾದಷ್ಟು ವಿಚಾರಗಳಿವೆ ಎಂದು ಉತ್ತರ ಕೊಡಲು ಮತ್ತು ಅವರಲ್ಲಿದ್ದ ಅತೀವ ಕನ್ನಡಾಭಿಮಾನ.

ನಮ್ಮ ದೇಶ–ಭಾಷಾ ಪ್ರೇಮಿಗಳು ಏನು ಹೇಳಿದ್ದಾರೆಂಬುದನ್ನು ಕನ್ನಡದ ಮೊದಲ ಅಲಂಕಾರ ಶಾಸ್ತ್ರ ಗ್ರಂಥವಾದ ಕವಿರಾಜಮಾರ್ಗದ ಕೆಲವು ಪದ್ಯಗಳನ್ನು ಉದಾಹರಿಸುವುದರ ಮೂಲಕ ತಿಳಿಯಬಹುದು:

ಕುರಿತಂತು ಪೆರರ ಬಗೆಯಂ
ತೆರೆದಿರೆ ಪೆರರ್ಗೆ ಅರಿಪಲಾರ್ಪವಂ ಮಾತರಿವಂ ।
ಕಿರಿದರೊಳೆ ಪಿರಿದುಂ ಅರ್ಥಮಂ
ಅರಿಪಲ್ ನೆರೆವಾತನ್ ಆತನಿಂದಂ ನಿಪುಣಂ ॥ (೧–೧೬)

ನುಡಿಯಂ ಛಂದದೊಳ್ ಒಂದಿರೆ
ತೊಡರ್ಚಲ್ ಅರಿವಾತನ್ ಆತನಿಂದಂ ಜಾಣಂ
ತಡೆಯದೆ ಮಹಾಧ್ವಕೃತಿಗಳಂ
ಒಡರಿಸಲ್ ಆರ್ಪಾತನ್ ಎಲ್ಲರಿಂದಂ ಬಲ್ಲಂ ॥ (೧-೧)

ಕಾವೇರಿಯಿಂದಂ ಆ ಗೋ-
ದಾವರಿವರಂ ಇರ್ಪ ನಾಡದು ಆ ಕನ್ನಡದೊಳ್ ।
ಭಾವಿಸಿದ ಜನಪದಂ, ವಸು-
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ ॥ (೧-೩೬)

ಪದನರಿದು ನುಡಿಯಲುಂ ನುಡಿ-
ದುದನ್ ಅರಿದು ಆರಯಲುಂ ಆರ್ಪರ್ ಆ ನಾಡವರ್ಗಳ್ ।
ಚದುರರ್ ನಿಜದಿಂ, ಕುರಿತು ಓ-
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ ॥ (೧-೩೮)

ಕುಜೆತವರಲ್ಲದೆ ಮತ್ತಂ
ಪೆರರುಂ ತಂತಮ್ಮ ನುಡಿಯೊಳ್ ಎಲ್ಲರ್ ಜಾಣರ್ ।
ಕಿರುವಕ್ಕಳುಂ ಆ ಮೂಗರುಂ
ಅರಿಪಲ್ಕೆ ಅರಿವರ್ ವಿವೇಕಮಂ ಮಾತುಗಳಂ ॥ (೧-೩೯)

ಸುಭಟರ್ಕಳ್ ಕವಿಗಳ್ ಸು-
ಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್ ।
ಅಭಿಮಾನಿಗಳ್ ಅತ್ಯುಗ್ರರ್
ಗಂಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥ (೨-೨೮)

ಶ್ರೀವಿಜಯನ ಕೆಲವು ಮಾತುಗಳು ಅತ್ಯಭಿಮಾನದವು ಎಂದು ಒಪ್ಪಿದರೂ (೧-೩೬) ಕನ್ನಡ ನಾಡಿಗೂ ಜನಕ್ಕೂ ಆ ಮಾತುಗಳು ಒಪ್ಪುವಂಥವು ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಆ ಕಾಲದಲ್ಲಿ ಉತ್ತರ-ದಕ್ಷಿಣ ಮಾರ್ಗವಾಚಿ ಪ್ರಾಂತಭೇದಗಳಿದ್ದವೆಂಬುದೂ ಇಲ್ಲಿ ಸೂಚಿತವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಆ ಕಾಲದ ಕನ್ನಡ ಭಾಷೆಯಲ್ಲಿ ದೋಷಗಳು ಹೆಚ್ಚಾಗಿದ್ದವು; ಆ ದೋಷಗಳನ್ನು ನಿವಾರಿಸಲು ಮತ್ತು ಕವಿಶ್ರೇಷ್ಠರಾಗಬಯಸುವವರಿಗೆ ಕವಿರಾಜಮಾರ್ಗದ ರಚನೆಯನ್ನು ಶ್ರೀ ವಿಜಯ ಮಾಡಿದ್ದು ಅತ್ಯಂತ ಸೂಕ್ತವಾಗಿದೆ. ಕವಿರಾಜಮಾರ್ಗಕಾರ ಸಂಸ್ಕೃತದ ದಂಡಿಭಾಮಹರನ್ನು ಅನುಸರಿಸಿ ಕವಿರಾಜ ಮಾರ್ಗವನ್ನು ರಚಿಸಿದ್ದರೂ ಕನ್ನಡವನ್ನು ದೃಷ್ಟಿಯಲ್ಲಿಟ್ಟುಕೊಂಡು ಸ್ವತಂತ್ರ ವಿಚಾರ ಮಾಡಿ ಅನೇಕ ಹೊಸ ವಿಷಯಗಳನ್ನು ಸೇರಿಸಿದ್ದಾನೆ. ಒಟ್ಟಾರೆ ಕವಿರಾಜಮಾರ್ಗಕಾರನು ಕಾವ್ಯ ದೋಷಗಳನ್ನು ಹೇಳಿ ನುಡಿಯನ್ನು ಶುಚಿಗೊಳಿಸಲು ಪ್ರಯತ್ನಿಸಿದ್ದಾನೆ; ಶ್ರುತಿಕಷ್ಟ, ಅರಿಸಮಾಸದಂಥ ಕೆಲವು ವಿಚಾರಗಳನ್ನಿಲ್ಲಿ ಸ್ಮರಿಸಿಕೊಳ್ಳಬಹುದು.

ಎರಡನೆಯ ನಾಗವರ್ಮನು ಕಾವ್ಯಾವಲೋಕನವೆಂಬ ಅಲಂಕಾರ ಶಾಸ್ತ್ರಗ್ರಂಥದ ರಚನೆ ಮಾಡಿದ್ದಾನೆ. ಅದರಲ್ಲಿ ಬರುವ ಈ ಪದ್ಯ ಭಾರತೀಯ ಕಾವ್ಯಮೀಮಾಂಸೆಗೆ ಆತ ನೀಡಿದ ಕೊಡುಗೆಯಾಗಿದೆ.

ರೀತಿ ವಿನೂತನವಸ್ತುಕೃತಿಗೊಪ್ಪುವ ಮೆಯ್ ರಸಭಾವವೃತ್ತಿ ನಿ
ರ್ಣೀತಿಯೆ ಜೀವಮಂತದಜಿನನ್ವಿತನಪ್ಪ ಕವೀಶ್ವರಂ ಬುಧ
ವ್ರಾತಮೊಱಲ್ದು ಬಿಚ್ಚಟಿಸಿನಚ್ಚುವಳಂಕೃತಿ ಕೂಡದಿರ್ದೊಡಂ
ರೀತಿಯೊಳೊಂದೆ ಪೇೞ್ವುದು ರಸಂ ಬಿಡೆ ಬಂಧುರಕಾವ್ಯಬಂಧಮಂ (೪-೨೮೦)

ಕಾವ್ಯದ ಶರೀರವಾದ ರೀತಿಯನ್ನೂ ಕಾವ್ಯದ ಆತ್ಮವಾದ ರಸವನ್ನೂ ಕುರಿತ ಆತನ ನಿಲುವು ಅರ್ಥಪೂರ್ಣವಾಗಿದೆ. 'ಪದರಚನಾತಿಶಯಂ ರೀತಿದಲ್' (೪-೨೮೧) ಎಂಬ ವ್ಯಾಖ್ಯಾನ ಕನ್ನಡದಲ್ಲಿ ಕೊಟ್ಟಿದ್ದು ನಾಗವರ್ಮನ ವೈಶಿಷ್ಟ್ಯ. ಶ್ರೀವಿಜಯನಂತೆ (ಬೆದಂಡೆ-ಚತ್ತಾಣ-ಗದ್ಯಕಥೆ) ಕನ್ನಡದ ವಿಶಿಷ್ಟ ಕಾವ್ಯ ಜಾತಿಗಳನ್ನು ಹೇಳಿದ್ದಾನೆ:

೧ ಕಂದಪದ್ಯ, ಪ್ರಸಿದ್ಧ ವೃತ್ತ ಇದ್ದರೆ ಪದ; ೧೨ ಪದಗಳು ಸೇರಿ ಒಂದು ಮೆಲ್ವಾಡು, ೧೫-೨೫ ಪದಗಳು ಒಟ್ಟುಗೂಡಿದರೆ ಪಾಡು; ಈ ಪಾಡುಗಳಿಂದ ಆದದ್ದು ಪಾಡುಗಬ್ಬ; ಇದರಿಂದ ಮೆಲ್ವಾಡದ ರೂಢಿಯಲ್ಲಿರುವ ಬೆದಂಡೆಗಬ್ಬವೂ ಆಗುತ್ತದೆ; ಹಲವು ತೆರದ ಪದ್ಯಗಳು, ಪದ್ಧತಿಕೆ (ರಗಳೆ), ಸಮಸ್ತ ವರ್ಣನೆಗಳಿದ್ದರೆ ಬಾಜನೆಗಬ್ಬ.

ಕೇಶಿರಾಜನ ಶಬ್ದಮಣಿದರ್ಪಣ ಕನ್ನಡದ ಜೀವಾಳವನ್ನು ಕುರಿತು ರಚನೆಯಾಗಿರುವಂಥದ್ದು. ತನ್ನ ಕೃತಿಯಲ್ಲಿ ಕೇಶಿರಾಜನು ಅತೀವ ಕನ್ನಡಾಭಿಮಾನವನ್ನು ವ್ಯಕ್ತಪಡಿಸಿದ್ದಾನೆ.[೧] ಅದು ಪರೋಕ್ಷವಾಗಿಯೂ ಅಪರೋಕ್ಷವಾಗಿಯೂ ವ್ಯಕ್ತವಾಗಿದೆ.

ಗಮಕ ಸಮಾಸದಿಂ, ಱಟಕುಳಕ್ಷಳದಿಂ, ಶ್ರುತಿಸಹ್ಯಸಂಧಿಯಿಂ,
ಸಮುಚಿತವಾಗಿ ಬರ್ಪ ಸತಿಸಪ್ತಮಿಯಿಂ, ಸಮಸಂಸ್ಕೃತೋಕ್ತಿಯಿಂ.
ವಮಹಪ ಭೇದದಿಂ ವಿರಹಿತಾವ್ಯಯಸಂಸ್ಕೃತ ಲಿಂಗದಿಂ, ಪದೋ
ತ್ತಮ ಶಿಥಿಲತ್ವದಿಂ, ಯುತಿವಿಲಂಘನದಿಂದರಿದಲ್ತೆ ಕನ್ನಡಂ ॥ (೩೪೨)

ಕೇಶಿರಾಜನು ಈ ವೃತ್ತದಲ್ಲಿ ( ಈ ವೃತ್ತ ಪ್ರಕ್ಷಿಪ್ತವಲ್ಲವೆಂದು ಭಾವಿಸುವುದಾದರೆ) ಕನ್ನಡದ ಅಸಾಧಾರಣ ಲಕ್ಷಣಗಳನ್ನು ಹೇಳಿದ್ದಾನೆ; ಅಷ್ಟೇ ಅಲ್ಲ, ಕನ್ನಡ ಸಂಸ್ಕೃತಜನ್ಯವಲ್ಲ, ಅದೇ ಪ್ರತ್ಯೇಕ ಭಾಷಾವರ್ಗಕ್ಕೆ ಸೇರಿದ ಭಾಷೆ ಎಂಬುದನ್ನು ಸ್ಪಷ್ಟಪಡಿಸಿದಂತಿದೆ. ಒಂದೊಂದು ಅಂಶವೂ ತುಂಬ ಮೌಲಿಕವಾದುದು. 'ಶ್ರುತಿಸಹ್ಯಸಂಧಿ' ಎಂದರೆ ಕಿವಿಗೆ ಕೇಳಲು ಕಷ್ಟವಾಗದಂತೆ (ಶ್ರುತಿಕಷ್ಟ) ಹಿತವಾದ ರೀತಿಯಲ್ಲಿ ಸಂಧಿ ಮಾಡುವುದು ಎಂದು ಅರ್ಥ. ಅಲ್ಲಿ ಕರ್ಕಶತೆಯಾಗಲೀ, ಅರ್ಥಾಂತರವಾಗಲೀ (ಅಶ್ಲೀಲ-ಅಸಹ್ಯಾರ್ಥ) ಉಂಟಾಗಬಾರದು. ಇದರ ಬಗ್ಗೆ ಕೇಶಿರಾಜನು ದೀರ್ಘವಾಗಿ ಪ್ರಸ್ತಾಪಿಸಲು ಕಾರಣ ಕನ್ನಡ ಶಬ್ದಗಳ ಲಾಲಿತ್ಯ, ಸುಭಗತೆ, ಕೋಮಲತೆಗಳಿಗೆ ಭಂಗ ಬರಬಾರದು ಎಂಬುದು.[೨]

ಇದರ ಒಳಗುಟ್ಟೇನೆಂದರೆ ಅಚ್ಚಕನ್ನಡ ಪದಗಳನ್ನೂ ಸಂಸ್ಕೃತ ಪದಗಳನ್ನೂ ಜೊತೆಯಲ್ಲಿ ತರದಿರುವುದೇ ಒಳ್ಳೆಯದು. ಕೇಶಿರಾಜನು ಐಟಿಘಟಿತ ಶಬ್ದಕೋಶವನ್ನು (೩೩ನೆಯ ಸೂತ್ರ) ಕೊಡುವುದರ ಮುಖಾಂತರ ಕನ್ನಡ ಭಾಷೆಯ ಶುಚಿತ್ವವನ್ನು ಕಾಪಾಡಲು ಪ್ರಯತ್ನಿಸಿರುವುದು ಶ್ಲಾಘ್ಯವಾದ ವಿಚಾರವಾಗಿದೆ.[೩] ಕೇಶಿರಾಜನು ತನ್ನ ಕಾಲದ ಭಾಷಾ ಪರಿವರ್ತನೆಯತ್ತ ದೃಷ್ಟಿಹರಿಸಿ ಭಾಷೆಯನ್ನು ಸುಸ್ಥಿತಿಯಲ್ಲಿಡಲು ಪಟ್ಟಿರುವ ಶ್ರಮ ಅಗಾಧವಾದುದು. ಆದರೂ ಕೇಶಿರಾಜನ ಕಾಲಕ್ಕಾಗಲೇ ಕನ್ನಡ ಕೆಡುತ್ತ ಬಂದಿತ್ತು. ಅದನ್ನು ಶುದ್ಧಗೊಳಿಸಲು ಹಾಗೂ ಹಳಗನ್ನಡದ ಬಿಗಿಯನ್ನು ಕಾಪಾಡಿಕೊಂಡು ಬರಲು ಶಬ್ದಮಣಿದರ್ಪಣ ರಚನೆಯಾಯಿತೆನ್ನಬಹುದು.

ಸಂದ ಪಕಾರಕ್ಕೆ ಹಕಾ-
ರಂ ದೊರೆಕೊಳ್ಗುಂ ವಿಕಲ್ಪದಿಂ ಸಂಯೋಗಂ ।
ಸಂದಿಸಿದೊಡೆ ದುಷ್ಕರಮದು
ಸುಂದರಮಾ ದೇಶಿಯಿಂದಮೆಂಬರ್ ವಿಬುಧರ್ ॥ (೧೭೦)

"ಕನ್ನಡದ ಶಬ್ದಗಳಲ್ಲಿರುವ ಪಕಾರಕ್ಕೆ ವಿಕಲ್ಪದಿಂದ ಹಕಾರವುಂಟಾಗುತ್ತದೆ (ಪಲಗೆ-ಹಲಗೆ), ದ್ವಿತ್ವದಿಂದ ಕೂಡಿದ (ತಪ್ಪು, ಹೆಪ್ಪು) ಪಕಾರಕ್ಕೆ (ಬಹುಳವಾಗಿ) ಹಕಾರ ಬರುವುದಿಲ್ಲ; ಈ ಪಕಾರ ಹಕಾರವಾಗುವಿಕೆ ದೇಶಿಯಲ್ಲಿ ಸುಂದರವೆಂದು ವಿದ್ವಾಂಸರು ಹೇಳುವರು" ಎಂದು ಕೇಶಿರಾಜನು ಹೇಳಿದ್ದಾನೆ. ವಿದ್ವಾಂಸರ ಮಾತಿಗೆ ಕೇಶಿರಾಜನು ಗೌರವ ನೀಡುವುದಿರಲಿ, ಕನ್ನಡ ಶಬ್ದಗಳ ಸೌಂದರ್ಯದ ಬಗ್ಗೆ ಆತನು ಹೇಳುವ ಮಾತು ಗಮನಾರ್ಹವಾದುದು.[೪] ಕೇಶಿರಾಜನ ಕನ್ನಡಾಭಿಮಾನಕ್ಕೆ, ಸಂಸ್ಕೃತ ಪಾಂಡಿತ್ಯವನ್ನು ಪಡೆದ ಆತ ಕನ್ನಡದಲ್ಲಿ ಕೃತಿರಚನೆ ಮಾಡಿದ್ದನ್ನೇ ನಿದರ್ಶನವನ್ನಾಗಿ ನೀಡಬಹುದು.

ಭಟ್ಟಾಕಲಂಕನು ಕರ್ಣಾಟಕ ಶಬ್ದಾನುಶಾಸನವೆಂಬ ಒಂದು ಸಮಗ್ರ ವ್ಯಾಕರಣವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಇದರಲ್ಲಿ ವಿಸ್ತಾರವಾದ ವೃತ್ತಿ-ವ್ಯಾಖ್ಯಾನಗಳಿವೆ. ಈತನು ಸಂಸ್ಕೃತದಲ್ಲಿ ಈ ವ್ಯಾಕರಣವನ್ನು ರಚಿಸಿರುವುದನ್ನು ಗಮನಿಸಿದರೆ ಆತನ ಕಾಲದಲ್ಲಿ (ಕ್ರಿ.ಶ. ೧೬೦೪) ಸಂಸ್ಕೃತ ಪಂಡಿತರು ಕನ್ನಡವೆಂದರೆ ಮೂಗು ಮುರಿಯುತ್ತಿದ್ದರೆಂದು ತೋರುತ್ತದೆ; ಕನ್ನಡ ಭಾಷೆಯ ಹಿರಿಮೆ ಗರಿಮೆಗಳನ್ನು ಅವರಿಗೆ ಮನದಟ್ಟು ಮಾಡಲು ಈ ತಂತ್ರವನ್ನು ಅವನು ಅನುಸರಿಸಿರಿವುದು ಸ್ಪಷ್ಟವಾಗುತ್ತದೆ. ಕನ್ನಡ ಭಾಷೆಯ ಪ್ರಾಚೀನತೆಯನ್ನೂ ಅದರ ಹಿರಿಮೆಯನ್ನೂ ಕುರಿತು ಆತನು ಆಡಿರುವ ಮಾತುಗಳನ್ನು ಗಮನಿಸಿ:

"ಈ ಭಾಷೆ ಶಾಸ್ತ್ರ ನಿರೂಪಣೆಗೆ ಅತ್ಯಂತ ಉಪಯೋಗಿಯಾಗಿದೆ. ಇದರಲ್ಲಿ ತತ್ತ್ವಾರ್ಥ ಮಹಾಶಾಸ್ತ್ರಕ್ಕೆ ವ್ಯಾಖ್ಯಾನ ರೂಪದ ೯೬,೦೦೦ ಗ್ರಂಥ ಪ್ರಮಾಣದ[೫] 'ಚೂಡಾಮಣಿ' ಎಂಬ ಮಹಾಗ್ರಂಥವೂ, ಶಬ್ದಾಗಮಯುಕ್ತ್ಯಾಗಮ ಪರಮಾಗಮ ವಿಷಯಗಳನ್ನೊಳಗೊಂಡ ಗ್ರಂಥಗಳೂ, ಕಾವ್ಯ ನಾಟಕಾಲಂಕಾರ ಕಲಾಶಾಸ್ತ್ರ ವಿಷಯಗಳನ್ನೊಳಗೊಂಡ ಅನೇಕಾನೇಕ ಗ್ರಂಥಗಳೂ ದೊರೆಯುವುದಾದ್ದರಿಂದ ಇದು ಮಹಾಜನರಿಂದ ಪರಿಗ್ರಾಹ್ಯವಾಗಿದೆ".

ಭಾಷೆಗಳನ್ನು ಕುರಿತು ಹೇಳುತ್ತಾ, 'ಕರ್ನಾಟಕ, ಆಂಧ್ರ, ಮಗಧ, ಮಾಳವ ದೇಶಗಳ ಭಾಷೆಗಳಿಗೂ ಭಾಷೆ ಎಂಬ ಪದ ಅನ್ವಯಿಸುತ್ತದೆ' ಎಂದು ಹೇಳಿದ್ದಾನೆ. ಹದಿನೆಂಟು ಮಹಾಭಾಷೆಗಳು ಪ್ರಸಿದ್ಧವಾಗಿ ಪ್ರಚಾರದಲ್ಲಿವೆ; ಕ್ಷುಲ್ಲಕ ಭಾಷೆಗಳು ಏಳುನೂರು ಉಂಟೆಂದು ಅವನು ಹೇಳಿದ್ದಾನೆ. ಶುದ್ಧಾಶುದ್ಧ ಪ್ರಯೋಗಗಳನ್ನು ತೋರಿಸಲು ಸಂಸ್ಕೃತದಲ್ಲಿ ಹೇಗೆ ನಿಯಮ (ಅನುಶಾಸನ) ಮಾಡುವರೋ ಹಾಗೆಯೇ ಕನ್ನಡದಲ್ಲಿಯೂ ಸರಿ–ತಪ್ಪುಗಳ ವಿವೇಚನೆ ಮಾಡಿ 'ಅನುಶಾಸನ ಮಾಡಲು ಆ ಭಾಷೆ ಅರ್ಹವಾಗಿದೆ' – ಎಂದು ಹೇಳಿರುವುದರಲ್ಲಿ ಆತನ ಅತ್ಯಪೂರ್ವವೂ ಉತ್ಕಟ ರೀತಿಯ ಕನ್ನಡ ಅಭಿಮಾನವೂ ವ್ಯಕ್ತವಾಗುತ್ತದೆ.

'ಛಂದೋಂಬುಧಿ'ಯ ಕರ್ತೃ ಒಂದನೆಯ ನಾಗವರ್ಮನು ಸಂಸ್ಕೃತದ ಪಿಂಗಲ, ಜಯದೇವರ ಅನುಕರಣೆ ಮಾಡದೆ ಛಂದಸ್ಸಿಗೆ ಸಂಬಂಧಿಸಿದ ಒಂದು ಸ್ವತಂತ್ರ ಕೃತಿಯನ್ನು ರಚಿಸಿದ್ದು ಬಹು ದೊಡ್ಡ ವಿಚಾರವಾಗಿದೆ. 'ಪಂಚಮಾಧಿಕಾರ'ದಲ್ಲಿ ಕರ್ಣಾಟ ವಿಷಯ ಜಾತಿವೃತ್ತಗಳ ವಿಚಾರವನ್ನು ಹೇಳಿದ್ದಾನೆ.[೬]

ಲೋಕಾನುಭವ ಜನಕ್ಕೆ ತಿಳಿಯಬೇಕೆಂಬ ಉದ್ದೇಶದಿಂದ ಕೆಲವು ಲೇಖಕರು ಬುದ್ಧಿಪೂರ್ವಕವಾಗಿ ಕೃತಿ ರಚಿಸಿದ್ದೂ ಉಂಟು. ಅಂಥ ಕೃತಿಗಳಲ್ಲಿ ತತ್ತ್ವ, ಧರ್ಮ, ನೀತಿ, ಅಧ್ಯಾತ್ಮದ ವಿಚಾರಗಳಿವೆ. ಎಲ್ಲಕ್ಕಿಂತ ಹೆಚ್ಚಾಗಿ ಕೆಲವು ಕೃತಿಗಳಲ್ಲಿ ಅವರು ವ್ಯಕ್ತಪಡಿಸಿರುವ ಕನ್ನಡಾಭಿಮಾನವನ್ನು ಗಮನಿಸಿ; ಮಹಲಿಂಗರಂಗ (೧೬೭೫)ನ ಅನುಭವಾಮೃತದ ಈ ಪದ್ಯವನ್ನು ನೋಡಿ:

"ಲಲಿತವಹ ಕನ್ನಡದ ನುಡಿಯಲಿ ತಿಳಿದು
ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ
ಸಾಲದೇ ಸಂಸ್ಕೃತದಲ್ಲಿನ್ನೇನು?"

ನಮ್ಮ ಜನಕ್ಕೆ ಸಂಸ್ಕೃತದ ಮೇಲಿದ್ದ ವ್ಯಾಮೋಹ ಎಂಥದೆಂಬುದೂ ಅದಕ್ಕೆ ಕನ್ನಡ ಕವಿಗಳು ವ್ಯಕ್ತಪಡಿಸಿರುವ ಅಭಿಪ್ರಾಯವೆಂಥದೆಂಬುದೂ ಇದರಿಂದ ತಿಳಿಯುತ್ತದೆ. ತಾತ್ತ್ವಿಕ ವಿಚಾರಗಳು ಉಪಮಾನ–ದೃಷ್ಟಾಂತಗಳಿಂದ ಹಾಗೂ ತಿಳಿಯಾದ ಕನ್ನಡದಲ್ಲಿ ಪ್ರತಿಪಾದಿತವಾಗಿವೆ ; ಈ ವಿಚಾರಗಳು ಕನ್ನಡ ಜನತೆಗೆ ತಿಳಿಯಲೆಂಬುದು ಅವರ ಉದ್ದೇಶ.

ಬುದ್ಧಿವಂತನು ಗಳಿಸಿದರ್ಥವು ಬಿದ್ದುಹೋಹುದು
ಕಡೆಗೆ ಮರಳಿನ ಗದೆಗೆತ್ತಿದ ನೀರ ತೆರದಲಿ;
ಮಡದಿ ಮಕ್ಕಳನು ಉದ್ಧರಿಸಿ ಸಲಹಿದರೆ
ಸಂಗಡಲೆದ್ದುಬಾರರು ಯಮಪುರಕ್ಕೆ;

ಜಗನ್ನಾಥದಾಸರ ಹರಿಕಥಾಮೃತಸಾರ (೧೭೨೮–೧೮೦೯)ದ ಪದ್ಯವನ್ನು ಗಮನಿಸಿ.

ಭಾಸ್ಕರನ ಮಂಡಲವ ಕಂಡು ನಮಸ್ಕರಿಸಿ ಮೋದಿಸದೆ
ದ್ವೇಷದಿ ತಸ್ಕರನು ನಿಂದಿಸಲು ಕುಂದಹುದೇ
ದಿವಾಕರಗೆ; ಸಂಸ್ಕೃತವಿದಲ್ಲೆಂದು ಕುಹಕ
ತಿರಸ್ಕರಿಸಲೇನಹುದು; ಭಕ್ತಪುರಸ್ಕರದಿ ಕೇಳ್ವರಿಗೆ
ಯೊಲಿಪನು ಪುಷ್ಕರಾಕ್ಷಸದಾ.

ಸಂಸ್ಕೃತವನ್ನು ಚೆನಾಗಿ ಬಲ್ಲವರು; ಸಂಸ್ಕೃತದಲ್ಲಿ ಕೃತಿರಚಿಸುವ ಸಾಮರ್ಥ್ಯವಿದ್ದರೂ ದೇಶ ಭಾಷೆಗೆ ಪ್ರಾಧಾನ್ಯ ಕೊಟ್ಟು ಕೃತಿ ರಚಿಸಿದ್ದು ಅವರ ನಾಡುನುಡಿಯ ಅಭಿಮಾನಕ್ಕೆ ಸುಂದರ ನಿದರ್ಶನವಾಗಿದೆ.

ಕನ್ನಡಿಗರ ನಾಲಗೆಯ ಚಪಲ ಎಂಥದ್ದೆಂಬುದೂ ಅದನ್ನು ತಣಿಸಲೋಸುಗ ಮೂರನೆಯ ಮಂಗರಸನು ತನ್ನ ಕೃತಿ ಸೂಪಶಾಸ್ತ್ರವನ್ನು ಬರೆದು ತಿಳಿಸಿದ್ದಾನೆ. ಜ್ಯೋತಿಷ್ಯ, ಕಾಮ, ಅಶ್ವ, ವೈದ್ಯ, ನೀತಿ ಮುಂತಾದ ಹಲವು ಹತ್ತು ವಿಷಯಗಳನ್ನು ಕುರಿತು ದೇಶ ಭಾಷೆಯಲ್ಲಿ ಬರೆದದ್ದು ಹೆಚ್ಚುಗಾರಿಕೆಯ ವಿಚಾರವಾಗಿದೆ. ಕನ್ನಡ ಜನ ಎಂಥ ತಿಳಿವಳಿಕೆಯನ್ನು ಪಡೆದಿದ್ದರೆಂಬುದೂ ಕನ್ನಡದಲ್ಲಿ ಅದನ್ನು ತಿಳಿಸಲು ಪ್ರಯತ್ನಿಸಿ ಸಫಲರಾದದ್ದೂ ಸಾಮಾನ್ಯವಾದ ವಿಚಾರವೇನಲ್ಲ![೭]

■

## ಅಡಿ ಟಿಪ್ಪಣಿಗಳು

೧. ಹೆಚ್ಚಿನ ವಿವರಗಳಿಗೆ ಜಿ. ಅಬ್ದುಲ್ ಬಷೀರ್ ಅವರ 'ಶಬ್ದಮಣಿ ದರ್ಪಣ ದೀಪಿಕೆ' ಎಂಬ ಮೂಲ ಕೃತಿಯನ್ನು ನೋಡಿ. ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೫೬೦೦೧೮, ಮೂ.ಮು. ೨೦೧೫.

೨. ನೋಡಿ: ಕವಿರಾಜಮಾರ್ಗ: ೧-೬೩, ೬೫, ೯೯; ೨-೭, ೮; ಸಂ: ಎಂ.ವಿ. ಸೀತಾರಾಮಯ್ಯ, ಪ್ರ: ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು-೫೬೦ ೦೧೯. ಕಾವ್ಯಾವಲೋಕನ, ೪೦೪, ೪೩೭, ೪೪೪, ಮೈಸೂರು ವಿಶ್ವವಿದ್ಯಾಲಯ, ಪ್ರಮು. ೧೯೬೭

೩. ಶಬ್ದಮಣಿ ದರ್ಪಣ ದೀಪಿಕೆ, ಪುಟ ೫೨ ರಿಂದ ೬೪ ನೋಡಿ. ಇಲ್ಲಿ ೧೮೨ ಶಬ್ದಗಳ ಅರ್ಥವಿದೆ. ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಒಟ್ಟು ೧೪೦೦ ಶಬ್ದಗಳಿಗೆ ಅರ್ಥ ಹೇಳಿದ್ದಾನೆ.

೪. ಅದೇ, ಪುಟ ೬೯-೭೨, ೧೦೪-೧೦೬, ೧೩-೧೪ ನೋಡಿ.

೫. ಗ್ರಂಥ ಎಂದರೆ ೩೨ ಅಕ್ಷರಗಳ ಸಂಖ್ಯೆಯ ಬರೆಹ, ಶ್ಲೋಕದಲ್ಲಿ ೩೨ ಅಕ್ಷರಗಳಿರುತ್ತವೆ. (ಶಬ್ದಾಗಮ ವ್ಯಾಕರಣ, ಯುಕ್ತ್ಯಾಗಮ ತರ್ಕ, ಪರಮಾಗಮ ಜೈನ ಧಾರ್ಮಿಕ ಶಾಸ್ತ್ರ, ವೇದೋಪನಿಷತ್ತು).

೬. ದೇಶೀಯ ಛಂದಸ್ಸಿಗೆ ಸಂಬಂಧಿಸಿದ ಬ್ರಹ್ಮ, ವಿಷ್ಣು, ಮಹೇಶ್ವರ ಗಣಗಳ ಸ್ವರೂಪ, ಅವುಗಳ ಪ್ರಸ್ತಾರ ಕ್ರಮ, ಇವುಗಳಿಂದ ಆದ ಐದು ಅಕ್ಕರಗಳು, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ, ಉತ್ಸಾಹದಂಡಕ (ಶರಷಟ್ಪದಿ) ಈ ದೇಶೀಯ ಜಾತಿಗಳನ್ನು ಹೇಳಿದ್ದಾನೆ.

೭. ಯಲಹಂಕ ಕ್ಷೇತ್ರದ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಂಯುಕ್ತಾಶ್ರಯದಲ್ಲಿ 'ಕನ್ನಡ ಸಾಹಿತ್ಯದಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕ' ಎಂಬ ವಿಷಯ ಕುರಿತು ನಡೆದ ವಿಚಾರ ಸಂಕೀರ್ಣದಲ್ಲಿ ಮಂಡಿಸಿದ ಪ್ರಬಂಧ.

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# ೭. ಬಿಎಂ.ಶ್ರೀ. ದಾರುಣ ಬದುಕಿನ ಕಾವ್ಯ ಪ್ರತಿಮೆ 'ಧನುಷ್ಕೋಟಿ'–೧೯೧೫

–ಬಿ.ಜಿ. ಸತ್ಯಮೂರ್ತಿ*

ಶ್ರೀ ಅವರು ಬರೆದ "ಧನುಷ್ಕೋಟಿ" ಎಂಬ ಕವನ ಎಷ್ಟೋ ಸಮಯ ಅಜ್ಞಾತವಾಗಿದ್ದದ್ದು ಕನ್ನಡಿಗರ–ನಾಡು ನುಡಿಯ ದುರ್ದೈವ. ಬಿ.ಎಂ.ಶ್ರೀ. ಅವರ ಕೌಟುಂಬಿಕ ಜೀವನ ದುರಂತಮಯವಾಗಿದ್ದಿತು. ನಡುವಯಸ್ಸಿನಲ್ಲಿ ಅವರ ಹೆಂಡತಿ ಸತ್ತು ಹೋಗಿದ್ದರು. ಮಗನಿಗೆ ಕಣ್ಣು ಬೇನೆ ಬಂದ ಕಾರಣವಾಗಿ ಕಣ್ಣು ಕಳೆದುಕೊಂಡ. ಮಗಳ ಗಂಡ ಎಳೆ ವಯಸ್ಸಿನಲ್ಲಿ ಸಾವನ್ನಪ್ಪಿದ. ಆತನ ಶ್ರಾದ್ಧ ಮುಗಿದ ಮೂರನೇ ದಿನವೇ ಅವರ ತಾಯಿಯ ಮರಣ. ಹೀಗೆ ದುರಂತಗಳ ಸರಮಾಲೆಯ ಸಂದರ್ಭದಲ್ಲಿ ತಾಯಿಯ ಮರಣವಾದ ಮೂರನೆ ದಿವಸವೆ ಅವರು ತರಗತಿಗೆ ಹೋಗಿ ಪಾಠ ಮಾಡಿದ್ದಾರೆ.[೧] ಶ್ರೀ ಅವರು ರಚಿಸಿರುವ 'ಧನುಷ್ಕೋಟಿ' ಕವನದ ಕಾರಣವನ್ನು ಶ್ರೀ ಅವರ ಬಾಯಿಂದಲೇ ಕೇಳುವುದಾದರೆ 'ನಮ್ಮ ಸಂಸಾರ ಅನೇಕ ರೀತಿಯಲ್ಲಿ ಟ್ರ್ಯಾಜಡಿ; ನಮ್ಮ ಜನಾಂಗ ಜೀವನ ಅನೇಕ ರೀತಿಯಲ್ಲಿ ಟ್ರ್ಯಾಜಡಿ; ಟ್ರ್ಯಾಜಡಿಯನ್ನು ಲೋಕದಲ್ಲಿ ಅನುಭವಿಸಿದವರು ಸಾಹಿತ್ಯದಲ್ಲಿ ಆಳವಾದ ದೂರದೃಷ್ಟಿಯುಳ್ಳ ಕವಿಗಳ ಕಣ್ಣಿನಿಂದ ನೋಡೋಣ; ಅನುಭವಿಸೋಣ'[೨] ಎಂದು ಮಾರ್ಮಿಕವಾಗಿ ಹೇಳಿರುವುದನ್ನು ನೋಡಿದರೆ ಅವರ ಮನೆಯಲ್ಲಿ ಮೇಲಿಂದ ಮೇಲಾದ ಸಾವಿನ ಸರಮಾಲೆಯಾಗಿ ಶ್ರೀ ಅವರನ್ನು ಯಾವ ಮಟ್ಟಕ್ಕೆ ತಂದಿರಬಹುದೆಂದು ತಿಳಿಯಬಹುದಾಗಿದೆ.

ಶ್ರೀ ಅವರು ಯಾರ ಸಾವಿನ ದುಃಖವನ್ನಾದರೂ ಸಹಿಸಬಲ್ಲವರಾಗಿದ್ದರು. ಆದರೆ ಹೊಯ್ಸಳ ಆಗಿದ್ದ ಪತ್ನಿಯ ಅಗಲಿಕೆಯಿಂದ ಅವರು ಅತ್ಯಂತ ದುಃಖತಪ್ತರಾಗಿದ್ದಾರೆ. ಪತ್ನಿಯ ಬಗ್ಗೆ ಅವರು;

* ನಂ. ೫೩/೪, ೨೩ನೇ ಕ್ರಾಸ್, ಸೋಮೇಶ್ವರ ಬಡಾವಣೆ, ಹುಳಿಮಾವು (ಕಂಪಮ್ಮ ದೇವಸ್ಥಾನದ ಹಿಂದೆ), ಬನ್ನೇರುಘಟ್ಟ ರಸ್ತೆ, ಬೆಂಗಳೂರು–೫೬೦೦೭೬. ಮೊ: ೯೪೪೮೩೭ ೦೨೨೧೨.

** ಸಂ. ವಿಶಾಲಾಕ್ಷಿ: ಶ್ರೀ ಉತ್ಸವ (೧೯೮೬) ಪುಟ ೪.

*ನನ್ನ ಪ್ರಾಣದ ಕೈ ಹಿಡಿದ ಒಡನಾಡಿ
ಸತ್ತು ಓ ಸತ್ತು,
ತಂಪು ಸೊಂಪು ಬೀರಿದ ಮುಖ ಕಣ್ಣಿಂದ ಜಾರಿ
ಬಾಳು ಬರಡಾಯಿತು.
ಹನ್ನೆರಡು ವರ್ಷಗಳ ಹಿಂದೆ ಹೆಂಡತಿಯಾದೆ,
ಬಂಗಾರದಂಥ ಹೆಣ್ಣೊ,
ಆರೇ ಆರು ಚೈತ್ರಕೆ ಸಂಗಾತಿಯಾದೆ,
ಸಂಗಕ್ಕೆ ಸಂದ ಜೇನೆ.

ಶ್ರೀ ಅವರ 'ಪ್ರೇಮದ ಧನುಷ್ಕೋಟಿ' ಕವನವನ್ನು ನೋಡುವಾಗ ನಮಗೆ ಥಟ್ಟನೆ ನೆನಪಾಗುವುದು ಕ್ರೌಂಚ ಪಕ್ಷಿಯ ಜೋಡಿಯಲ್ಲಿ ಬೇಡನು ಒಂದನ್ನು ಕೊಂದಾಗ ಮತ್ತೊಂದರ ಶೋಕದ ಆಕ್ರಂದನ. ಧನುಷ್ಕೋಟಿ ಕವನ ಶ್ರೀ ಅವರ ಪತ್ನಿ ವಿಯೋಗದ ಪ್ರತೀಕದ ಅಭಿವ್ಯಕ್ತಿ. ವಾಲ್ಮೀಕಿಯ ಮನದಾಳದಿಂದ ಕ್ರೌಂಚ ಮಿಥುನದ ವಿರಹವನ್ನು ಕಂಡು 'ಮಾನಿಷಾ' ಶೋಕ ಶ್ಲೋಕವಾಗಿ ಹೊರಟರೆ, ಇಲ್ಲಿ ಶ್ರೀಗಳ ಪತ್ನಿವಿಯೋಗದ ವಿರಹವೇದನೆ 'ಧನುಷ್ಕೋಟಿ' ಆತ್ಮಾನುಭವದ ರೂಪದಲ್ಲಿ ಹೊರಬಿದ್ದಿದೆ. ಶ್ರೀ ಅವರು ಪತ್ನಿಯ ಅನಿರೀಕ್ಷಿತ ಸಾವಿನ ಅಗಲುವಿಕೆಯಿಂದ ಅವರ ಒಳಗುದಿಯ ಶೋಕ, 'ಶೋಕಃ ಶ್ಲೋಕತ್ವಮಾಗತಃ' ಆಗಿರುವುದನ್ನು 'ಧನುಷ್ಕೋಟಿ' ಕವನದಲ್ಲಿ ಕಾಣಬಹುದು. ಕವನದ ಪರಮಾರ್ಥ–ಕರುಣ ರಸ. ಇದೇ ಧನುಷ್ಕೋಟಿ ಕವನದ ಆತ್ಮವೂ ಹೌದು.

ಮಹಾಕವಿಯ ವಾಣಿಯಲ್ಲಿನ ಪ್ರತೀಯಮಾನ ಅರ್ಥ ಅಂತಿಮವಾಗಿ ಸ್ಫುರಿಸುವ 'ಧನುಷ್ಕೋಟಿ' ಕವನದ ವಸ್ತು ಶ್ರೀ ಅವರ ದಾಂಪತ್ಯ ಜೀವನದ ಧ್ವನಿ, ಕವನದ ಆತ್ಮವೂ ಆಗಿದೆ. ಶ್ರೀ ಅವರ ವಿರಹ ವೇದನೆ ಅನುಭವಿಸುವ ಹೃದಯ ವೇದನೆಯನ್ನು ಶ್ರೀ ಅವರ ಪ್ರತಿಭೆಯ ಕಣ್ಣು ಗುರುತಿಸಿದೆ. ಹೊರಗೆ ಹೇಳಿಕೊಳ್ಳಲಾರದ ವೇದನೆ ಕಂಬನಿಯ ರೂಪದಲ್ಲಿ ಮಿಡಿದು ಕಣ್ಣುಗಳಿಂದ ಕವನದ ರೂಪದಲ್ಲಿ ಹನಿ ಹನಿಯಾಗಿ ಇಳಿಜಾರಿದೆ.

ಮಾರ್ದವತೆ ಮಡುವಾದಂತಿದ್ದ ನಿನ್ನ ಕಣ್ಣ
ಪಾಪೆಯಾಗಿದ್ದೆನಲ್ಲ ನಾನು.
ತಣ್ಣನೆಯ ನೆಮ್ಮದಿಯ ನೆರಳಾದವಳೆ ನಿನ್ನ
ಒಪ್ಪ ಮಾಡಿಟ್ಟುಕೊಂಡೆನೇನು ?

ಶ್ರೀ ಅವರು ಪತ್ನಿಯನ್ನು ಎಷ್ಟು ಪ್ರೀತಿಸುತ್ತಿದ್ದರು ಎನ್ನುವುದಕ್ಕೆ ಮೇಲಿನ ನಾಲ್ಕು ಸಾಲುಗಳು ಸಾಕು. ಇಷ್ಟು ಗಾಢವಾಗಿ ಪ್ರೀತಿಸುತ್ತಿದ್ದ ಅನ್ಯೋನ್ಯ ದಾಂಪತ್ಯ ಒಮ್ಮೆಲೆ ಒಡೆದಾಗ ಶ್ರೀ ಅವರಲ್ಲಿ ಜ್ವಾಲಾಮುಖಿಯಾದ ಕವಿಪ್ರತಿಭೆ ಒಂದು ರೀತಿಯ ಸಾಕ್ಷಿ ಪ್ರಜ್ಞೆಯ ದೃಷ್ಟಿಯಾಗಿ ಮಾರ್ಪಟ್ಟಿದೆ. ಆದರೆ ಶ್ರೀ ಅವರು ಇಲ್ಲಿ ತೆರೆದಿರುವುದು ಬುದ್ಧಿಯ ಕಣ್ಣನ್ನಲ್ಲ, ಹೃದಯದ ಕಣ್ಣನ್ನು, 'ಧನುಷ್ಕೋಟಿ' ಕವನ ರಚನೆಯಲ್ಲಿ ಶ್ರೀ

ಅವರ ಹೃದಯ ವ್ಯಾಪಾರ ಪತಿ-ಪತ್ನಿಯರ ಲೌಕಿಕ ಪ್ರೇಮದ ಪರೆ ಕಳಚಿ ಪವಿತ್ರವಾದ ದಾಂಪತ್ಯ ಅನುಬಂಧದ ಪ್ರೀತಿಯ ಅರ್ಥದ ಮಹತ್ವವನ್ನು ಪಡೆದು ಅನುಭವ ಕರುಣಾರಸದ ರೂಪದಲ್ಲಿ ಅಭಿವ್ಯಕ್ತಿಯಾಗಿದೆ. ಪ್ರಾಪಂಚಿಕ ಜೀವನದಲ್ಲಿ ಶ್ರೀ ಅವರು ಬರೀ ದುಃಖವನ್ನೇ ಉಂಡರು. ಆದರೆ ಅದರಿಂದ ಮನಸ್ಸನ್ನು ಕಹಿ ಮಾಡಿಕೊಳ್ಳಲಿಲ್ಲ. ಕಷ್ಟ, ಸುಖ, ದುಃಖ, ತಮ್ಮ ಮೇಲೆ ಅಡರಿ ಬಂದಾಗ ಬಹುಶಃ ಅವರು ತಮ್ಮ ಪ್ರೀತಿಯ ಕವಿಪುಂಗವ ಷೆಲ್ಲಿಯ 'promethens unbound' ಮಹಾಕಾವ್ಯದಲ್ಲಿ ಬರುವ Ro suffer wies....victory ಸಾಲುಗಳನ್ನು ತಮ್ಮೆದುರು ಇಟ್ಟುಕೊಂಡಿದ್ದರೇನೋ ಎನಿಸುತ್ತದೆ.[೩] ಅಷ್ಟೇ ಅಲ್ಲ, ದುರಂತ ನಾಟಕಗಳ ರಚನೆಯಲ್ಲಿ, ವಿಮರ್ಶೆಯಲ್ಲಿ ಬಿ.ಎಂ.ಶ್ರೀ. ಅವರದು ಎತ್ತಿದ ಕೈ. ಬಹುಶಃ ಇದಕ್ಕೆ ಅವರ ಜೀವನದಲ್ಲಿ ಸಂಭವಿಸಿದ ದುರಂತ ಘಟನೆಗಳೇ ಪ್ರೇರಣೆ ನೀಡಿರಬಹುದು[೪] ಎನ್ನುವ ಮಾತಿನಿಂದಲೂ 'ಧನುಷ್ಕೋಟಿ' ಕವನದ ರಚನೆಗೆ ಶ್ರೀಯವರ ಬದುಕೇ ಹೇಗೆ ಕಾರಣವಾಯಿತೆಂದು ತಿಳಿಯುತ್ತದೆ.

ದುಃಖ ಆತಂಕಗಳ ಕಟ್ಟಿಕೊಂಡೇ ಹುಟ್ಟಿ
ಬಂದ ಮಕ್ಕಳು ನಮಗೆ, ಇದ್ದೊಬ್ಬ ಮಗ
ಕುರುಡಾದಾಗ ಧಾರಣಕ್ಕಾಗಿ ಕೈಯೆತ್ತಿ
ಬೇಡಿದೆವು-ನಮ್ರತೆಯ ಕಲಿತೆವಾಗ

ದುಃಖ ಆತಂಕಗಳನ್ನು ಕಟ್ಟಿಕೊಂಡು ಹುಟ್ಟಿದ ಮಕ್ಕಳು. ಒಬ್ಬೇ ಒಬ್ಬ ಮಗಾ ಇದ್ದ. ಅವನೂ ಕುರುಡಾದ. ಅವನ ಕುರುಡು ನಿವಾರಣೆಗಾಗಿ ಬೇಕಾದಷ್ಟು ದೇವರುಗಳನ್ನು ಬೇಡಿಕೊಂಡರು, ದೈನ್ಯತೆಯಿಂದ, ವಿನಯದಿಂದ, ನಮ್ರತೆಯಿಂದ; ಆದರೂ ಆ ದೇವರಿಗೆ ಕರುಣೆ ಬರಲಿಲ್ಲ. ಮಗಳು ವಿಧವೆಯಾಗಿ, ತಂದೆಯ ಬಳಿಯೇ ಆಸರೆ ಪಡೆದು ನಿಂತಳು. ಜೀವ ದುಃಖದ ಧ್ವಜವಾಗಿ, ಯಾರ ಮುಖ ನೋಡಿ ಈ ತಂದೆ ಮಗಳ ದುಃಖ ಮರೆಯಬೇಕು? ಕೈ ಹಿಡಿದ ಪತ್ನಿ ಇದಕ್ಕೂ ಎಷ್ಟೋ ವರ್ಷ ಮುಂಚೆಯೇ ನಾಲ್ಕನೆಯ ಹೆರಿಗೆಯಲ್ಲಿ ಹುಟ್ಟಿದ ಗಂಡು ಮಗುವನ್ನು ಕಟ್ಟಿಕೊಂಡೇ ಇಹಲೋಕವನ್ನು ಬಿಟ್ಟು ಹೋಗಿದ್ದರು. ಆಗ ಶ್ರೀಯವರಿಗೆ ಮೂವತ್ತು ವರ್ಷಗಳೇನಾದರೂ ಇದ್ದಿರಬೇಕು. ಪತ್ನಿ ವಿಯೋಗಕ್ಕೆ ಮೊದಲು ಪತಿ-ಪತ್ನಿಯರಿಬ್ಬರೂ ತಮ್ಮ ಕಣ್ಣ ಮುಂದೆಯೇ ಮಗ ತನ್ನ ಕಣ್ಣು ಕಳೆದುಕೊಂಡು ಕುರುಡನಾಗಿ ಕೊನೆಯವರೆಗೂ ಕತ್ತಲೆಯಲ್ಲೇ ಬದುಕಿ ಬಾಳಬೇಕಾದುದನ್ನು ದಿನ ನಿತ್ಯ ನೋಡುವ ಪ್ರಸಂಗ....ತಂದೆಯಾದ ಶ್ರೀಯವರು ತಮ್ಮ ವಂಶದ ಬೆಳಕು ಎಂದು ಬಗೆದ ಮಗನ ಜೀವನ ದುರಂತವಾಗಿದ್ದುದನ್ನು ನೋಡುವ ಪ್ರಸಂಗ ಎಂದರೆ ಯಾವ ಒಂದು ಅವರ್ಣನೀಯ. ಅವ್ಯಕ್ತ ನೋವನ್ನು ಮೂಕತನದಿಂದ ಅವರು ಅನುಭವಿಸುತ್ತಿರಬೇಕು? ಪತಿ-ಪತ್ನಿಯರಿಬ್ಬರೂ ಅನ್ಯೋನ್ಯ ಆಸರೆಯಲ್ಲಿ ತಮ್ಮ ಕಣ್ಣೀರು ಕರೆಯುತ್ತಿರಬೇಕು....ಇಂತಹ ಒಬ್ಬ ಮಹಾವ್ಯಕ್ತಿಯ ಜೀವನ ಮುಳ್ಳಿನ ಹಾಸಿಗೆಯಾಗಬೇಕೆಂದರೆ? ಜಿ. ಶಂಕರಯ್ಯ ಎಂಬ ಮಿತ್ರರು ಬರೆಯುತ್ತಾರೆ. 'ಯಾವ ಪತ್ನಿಯ ಪ್ರೀತಿಯ ಆಸರೆಯಲ್ಲಿ ತಮ್ಮ ಬಾಳಿನ ಆದರ್ಶ ಆಕಾಂಕ್ಷೆಗಳನ್ನು ರೂಪಿಸಿಕೊಂಡರೋ. ಯಾರ ಸಹವಾಸದಲ್ಲಿ ತಮ್ಮ ಬಾಳಿನ ಹೊಂಗನಸುಗಳನ್ನು

ಕಾಣಬಯಸಿದ್ದರೋ, ಆಕೆಯೇ ಇಲ್ಲವೆನಿಸಿದಾಗ, ಅವರ ಸುಖದ, ಸಂತೋಷದ, ಕನಸುಗಳ ಗೋಪುರವೇ ಕಳಚಿ ಬುಡಮೇಲಾಗಿ ಬಿತ್ತು. ಚಿಕ್ಕ ಪುಟ್ಟ ಮೂವರು ಮಕ್ಕಳ ಲಾಲನೆ, ಪಾಲನೆ ಅಷ್ಟೇನೂ ಆರೋಗ್ಯವಂತಳಲ್ಲದ ತಾಯಿಯ ಸೇವೆ, ಕುರುಡನಾದ ಮಗನ ಭವಿಷ್ಯದ ಚಿಂತೆ, ಇವರ ಚೈತನ್ಯದ ಕುಡಿಯನ್ನು ಚಿವುಟಿದವು, ತಮ್ಮ ಆಕಾಂಕ್ಷೆ ಆದರ್ಶಗಳ ಸಂಬಂಧವಾದ ಸಹಜ ಅಧೀರತೆಯ ಜತೆಗೆ ಈ ಸಿಡಿಲೇಟುಗಳೂ ಬಡಿದು ಅವರು ಸ್ತಂಭೀಭೂತರಾದರು' (ಬಿ.ಎಂ.ಶ್ರೀ. ಅವರ ಬದುಕು-ಬರೆಹ ಪು. ೧೩೧)[೫]. ಶ್ರೀ ಅವರಿಗೆ ಪತ್ನಿ ಸಾಯುವುದಿರಲಿ, ಆ ಸಾವಿನ ಮಾತಿನ ಬಗ್ಗೆಯೂ ಅವರಿಗೆ ನಂಬಿಕೆ ಇರಲಿಲ್ಲ. ಅವರು ತಮ್ಮ ಹೃದಯದಲ್ಲಿ ತಮ್ಮ ಪತ್ನಿಯನ್ನು ಅಷ್ಟು ಭದ್ರವಾಗಿ ಇಟ್ಟುಕೊಂಡಿದ್ದಾರೆ. ಲೋಕದೃಷ್ಟಿಯಲ್ಲಿ ಆಕೆ ಇಲ್ಲದಿರಬಹುದು. ಆದರೆ ಅವರಿಬ್ಬರ ಮದುವೆ ಆಗಿರುವುದು ಕೇವಲ ದೇಹಗಳಿಗಲ್ಲ. ಆತ್ಮಗಳಿಗೆ! ಇಂತಹ ಬಿಗಿ ಬಂಧನವನ್ನು ಒಡೆಯಲು ಸಾವಿಗೆಡೆಯೆಲ್ಲಿ ?

ಸಾವಿಲ್ಲದಂಥವಳು ಸತ್ತ ಮಾತಾಡದಿರು
ಅವಳಿದ್ದಾಳೆ ಇಲ್ಲಿ, ಹೃದಯದಲ್ಲಿ.
ನಮ್ಮಿಬ್ಬರಾತ್ಮಗಳ ಮದುವೆ ನೆರವೇರಿಸಿಲು
ಮನೆಯೊಡೆಯುವಂಥ ಸಾವಿಗೆಡೆಯೆಲ್ಲಿ?

ಶ್ರೀ ಅವರಿಗೆ ಪತ್ನಿಯ ಅಗಲಿಕೆಯಿಂದ ಉಂಟಾದ ಮನೋವೇದನೆಯೇ ಕಾವ್ಯದ ವಸ್ತುವಾಗಿ 'ಧನುಷ್ಕೋಟಿ' ಕವನದಲ್ಲಿ ಹೊಸ ಹೊಸ ಭಾವಗಳನ್ನು ಕಾಣುವಲ್ಲಿ ಕವಿಪ್ರತಿಭೆ ಯಶಸ್ವಿಯಾಗಿದೆ. 'ಪ್ರಜ್ಞಾ ನವನವೋಲ್ಲೇಖ ಶಾಲಿನೀ ಪ್ರತಿಭಾಮತ ತದನು ಪ್ರಾಣಾನಾ ಜೇವದ್ವರ್ಣನಾ ನಿಪುಣಃ ಕವಿಃ" ಎನ್ನುವ ಅಭಿಪ್ರಾಯವಿಲ್ಲಿ ನಿಜವಾಗಿದೆ. ರುದ್ರಟನು ಹೇಳುವ ಹಾಗೆ 'ಸಮೂಹಿತವಾದ ಮನಸ್ಸಿನಲ್ಲಿ ಅನೇಕ ಪ್ರಕಾರವಾಗಿ ಅರ್ಥವೂ, ಅದನ್ನು ತಿಳಿಸಲು ಕ್ಲಿಷ್ಟವಲ್ಲದ ಪದಗಳೂ ಯಾವುದರಿಂದ ಹೊಳೆಯುವುವೋ ಅದೇ ಶಕ್ತಿ. ಇದನ್ನೇ ಪ್ರತಿಭೆಯೆಂದೂ" ಕರೆದಿದ್ದಾರೆ. ಆ ಪ್ರತಿಭೆಯೇ ಇಲ್ಲಿ ಶ್ರೀ ಅವರ ಧೀ ಶಕ್ತಿಯಾಗಿ ಹೊರಹೊಮ್ಮಿದೆ.

ಪತ್ನಿಯ ವಿಯೋಗದ ದುಃಖ ಶ್ರೀ ಅವರ ಹೃದಯದ ಕಣ್ಣಿಗಷ್ಟೇ ಗೋಚರ. ಕವಿ ಹೃದಯಕ್ಕೆ ಅಪೂರ್ವ ವಿಚಿತ್ರ ಜಗತ್ತು ಉದ್ಬೋಧನೆಗೊಂಡಾಗ ನಿರ್ಮಾಣ ಶಕ್ತಿಯೂ ಅಷ್ಟೇ ವಿಶಿಷ್ಟವಾಗಿ ಪ್ರಾಪ್ತವಾಗುತ್ತದೆ. ಇಂತಹ ಹೃದಯವಿದ್ರಾವಕ ಕವಿತೆಯನ್ನು ಬರೆಯಲು 'ಶಕ್ತಿಯುಳ್ಳವನಿಗೇ ಪ್ರತಿಭಾ-ವ್ಯುತ್ಪತ್ತಿಗಳೆರಡೂ ಒದಗುವುವು' ಎಂದು ಹೇಳಿರುವ ರಾಜಶೇಖರನ ನುಡಿ 'ಧನುಷ್ಕೋಟಿ' ಕವನದಲ್ಲಿ ಮೂರ್ತರೂಪ ಪಡೆದಿದೆ. ಇಲ್ಲಿ ಶ್ರೀ ಅವರ ಹೃದಯ ವ್ಯಾಪಾರ 'ಪ್ರತಿಭೆ'ಯು imagination ರೂಪದಲ್ಲಿ ಪ್ರತಿಸ್ಪಂದಿಸಿದೆ. ಶ್ರೀಯವರಲ್ಲಿ ನಾಡಿನ ದೊಡ್ಡ ಆದರ್ಶಗಳನ್ನು ನೆನೆದು ಸ್ವಂತದ ದುಃಖವನ್ನು ಮರೆಯುವ ಯೋಗಶಕ್ತಿ ಇದ್ದಿತೆಂದೇ ಹೇಳಬೇಕು.....ಮುನಿದ ದೈವ ಮನುಷ್ಯನನ್ನು ಹುಳದಂತೆ ಹೊಸಕಿ ಹಾಕಿ ಬಿಡುತ್ತದೆ, ಮಕ್ಕಳು ಆಟವಾಡುತ್ತ ಹುಳುಗಳನ್ನು ಕೊಲ್ಲುವಂತೆ. ಗ್ರೀಕ್

ಟ್ರ್ಯಾಜಡಿಯನ್ನು ಕನ್ನಡಕ್ಕೆ ತಂದ ಶ್ರೀಯವರ ಬದುಕೆ ಒಂದು ಗ್ರೀಕ್ ರುದ್ರನಾಟಕ– ಮಗನ ಕರುಡು, ಕೈ ಹಿಡಿದ ಹೆಂಡತಿ ಬಾಣಂತಿಯಾಗಿ ಮಗುವಿನೊಂದಿಗೇ ಮರಣಾಧೀನವಾದುದು, ಮುದಿತಾಯಿ ಕಣ್ಮರೆ, ಅಳಿಯ ಅಳಿದು ಮಗಳು ವಿಧವೆಯಾಗಿ ತಾಯಿಯಿಲ್ಲದ ತವರು ಸೇರಿದರು. ಕೊನೆಗೆ ಶ್ರೀಯವರೇ ರುದ್ರನಾಯಕರಾಗಿ ಧಾರವಾಡಕ್ಕೆ ಬಂದು, ಅನಾಥ ಪ್ರಜ್ಞೆಯಲ್ಲಿ ನಿಂತು, ಅಸಹಾಯ ದೆಸೆಯನ್ನು ಅನುಭೋಗಿಸಿ ಧಾರವಾಡದ ರುದ್ರಭೂಮಿಯನ್ನು ಸೇರಿಹೋದರು. ಇದು ಶ್ರೀಯವರು ಬಾಳಿನಲ್ಲಿ ಕಂಡ ಗ್ರೀಕ್ ಟ್ರ್ಯಾಜಡಿ.[೬] ಶ್ರೀ ಅವರು ಮೈಸೂರಿನವರಾದರೂ ಅವರ ಜೀವನ ಮೈಸೂರು ಮಲ್ಲಿಗೆಯ ಹಾಸಿಗೆಯಾಗದೆ ಮುಳ್ಳಿನ ಹಾಸಿಗೆ ಆದದ್ದು ಕನ್ನಡಿಗರ ದುರ್ದೈವ. ಕವಿಯ ದೃಷ್ಟಿ ಪ್ರೇಮಮಯ. ರಮಣೀಯ ರಸಾಸ್ವಾದ, ಆನಂದದಾಯಕ ಎನ್ನುವುದನ್ನು ಅನುಭವದ ವ್ಯಾಪ್ತಿಯಲ್ಲಿ ಮೂಡಿಬಂದ ಅಲಂಕಾರಗಳಿಂದ ಕೂಡಿದ ಕರುಣರಸದಲ್ಲಿ ಮೂಡಿಬಂದ 'ಧನುಷ್ಕೋಟಿ' ಕಾವ್ಯ ಶ್ರೀ ಅವರ ಮನದಾಳದ ದುಃಖವನ್ನು ಪರಿಣಾಮಕಾರಿಯಾಗಿ ಧ್ವನಿಸುತ್ತದೆ.

ಶ್ರೀ ಅವರು 'ಧನುಷ್ಕೋಟಿ' ಕವನವನ್ನು ಇಂಗ್ಲಿಷ್‌ನಲ್ಲಿ ರಚಿಸಲಿಕ್ಕೂ ಕಾರಣವಿದೆ. ಅದನ್ನವರು ಹೊರ ಜಗತ್ತಿನಿಂದ ಮುಚ್ಚಿಡಲಿಕ್ಕೂ ಕಾರಣವಿದೆ. ಶ್ರೀ ಅವರು ಇಂಗ್ಲಿಷ್ ಗೀತೆಗಳನ್ನು ಕನ್ನಡಿಸಿದರು. ಆಂಗ್ಲಭಾಷೆಯ ಮೇಲೆ ಅವರಿಗೆ ಅಪಾರ ಪ್ರಭಾವವಿದ್ದಿತು. ವರ್ಡ್ಸ್‌ವರ್ಥ್, ಷೇಕ್ಸ್‌ಪಿಯರ್ ಮುಂತಾದ ಕವಿಗಳನ್ನು ಕುರಿತು ಅವರ ಆಂಗ್ಲಭಾಷೆಯ ಭಾಷಣಗಳು ದೇಶ ವಿದೇಶಿಯರ ಮೆಚ್ಚುಗೆ ಪಡೆದಿದ್ದವು. ಆಂಗ್ಲ ಸಾಹಿತ್ಯದ ಅಣಿಮುತ್ತುಗಳನ್ನು ಆಯ್ದು ಕನ್ನಡದ ಜಾಯಮಾನಕ್ಕೆ ಹೊಂದುವಂತಹ ಲಯದಲ್ಲಿ ಹಾಡಿದರು. ಶ್ರೀ ಅವರು ಇಂಗ್ಲಿಷ್ ಸಾಹಿತ್ಯವನ್ನು ಓದಿದರು, ಅರಿತರು, ಅರೆ ಕುಡಿದರು, ಆಮೇಲೆ ಒಬ್ಬ ಕಾರಣಪುರುಷರಾಗಿ ಕನ್ನಡಕ್ಕೆ ಒಂದು ಹೊಸ ಜೀವ ಕಳೆಯನ್ನು ತಂದುಕೊಟ್ಟರು. ಅವಳ ಉಡುಗೆ ಇವಳಿಗಿಟ್ಟರು.[೭] ಶ್ರೀ ಅವರು ಕನ್ನಡ ಗ್ರಂಥಗಳನ್ನೂ ಅಧ್ಯಯನ ಮಾಡಿದ್ದರು. ಶಾಸನ ಸಾಹಿತ್ಯವನ್ನು ಬಲ್ಲವರಾಗಿದ್ದರು. ನಾನಾ ಭಾಷೆಗಳ ರೂಢಿಯಾಗಿತ್ತು. ಶ್ರೀ ಅವರು ಮಹಾರಾಜಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಆಂಗ್ಲರಿಗೆ ಸರಿ ಸಮವಾಗಿ ಪಾಠ ಹೇಳಿ 'ಸೈ' ಯೆನಿಸಿಕೊಳ್ಳಬೇಕೆಂಬ ಹಟ. ಇಂಗ್ಲೀಷ್ ಪಾಠ ಹೇಳಲು ಆಂಗ್ಲರೇ ಆಗಬೇಕೆಂದೂ ಆ ಆಯ್ಕೆಗೆ ಭಾರತೀಯರು ಅನರ್ಹರೆಂದೂ ಕಡೆಯ ಪಕ್ಷ ಇಂಗ್ಲೆಂಡಿಗೆ ಹೋಗಿ ಅಲ್ಲಿ ಶಿಕ್ಷಣ ಪಡೆದು ಬಂದವರಾದರೂ ಆಗಬೇಕೆಂದು ಜನ ವಾದಿಸುತ್ತಿದ್ದ ಕಾಲದಲ್ಲಿ[೮] ಶ್ರೀ ಅವರು ಇಂಗ್ಲಿಷ್ ಕಲಿತು ಇಂಗ್ಲೀಷರಷ್ಟೇ ಸಮರ್ಥರಾಗಿ ಪಾಂಡಿತ್ಯ ಪೂರ್ಣರಾಗಿ ವಿದ್ಯಾರ್ಥಿಗಳಿಗೆ ಪಾಠ ಮಾಡುವವರಾಗಿದ್ದರು.

ಹೆಡೆಯಾಡದಂತೆ ದೈವದ ಸೇಡು ಎಲೆಮರೆಯ
ಕಾಯಾಗಿ ಬದುಕಿದ್ದೆವು
ಆದರೂ ದೈವದೆದೆಯಲ್ಲಿ ಸತ್ತಂತೆ ದಯ–
ಬಂದೊಕ್ಕರಿಸಿತು ಸಾವು.

ಶ್ರೀ ಅವರು ಸ್ವಂತ ಬಾಳಿನಲ್ಲಿ ತಿಂದ ಸಾವು ನೋವುಗಳ ಪೆಟ್ಟುಗಳನ್ನು ಮರೆಯಲೆಂದು, ಕನ್ನಡ ತಲೆಯೆತ್ತುವ ಬಗೆಯೆಂದು ಅಶ್ವತ್ಥಾಮನನ್ನು ಗ್ರೀಕ್ ನಾಯಕನನ್ನಾಗಿ ಮಾಡಿ ಕನ್ನಡಕ್ಕೆ ನೀಡಿದರೆ, ಅವರ ಜೋಳಿಗೆಯಲ್ಲಿ ಬಿದ್ದದ್ದು ಕಲ್ಲುಗಳು, ಸೇತುವೆ ಕಟ್ಟುವ ಹಗ್ಗ ಹಾವಾಗಿತ್ತು. ಸೃಜನಶೀಲ ಕಲ್ಪನೆಯ ಶಿಲ್ಪಕ್ಕೆ ಘಜನಿ ಮಹಮದನ ಕೊಡಲಿಯ ಪೆಟ್ಟು.[9] ಇದು ಕನ್ನಡಿಗರು ಅವರ ಸಾಧನೆಗೆ ಕೊಟ್ಟ ಬಹುಮಾನ.

ಪಾಠ ಪ್ರವಚನ, ಕಾವ್ಯದಧಿದೇವತೆಯ ಪ್ರೀತಿ
ಸಿಹಿ ಕನ್ನಡ ಒಂದೆರಡು ಕವನ
ಅಷ್ಟು ಮಾಡಿ ಕೃತಾರ್ಥನಾದವನ ನೀತಿ
ನನದಿನ್ನು–ಅದೇ ನಾ ಕೊಡುವ ವಚನ

ಮಮತೆಯ ಮಡದಿ ದೇವಮ್ಮನವರ ಅನಿರೀಕ್ಷಿತ ಸಾವಿನಿಂದ ಶ್ರೀ ಅವರ ಜೀವನ ಚಂಡಮಾರುತವೆದ್ದ ಕಡಲಿನಂತಾಗಿ ಹೋಗಿದೆ. ಕೆಲವು ಸಮಯ ಭಾವಾವೇಶಕ್ಕೊಳಗಾಗಿ ಶೂನ್ಯ ಮನಸ್ಕರಾಗುತ್ತಾರೆ. ಅವರಿಗೆ ಈ ಜಗತ್ತಿನಲ್ಲಿ ಏನೂ ಬೇಡವಾಗುತ್ತದೆ. ಆದರೆ ಕನ್ನಡವನ್ನು ಮಾತ್ರ ಆ ಗಳಿಗೆಯಲ್ಲೂ ಅವರು ಮರೆಯುವುದಿಲ್ಲ. ಎಂತಹ ವಿಷಮ ಪರಿಸ್ಥಿತಿಯಲ್ಲೂ ಅವರು ಕನ್ನಡಕ್ಕಾಗಿ ಟೊಂಕಕಟ್ಟಿ ನಿಲ್ಲುತ್ತಾರೆ. ಪಾಠ ಪ್ರವಚನಗಳನ್ನು ತೊರೆಯಲಾರರು. ಕಾವ್ಯದ ಅಧಿದೇವತೆ ಸರಸ್ವತಿಯ ಪ್ರೀತಿಯಿಂದ ದೂರವಾಗಲಾರರು, ಸವಿ ಕನ್ನಡದಲ್ಲಿ ಕವನ ಬರೆಯುವುದನ್ನು ನಿಲ್ಲಿಸಲಾರರು. ಅಷ್ಟು ಮಾಡಿದರೆ ಸಾಕು ತಾನು ಕೃತಾರ್ಥ ಎಂದು ನಂಬಿದವರು ಶ್ರೀ. ಅಷ್ಟು ಹೇಳಿ ಅವರು ಸುಮ್ಮನಾಗುವುದಿಲ್ಲ. ಇದೇ ಇನ್ನು ನನ್ನ ಮುಂದಿನ ನೀತಿ ಎಂದು ವಚನ ಕೊಡುತ್ತಾರೆ. ಇದು ಅವರ ಭೀಷ್ಮ ಪ್ರತಿಜ್ಞೆ. ದುಃಖದ ಸಂದರ್ಭದಲ್ಲಿ ಯಾರಾದರೂ ತಮ್ಮ ತನವನ್ನು ಮರೆತು ಅನ್ಯ ಕಾರ್ಯಗಳಿಗೆ ಕೈ ಹಾಕುವುದುಂಟೇ ? ಆದರೆ ಶ್ರೀ ಅವರು ಒಬ್ಬ ನಿಜವಾದ ಸಾಹಿತಿ. ಒಬ್ಬ ಸಾಹಿತಿಯ ಸಾಹಿತ್ಯ ದೃಷ್ಟಿಯೇನು ? ಎಂದು ಆಲೋಚಿಸಿದಾಗ ಆ ಸಾಹಿತಿಯ ಬದುಕಿನ ಪರಿಸರವನ್ನು ಗಮನಿಸುವುದು ಅನಿವಾರ್ಯ ? ಅವನ ಸಾಹಿತ್ಯದ ಮುನ್ನಡೆಗೆ ಅವನಿಗಿರುವ ಹಿನ್ನೆಲೆಯೇ ತಳಹದಿ! 'ಬದುಕಿನಂತೆ ಬರೆಹ', ಕಾಲಕಾಲಕ್ಕೆ ಬದುಕಿನಲ್ಲಾಗುವ ಬದಲಾವಣೆಗಳು ಒಂದಲ್ಲೊಂದು ರೂಪದಲ್ಲಿ ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತದೆ.[೧೦] ಇಂತಹ ಸಮಯದಲ್ಲಿ ಶ್ರೀ ಅವರು ತಮ್ಮ ದುಃಖ ಮರೆಯಲಿಕ್ಕಾಗಿ ಧನುಷ್ಕೋಟಿಗೆ ಬರುತ್ತಾರೆ. ಅಲ್ಲಿಯ ಕಡಲಂಚಿನ ಹೊಯ್ಗೆಯ ಮೇಲೆ ಕಾಲದ ಪರಿವೆಯೇ ಇಲ್ಲದೆ ಶತಪಥ ಹಾಕುತ್ತಾರೆ. 'ಶೋಕಃ ಶ್ಲೋಕತ್ವಮಾಗತಃ' ಆಗಿ ಕವಿತೆ ಹೃದಯದ ಅಗ್ನಿಪರ್ವತ ಸಿಡಿದು ಲಾವಾರಸವಾಗಿ ಹರಿದು ಬರುತ್ತದೆ. 'ಧನುಷ್ಕೋಟಿ' ಶ್ರೀ ಅವರು ತಮ್ಮ ಬದುಕಿಗೆ ಬರೆದ ಭಾಷ್ಯ, ಕಾವ್ಯದ ರೂಪದಲ್ಲಿ ಹೊರಹೊಮ್ಮಿದೆ. ಇದನ್ನವರು ಇಂಗ್ಲಿಷ್‌ನಲ್ಲಿ ಬರೆಯುತ್ತಾರೆ.

ವ್ಯಕ್ತಿಯ ಸಾಹಿತ್ಯ ದೃಷ್ಟಿ ಕಾಲಮಾನವನ್ನು ಮೀರಿ ಒಂದು ಹೆಜ್ಜೆ ಮುನ್ನುಡೆಯುಳ್ಳದ್ದಾಗಿರಲೂ ಸಾಧ್ಯವಿದೆ. ಅದು ಅವನ ಮಾನಸಿಕ ಶಕ್ತಿ, ಬುದ್ಧಿ ಬಲ,

ಮುನ್ನೋಟದ ಕನಸುಗಾರಿಕೆಗಳನ್ನು ಅವಲಂಬಿಸಿರುತ್ತದೆ. ಅನುಭವ ವೈಶಾಲ್ಯವೂ ಜೊತೆಗೂಡಿದ್ದರೆ ಹೆಚ್ಚು ಸೊಗಸು, ಜನಜೀವನದ ಪಡಿ ನೆಳಲು ಸಾಹಿತ್ಯವಲ್ಲವೇ ?[೧೧]

ನಿಷ್ಪಾಪಿಯಾಗಿ ಬದುಕುವ ಅಥವ ತಪ್ಪೆಸಗಿ
ನಾಚದೆ ಇರುವ ಭ್ರಮೆಯಿಲ್ಲ ನನಗೆ
ಹಾಡು ಪ್ರೀತಿ ಬದುಕುಗಳ ಬೆಳಕೇ ಕ್ಷಮೆಯಾಗಿ
ನೀನಿರುವ ತನಕ ಭಯವೇಕೆ ಎದೆಗೆ ?

ಎಂದಾದರೂ ಒಂದು ದಿನ ನನ್ನ ಹೆಸರೆತ್ತಿ
ಯಾರು ಯಾರೋ ಹಾಡಿ ಹರಸಿದಾಗ,
ನಿನ್ನ ಉಜ್ವಲ ಜ್ವಾಲೆ ಮುಟ್ಟಿ ಚೇತನ ಹೊತ್ತಿ
ನನ್ನಾತ್ಮ ಬೆಳಕಾದ ಯೋಗ, ಭಾಗ್ಯ.

ಶ್ರೀ ಅವರು ಮಾಡಿದ ಭೀಷ್ಮ ಪ್ರತಿಜ್ಞೆಯಂತೆಯೇ ಕನ್ನಡನುಡಿ ಸಾಮ್ರಾಜ್ಯದ ನಾಯಕರಾಗಿ ಎರಡು ದಶಕಗಳ ಕಾಲ ರಾಜ್ಯವಾಳಿದರು. ಮಿಲ್ಟನ್ ಮಹಾಕವಿ ಹೇಳುವಂತೆ 'ಉತ್ತಮ ಕಾವ್ಯವು ಶ್ರೇಷ್ಠವಾದ ಆತ್ಮದ ಅಮೂಲ್ಯ ಜೀವಸಾರ'ದಂತೆ ಶ್ರೀ ಅವರು ಸೃಷ್ಟಿಸಿದ ಸಾಹಿತ್ಯವೂ ನನ್ನಾತ್ಮ ಬೆಳಕಾದ ಯೋಗ, ಭಾಗ್ಯವಾಗಿ ಶಾಶ್ವತವಾಗಿ ನಿಂತು ಬಿಟ್ಟಿದೆ ಎನ್ನುವ ತಮ್ಮ ಶಕ್ತಿಯನ್ನೆಲ್ಲ ಕನ್ನಡಕ್ಕೆ ಮೀಸಲಾಗಿಸಿ ಕನ್ನಡದ ಮನೆ ಒಂದು, ಅದರ ಕ್ಷೇತ್ರ ಅವಿಭಕ್ತವಾದ ಒಂದು ಪ್ರಪಂಚ. ಅದರ ಪ್ರಾಂತ ಒಂದು ಸಹಜವಾದ ಪ್ರಭಾವ ಮಂಡಲ, ಅದರ ಕಾರ್ಯ ಒಂದು ದೀಕ್ಷೆ, ಒಂದು ಪರಮ ಕರ್ತವ್ಯ, ಒಂದು ಪುಣ್ಯ ಎಂಬಂತೆ ಕಡೆಯವರೆಗೂ ಕೆಲಸ ಮಾಡಿದರು' ಎಂದು ವಿ.ಸೀ. ಹೇಳಿರುವ ಮಾತು ಶ್ರೀ ಅವರ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ. ಶ್ರೀ ಅವರ ವೈಯಕ್ತಿಕ ಜೀವನವೂ ಒಂದು ರೀತಿಯ ರುದ್ರನಾಟಕವೇ ಆಗಿತ್ತು ಎಂಬುದನ್ನು ಇಲ್ಲಿ ಮರೆಯುವಂತಿಲ್ಲ.[೧೨] ಶ್ರೀ ಅವರ ಸಾಂಸಾರಿಕ ಜೀವನದಲ್ಲೆದ್ದ ಬಿರುಗಾಳಿಗೂ ಅಳಕದೆ ಅವರು ಕನ್ನಡ ತಾಯಿಯ ಸೇವೆಗೆ ನಿಂತಿದ್ದು ಸಾಮಾನ್ಯ ವಿಷಯವಲ್ಲ.

ಶ್ರೀ ಅವರು ೧೯೨೬ರಲ್ಲಿ ಬರೆದ 'ಗದಾಯುದ್ಧ' ನಾಟಕಂ, ೧೯೨೯ರಲ್ಲಿ ಬರೆದ 'ಅಶ್ವತ್ಥಾಮನ್' ಹಾಗೂ ೧೯೩೫ರಲ್ಲಿ ಬರೆದ 'ಪಾರಸಿಕರು' ಎಲ್ಲವೂ ರುದ್ರನಾಟಕಗಳೇ. ದುರಂತ ಪಾತ್ರ ದುರಂತ ವಸ್ತು ಹಾಗೂ ನಾಟಕಗಳ ದುರಂತ ವಿನ್ಯಾಸಕ್ಕೆ ಶ್ರೀಯವರ ದಾಂಪತ್ಯ ಜೀವನದ ದುರಂತ, ಅಂದಿನ ಅವರ ಮಾನಸಿಕ ವೈಪರೀತ್ಯಗಳೆಲ್ಲ ಅವರಲ್ಲಿ ಮಡುಗಟ್ಟಿದ್ದು ಈ ಮೂರೂ ನಾಟಕಗಳಲ್ಲಿ ಪರೋಕ್ಷವಾಗಿ ಪ್ರತಿಫಲಿಸಿರುವುದನ್ನು ಕಾಣಬಹುದು. ಚಿಂತೆಯಿಂದ ಹೊರಟ ಚಂದನದ ಪರಿಮಳ ಶ್ರೀಯವರ ಕೀರ್ತಿಯನ್ನು ಹರಡುವಂತಿತ್ತು.[೧೩] ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಆಯಕ್ಕೆ ಮಿಡಿಯಬಲ್ಲದು. ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು ಎಂದಿರುವ ಶ್ರೀಮತಿ ಎಚ್. ಕಲ್ಪನ ಅವರ ಮಾತು 'ಧನುಷ್ಕೋಟಿ' ಕವನದಲ್ಲಿ ಗರ್ಭೀಕರಿಸಿರುವುದೇ ಸಾಕ್ಷಿ. ಗೋಪಾಲಕೃಷ್ಣ ಅಡಿಗರು ಹೇಳುವ ಹಾಗೆ ಇಲ್ಲಿ ಶ್ರೀ

ಅವರ ಭಾವನೆ ಭಾಷೆಯ ಮಾಧ್ಯಮದಲ್ಲಿ ವ್ಯಕ್ತವಾಗಿ ಅದರ 'ಪ್ರತಿಮೆ' ನಮಗೆ 'ಧನುಷ್ಕೋಟಿ' ಕವಿತೆಯಲ್ಲಿ ಕಾಣಬರುತ್ತದೆ. ಅವರು ವ್ಯಾಸಂಗ ಮಾಡಿದ್ದ ಪಾಶ್ಚಿಮಾತ್ಯ ಗ್ರೀಕ್ ನಾಟಕಗಳ ಪ್ರಭಾವ, ಇವೆರಡರ ಜತೆಗೆ ಅವರ ಸ್ವಂತ ಜೀವನಾನುಭವವೂ ಸೇರಿಕೊಂಡಿದೆ. ಮನುಷ್ಯನ ಜೀವನದಲ್ಲಿ ದೈವ ಪ್ರಧಾನವೋ ? ಪುರುಷ ಪ್ರಯತ್ನ ಪ್ರಧಾನವೋ ? ಪುರುಷ ಪ್ರಯತ್ನ ಸ್ವಾಭಿಮಾನಗಳು ದೈವವನ್ನು ಎದುರು ಹಾಕಿಕೊಂಡು ನಿಲ್ಲಬಹುದೇ ? ಈ ವಿಚಾರಗಳೆಲ್ಲ ಶ್ರೀಯವರ ಕುಲುಮೆಯಲ್ಲಿ ಕುದಿಗೊಳ್ಳುತ್ತಿರಬಹುದು,[೪] ಅಷ್ಟೇ ಅಲ್ಲ ಇದರ ಪರಿಣಾಮವೇ 'ಧನುಷ್ಕೋಟಿ-೧೯೪೫' ಕವನ ರಚನೆಗೆ ಕಾರಣ. ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕವನಗಳನ್ನು ಅನುವಾದ ಮಾಡಿದ್ದ ಶ್ರೀ ಅವರು ಮಿಲ್ಟನ್, ಬೈರನ್, ವರ್ಡ್ಸ್‌ವರ್ತ್, ಷೆಲ್ಲಿ, ಬರ್ನ್ ಅವರ ಕವನಗಳಿಂದ ಪ್ರಭಾವಿತರಾಗಿದ್ದರು. ಶ್ರೀ ಅವರ ಶೋಕ ಸಾಗರ ಪ್ರತಿಮೆಯ ರೂಪದಲ್ಲಿ ಕಾವ್ಯದ ಭಾಷೆ ಪಡೆದಿದೆ. ಅಮೂರ್ತವಾದ ಶ್ರೀ ಅವರ ಭಾವನೆಗಳಿಗೆ ದುಃಖಕ್ಕೆ ಮೂರ್ತರೂಪ ಕೊಡುವುದೇ ಧನುಷ್ಕೋಟಿ ಕವನಾಭಿವ್ಯಕ್ತಿ. ಇಲ್ಲಿ ದುಃಖವನ್ನನುಭವಿಸಿದ ಸಂವೇದನಾ ವ್ಯಕ್ತಿಯೇ ಬೇರೆ. ಸೃಜನ ರೂಪ ಕೊಟ್ಟ ಶ್ರೀ ಅವರೇ ಬೇರೆ.

'ಧನುಷ್ಕೋಟಿ'-೧೯೧೫ ಕವನ ಬಿ.ಎಂ.ಶ್ರೀ ಅವರ ಬದುಕಿನ ದುರಂತವನ್ನು ಅನಾವರಣಗೊಳಿಸುವ ಕವನದಲ್ಲಿ–

"ಪಡುವಣದಲ್ಲಿ ಅಸ್ತಂಗತನಾಗುತ್ತಿರುವ ಸೂರ್ಯದೇವಾ, ಅವಿರತ ಅಲೆಗಳ ಏರಿಳಿತದಿಂದ ಕೂಡಿದ ಸಮುದ್ರರಾಜಾ, ನಿಮ್ಮ ಮೇಲೆ ಆಣೆ ಮಾಡಿ ಹೇಳುತ್ತೇನೆ. ನನ್ನ ಮಾತನ್ನು ಕೇಳಿ ನನ್ನ ಕೊನೆಯುಸಿರಿರುವರೆಗೂ ನನ್ನ ಪ್ರೀತಿಗೆ ಇವಳೊಬ್ಬಳೇ. ಮತ್ತೊಬ್ಬರಿಲ್ಲ. ಇದಕ್ಕೆ ನೀವೇ ಸಾಕ್ಷಿ.

ಓ ನನ್ನ ಬಾಳಿನ ದೇವತೆಯೇ ! ಇಷ್ಟು ದಿನ ನೀನು ನಿನ್ನ ತಲೆಯ ಮೇಲೆ ಹೊತ್ತುಕೊಂಡಿದ್ದ ಈ ಸಂಸಾರದ ಸಕಲ ಹೊರೆಯನ್ನೂ ಇನ್ನು ಮೇಲೆ ನನ್ನ ಹೆಗಲಿಗಿರಲಿ. ಇನ್ನು ಮೇಲೆ ಈ ಬದುಕು ಪೂಜೆಗೇ ಮುಡಿಪು. ಭೋಗಕ್ಕಲ್ಲ. ಹಾಗಾಗದಂತೆ 'ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ ಕೈ ಹಿಡಿದು ನಡೆಸೆನ್ನನು' ಎಂದು ಬೇಡಿಕೊಳ್ಳುತ್ತಾರೆ.

ನಿನ್ನ ಮಕ್ಕಳಿಗಷ್ಟೇ ಅಲ್ಲ, ತಾಯಿಯನ್ನು ಕಳಕೊಂಡ ನನ್ನ ತಮ್ಮಂದಿರಿಗೂ ನೀನೇ ತಾಯಿಯಾಗಿದ್ದೆ. ಮನೆ ತುಂಬ ತುಂಬಿರುವ ತಬ್ಬಲಿಗಳಿಗೆ ನಾನು ಆದಷ್ಟು ಕಷ್ಟಪಟ್ಟು ದುಡಿದು ಅವರನ್ನು ಸಾಕುತ್ತೇನೆ. ಈ ಬದುಕು ಅವರಿಗೇ ಮೀಸಲು.

ದಿರ್ವಿಧಿಯ ಕಣ್ಣಿಗೆ ಬೀಳದಂತೆ ಅದರ ಹೆಡೆಯಾಡುವ ಸೇಡಿನ ಕಣ್ಣಿಗೆ ಬೀಳದಂತೆ, ಎಲ್ಲೋ ಮೂಲೆಯಲ್ಲೊಂದು ಕಡೆ ಎಲೆಮರೆಯ ಕಾಯಿಯಂತೆ ಬದುಕಿದ್ದರೂ, ದಯೆ ಸತ್ತ ಆ ನಿಷ್ಕರುಣೆ ದುರ್ದೈವದೆದೆಯಲ್ಲಿ ಅಡಗಿದ್ದ ಸಾವು ಕಡೆಗೂ ಬಂದೊಕ್ಕರಿಸಿತು. ರಪರಪನೆ ತನ್ನ ಸಾವಿನ ಹೆಡೆಯನ್ನು ಅಪ್ಪಳಿಸಿಯೇ ಅಪ್ಪಳಿಸಿತು. ನಮ್ಮ ಸಂಸಾರವನ್ನು ದುಃಖದ ಮಡುವಿನಲ್ಲಿ ಕೆಡವಿಬಿಟ್ಟಿತು.

ಇಹ ಪ್ರಪಂಚವನ್ನು ತೊರೆದು ಹೋದ ಆ ನನ್ನ ಪತ್ನಿ ಹಿಡಿ ಬೂದಿಯಿಂದು. ಅವಳು ಸ್ವರ್ಗ ಸೇರಿದಳು. ನನ್ನ ಕೈಯಲ್ಲಿರುವ ಅವಳ ಪ್ರೇಮ ತುಂಬಿದ ಲೋಟ ಬರಿದಾದರೂ, ಅವಳ ಪ್ರೇಮ ಹೊಂಗನಸಾಗಿಯಾದರೂ ಇನ್ನೂ ನನ್ನಲ್ಲಿ ಉಳಿದಿದೆ.

ಗಾಯವಾಗಿದೆ. ಕ್ರಮೇಣ ತಾನಾಗಿಯೇ ಮಾಯತ್ತೆ. ಇದು ಸಹಜವಾಗಿ ಆಗುವ ಕ್ರಿಯೆ. ಗೊತ್ತಿರುವ ವಿಷಯ. ಹಾಗಿರುವಾಗ ಅದನ್ನ ಅಂಜನ ಹಾಕಿ ಗಾಯ ನೋಡಬೇಕೆ? ಸಿಡಿಲು ಬಡಿದೇನು ಈ ಜೀವ ಹೋಗಿಲ್ಲ. ಹೆದರಬೇಡಿ. ಮಡದಿ ಹೋದ ದುಃಖವೇ ಇನ್ನೂ ಹೋಗಿಲ್ಲ. ಆಗಲೇ ಮತ್ತೊಂದು ಮದುವೆಯ ಚಿಂತೆಯೇ ?

ಇದು ಸರಿಯಾದ ನಿರ್ಧಾರವಲ್ಲ. ನಾನೆಂದೂ ಇನ್ನೊಂದು ಹೆಣ್ಣಿನೊಂದಿಗೆ ಮದುವೆ ಆಗಲಾರೆ. ನಿಂತ ನೆಲವೇ ಕುಸಿದು ಜೀವ ಹೋದರೇನಾಯಿತು. ಅವಳಲ್ಲಿ ನನ್ನ ಪ್ರೀತಿ ಇದ್ದದ್ದೂ ನಿಜ ತಾನೇ ? ಮತ್ತೆ ಅವಳು ನನ್ನ ಕಣ್ಣಿಗೆ ಕಾಣಿಸಿಕೊಳ್ಳಲೆಂದು ನಾನು ಬಿಕ್ಕಳಿಸಿ ಅಳುವುದೂ ಇಲ್ಲ. ನಿಟ್ಟುಸಿರು ಬಿಡುವದೂ ಇಲ್ಲ. ಅವಳು ನನ್ನ ಆತ್ಮವಾಗಿದ್ದಾಳೆ. ನನ್ನೊಂದಿಗೇ ಇದ್ದಾಳೆ."

ಶ್ರೀಯವರಿಗೆ ತಮ್ಮ ಮಡದಿಯಲ್ಲಿಟ್ಟಿದ್ದ ಪ್ರೇಮಕ್ಕೆ ಮೂರ್ತರೂಪದ ಸಾಕ್ಷಿ 'ಧನುಷ್ಕೋಟಿ' ಕವನ. ಇಲ್ಲಿರುವ ಪ್ರತಿಯೊಂದು ಸಾಲೂ ಶ್ರೀ ಅವರು ತಮ್ಮ ಮಡದಿಯಲ್ಲಿರಿಸಿದ್ದ ಸಾಂಸಾರಿಕ ಒಲವು ಕಾರಂಜಿಯಂತೆ ಚಿಮ್ಮಿ ಮಡುಗಟ್ಟಿದ ಪ್ರೇಮವನ್ನು ಪ್ರತಿಫಲಿಸುತ್ತಿದೆ. ಶ್ರೀ ಅವರ ಅಮೂರ್ತವಾದ ಅಸ್ಪಷ್ಟವಾದ ಭಾವನೆಗಳಿಗೆ ಇಂದ್ರಿಯಗಮ್ಯವಾದ ಮೂರ್ತರೂಪವನ್ನು ಕೊಡುವುದೇ ಕಾವ್ಯ ರಚನೆಯ ಯೋಗ್ಯವಾದ ಆವಿಷ್ಕಾರ, ಪದ್ಧತಿ ಎಂದು ಹೇಳಿರುವ ಟಿ.ಎಸ್. ಎಲಿಯಟ್‌ನ ಅಭಿಪ್ರಾಯ ಶ್ರೀ ಅವರ 'ಧನುಷ್ಕೋಟಿ' ಕವನದ ರಚನೆಯಲ್ಲಿ ಕಾರ್ಯಗತಗೊಂಡಿರುವುದನ್ನು ನೋಡಬಹುದು.

ಶ್ರೀ ಅವರು 'ಧನುಷ್ಕೋಟಿ–೧೯೧೫' ಕವನ ರಚಿಸಿರುವುದು ಧನುಷ್ಕೋಟಿಯ ಸಮುದ್ರ ತೀರದಲ್ಲಿ ಕುಳಿತು. ಹಾಗಾಗಿ ಆ ಕವಿತೆಯಲ್ಲಿ ಸಮುದ್ರದ ವೈಶಾಲ್ಯತೆ, ಬೃಹತ್ತು ಮಹತ್ತುಗಳೆಲ್ಲ ಸೇರಿ ಕವನದ ಅರ್ಥ ನಿಗೂಢವಾಗಿ ಗುರಿ ಮುಟ್ಟಲಿಕ್ಕೆ ಕಾರಣವಾಗಿ ಅದು ಅವರ ಜೀವದ ರಕ್ತದ ಕುದಿತವಾಗಿದೆ. ಅದರ ಸ್ವರೂಪ ಅನುಭವ ವೇದ್ಯವೇ ಹೊರತು ಅದನ್ನು ಸ್ಪಷ್ಟವಾಗಿ ಇದೇ ಎಂದು ಗುರುತಿಸುವುದಾಗಲೀ, ಪ್ರತ್ಯೇಕವಾಗಿ ಹೊರಗೆ ತೆಗೆದಿರಿಸುವುದಾಗಲಿ ಸಾಧ್ಯವಿಲ್ಲ.[೬]

■

## ಸಾಂದರ್ಭಿಕ ಗ್ರಂಥಗಳು

೧. ಸಂ. ಡಾ. ನಾ. ಗೀತಾಚಾರ್ಯ, ಪ್ರೊ. ಕೆ.ಎಸ್. ದೇಶಪಾಂಡೆ, ಬಿ.ಎಂ.ಶ್ರೀ. ಜೀವನ–ಸಾಧನೆ, ಲೇ. ಡಾ. ಡಿ.ಎಂ. ನಂಜುಂಡಪ್ಪ, ಪುಟ ೧೧.

೨. ಬಿ.ಎಂ.ಶ್ರೀ. ಕನ್ನಡಿಗರಿಗೆ ಒಳ್ಳೆ ಸಾಹಿತ್ಯ ೧೮೧.

೩. ಡಾ. ಹೇಮಂತ ಕುಲಕರ್ಣಿ ಕಾವ್ಯದಲ್ಲಿ ನವ್ಯತೆ, ಪುಟ ೬೩.

೪. ಸಂ. ಡಾ. ನಾ. ಗೀತಾಚಾರ್ಯ, ಪ್ರೊ. ಕೆ.ಎಸ್. ದೇಶಪಾಂಡೆ, ಬಿ.ಎಂ.ಶ್ರೀ. ಜೀವನ-ಸಾಧನೆ, ಲೇ. ಪ್ರೊ. ಕೆ.ಎಸ್. ದೇಶಪಾಂಡೆ, ಪುಟ ೫.

೫. ಅದೇ ಡಾ. ಡಿ.ಎಂ. ನಂಜುಂಡಪ್ಪ, ಪುಟ ॥.

೬. (ಸಂ.) ಅದೇ ಬಿ.ಎಂ.ಶ್ರೀ ಜೀವನ-ಸಾಧನೆ, ಲೇ. ಎನ್.ಕೆ. ಕುಲಕರ್ಣಿ, ಪುಟ ೨೦.

೭. (ಸಂ.) ಡಾ. ನಾ. ಗೀತಾಚಾರ್ಯ, ಪ್ರೊ. ಕೆ.ಎಸ್. ದೇಶಪಾಂಡೆ, ಬಿ.ಎಂ.ಶ್ರೀ. ಜೀವನ-ಸಾಧನೆ, ಲೇ. ಎನ್.ಕೆ. ಕುಲಕರ್ಣಿ, ಪುಟ ೨೧.

೮. (ಸಂ.) ಡಾ. ನಾ. ಗೀತಾಚಾರ್ಯ, ಪ್ರೊ. ಕೆ.ಎಸ್. ದೇಶಪಾಂಡೆ, ಬಿ.ಎಂ.ಶ್ರೀ. ಜೀವನ-ಸಾಧನೆ ಲೇ. ಆರ್.ಸಿ. ಹಿರೇಮಠ, ಪು. ೧೫.

೯. -"- ಅದೇ--"-- ಲೇ. ಎನ್.ಕೆ. ಕುಲಕರ್ಣಿ, ಪುಟ ೨೩.

೧೦. -"- ಅದೇ--"-- ಲೇ. ಶ್ರೀ ಅವರ ಕನ್ನಡ ಸೇವೆ, ಪುಟ ೩೦.

೧೧. ಡಾ. ಎಸ್.ಎಸ್. ಬ್ಯಾತನಾಳ, ಶ್ರೀ ಉತ್ಸವ, ಪುಟ ೪೨೯.

೧೨. ಡಾ. ಎಸ್.ಎಸ್. ಬ್ಯಾತನಾಳ, ಸ್ರೀ ಉತ್ಸವ, ಪುಟ ೪೬೮.

೧೩. --"--ಅದೇ--"--ಪುಟ ೪೬೮.

೧೪. ಡಾ. ನಾ.ಗೀ. ಪ್ರೊ. ಕೆ.ಎಸ್. ದೇಶಪಾಂಡೆ, ಬಿಎಂಶ್ರೀ ಜೀವನ-ಸಾಧನೆ ಲೇ: ಎನ್.ಕೆ. ಕುಲಕರ್ಣಿ, ಪುಟ ೨೮.

೧೫. --"--ಅದೇ--" ಲೇ. ಡಾ. ರಾ.ಯ. ಧಾರವಾಡಕರ, ಪು. ೧೧೨.

೧೬ (ಸಂ) ಜಿ.ಬಿ. ಜೋಷಿ, ಮನ್ವಂತರ, ಪುಟ ೫೫, ಲೇ. ವಿಕಾಸ ಎಂ. ಗೋಪಾಲಕೃಷ್ಣ ಅಡಿಗ.

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# 'ಧನುಷ್ಕೋಟಿ' – ೧೯೧೫

ಮೂಲ : ಶ್ರೀ
ರೂಪಾಂತರ : ಡಾ. ಬಿ.ಸಿ. ರಾಮಚಂದ್ರ ಶರ್ಮ

---

ನನ್ನ ಪ್ರಾಣದ ಪ್ರಾಣ ಕೈ ಹಿಡಿದ ಒಡನಾಡಿ
ಸತ್ತು ಓ ಸತ್ತು,
ತಂಪು ಸೊಂಪು ಬೀರಿದ ಮುಖ ಕಣ್ಣಿಂದ ಜಾರಿ
ಬಾಳು ಬರಡಾಯಿತು.

ಹನ್ನೆರಡು ವರ್ಷಗಳ ಹಿಂದೆ ಹೆಂಡತಿಯಾದೆ,
ಬಂಗಾರದಂಥ ಹೆಣ್ಣೆ,
ಆರೇ ಆರು ಚೈತ್ರಕೆ ಸಂಗಾತಿಯಾದೆ,
ಸಂಗಕ್ಕೆ ಸಂದ ಜೇನೆ.

ಮಾರ್ದವತೆ ಮಡುವಾದಂತಿದ್ದ ನಿನ್ನ ಕಣ್ಣ
ಪಾಪೆಯಾಗಿದ್ದೆನಲ್ಲ ನಾನು.
ತಣ್ಣನೆಯ ನೆಮ್ಮದಿಯ ನೆರಳಾದವಳೆ, ನಿನ್ನ
ಒಪ್ಪ ಮಾಡಿಟ್ಟುಕೊಂಡೆನೇನು ?

ದುಃಖ ಆತಂಕಗಳ ಕಟ್ಟಿಕೊಂಡೇ ಹುಟ್ಟಿ
ಬಂದ ಮಕ್ಕಳು ನಮಗೆ, ಇದ್ದೊಬ್ಬ ಮಗ
ಕುರುಡಾದಾಗ ಧಾರಣಕ್ಕಾಗಿ ಕೈಯೆತ್ತಿ
ಬೇಡಿದೆವು–ನಮ್ರತೆಯ ಕಲಿತೆವಾಗ.

ಸಾವಿಲ್ಲದಂಥವಳು ಸತ್ತ ಮಾತಾಡದಿರು,
ಅವಳಿದ್ದಾಳೆ ಇಲ್ಲಿ, ಹೃದಯದಲ್ಲಿ.
ನಮ್ಮಿಬ್ಬರಾತ್ಮಗಳ ಮದುವೆ ನೆರವೇರಿರಲು
ಮನೆಯೊಡೆಯುವಂಥ ಸಾವಿಗೆಡೆಯೆಲ್ಲಿ ?

ಕೊನೆಯುಸಿರ ತನಕ ನನ್ನೊಲವಿಗವಳೊಬ್ಬಳೇ–
ನಿಮ್ಮಾಣೆ, ಮಾತು ಕೇಳಿ
ಪಡುವಣದ ಕೆಂಡವೇ, ಏರಿಳಿದ ಕಡಲೇ,
ಸಾಕ್ಷಿಯಾಗಿ ನಿಲ್ಲಿ.

ಓ, ನನ್ನ ದೇವತೆಯೆ, ನೀನು ಕೆಳಗಿಟ್ಟ ಹೊರೆ
ಇನ್ನು ನನ್ನ ಹೆಗಲಿಗಿರಲಿ.
ಭೋಗಕ್ಕಲ್ಲ ; ಪೂಜೆಗೆ ಬದುಕು–ದೇವರೇ
ಅದರ ಕೈ ಹಿಡಿದು ನಡೆಸಲಿ.

ನನ್ನ ತಮ್ಮಂದಿರಿಗು ತಾಯಿ ನೀನಾಗಿದ್ದೆ–
ಮನೆ ತುಂಬ ತಬ್ಬಲಿಗಳು.
ಬದುಕು ಹಿಂಡುವಷ್ಟು ದ್ರಾಕ್ಷಾರಸ ಅವರಿಗೇ,
ನಾನವರಿಗೇ ಮೀಸಲು

ಹೆಡೆಯಾಡದಂತೆ ದೈವದ ಸೇಡು ಎಲೆಮರೆಯ
ಕಾಯಾಗಿ ಬದುಕಿದ್ದೆವು.
ಆದರೂ ದೈವದೆದೆಯಲ್ಲಿ ಸತ್ತಂತೆ ದಯ–
ಬಂದೊಕ್ಕರಿಸಿತು ಸಾವು.

ಭವದ ಋಣ ತೀರಿ ಅವಳೀಗ ಹಿಡಿ ಬೂದಿ,
ಸ್ವರ್ಗಕ್ಕೆ ಅವಳ ಮಾನ.
ಪ್ರೀತಿ ತುಳುಕಿದ ಲೋಟವೆಂದೆಂದಿಗೂ ಖಾಲಿ,
ಹೊಂಗನಸು ಅಂಥ ಪ್ರೇಮ.

ಎರಡನೆಯ ಮದುವೆಯೇ ? ಗಾಯ ಮಾಯುವುದಕ್ಕೆ
ಅಂಜನವೆ ಹೇಳು.
ಸಿಡಿಲು ಬಡಿದೊಡೆದ ಜೀವ ಇದೆನ್ನುವ ಲೆಕ್ಕ
ಸರಿಯಲ್ಲ, ತಾಳು.

ಕಾಲ ತಳದ ನೆಲ ಕುಸಿದರೂ ಜೀವ ತಣ್ಣಗೆ–
ಒಲವಿದ್ದದ್ದು ದಿಟವೇ ?
ಬಿಕ್ಕು ನಿಟ್ಟುಸಿರು–ಎಂಥದೂ ಇಲ್ಲ, ಕಣ್ಣಿಗೆ
ಮತ್ತವಳು ಬರುವ ಹಟವೇ ?

ಪಾಠಪ್ರವಚನ, ಕಾವ್ಯದಧಿದೇವತೆಯ ಪ್ರೀತಿ,
ಸಿಹಿ ಕನ್ನಡದ ಒಂದೆರಡು ಕವನ.
ಅಷ್ಟು ಮಾಡಿ ಕೃತಾರ್ಥನಾದವನ ನೀತಿ
ನನದಿನ್ನು–ಅದೇ ನಾ ಕೊಡುವ ವಚನ.

ನಿಷ್ಪಾಪಿಯಾಗಿ ಬದುಕುವ ಅಥವ ತಪ್ಪೆಸಗಿ
ನಾಚದೇ ಇರುವ ಭ್ರಮೆಯಿಲ್ಲ ನನಗೆ.
ಹಾಡು ಪ್ರೀತಿ ಬದುಕುಗಳ ಬೆಳಕೇ, ಕ್ಷಮೆಯಾಗಿ
ನೀನಿರುತನಕ ಭಯವೇಕೆ ಎದೆಗೆ ?

ಎಂದಾದರೂ ಒಂದು ದಿನ ನನ್ನ ಹೆಸರೆತ್ತಿ
ಯಾರು ಯಾರೋ ಹಾಡಿ ಹರಸಿದಾಗ,
ನಿನ್ನ ಉಜ್ವಲ ಜ್ವಾಲೆ ಮುಟ್ಟಿ ಚೇತನ ಹೊತ್ತಿ
ನನ್ನಾತ್ಮ ಬೆಳಕಾದ ಯೋಗ, ಭಾಗ್ಯ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೮. ಕೈವಾರ ತಾತಯ್ಯನವರ ತಲಕಾಯಲಕೊಂಡ ದ್ವಿಪದ– ಒಂದು ಮರುಚಿಂತನೆ

–ಸುಂಕಂ ಗೋವರ್ಧನ*

ಕ್ರಿ.ಶ. ೧೭೨೬ ರಿಂದ ೧೮೩೬ ರವರೆಗೆ ಜೀವಿಸಿ[1] ಆಧ್ಯಾತ್ಮಿಕ ಸಾಧನೆಯ ಮೂಲಕ ಜನರನ್ನು ಸನ್ಮಾರ್ಗದೆಡೆಗೆ ಕರೆದೊಯ್ದ ಮಹಾನ್ ಸಾಧಕರೆಂದರೆ ಸದ್ಗುರು ಯೋಗಿ ನಾರೇಯಣರು. 'ಕಾಲಜ್ಞಾನ' ಎಂಬ ವಿಶಿಷ್ಟ ಕೃತಿಯಿಂದ ಜನಪ್ರಿಯರಾದ ಇವರು ವೇದಾಂತ ಸಾರಾವಳಿ, ನಾರಾಯಣ ಕವಿಶತಕ, ಭೀಮಲಿಂಗ ಶತಕ, ತಾರಕ ಬ್ರಹ್ಮಾನಂದ ಶತಕ ಮುಂತಾದ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಇಂದಿನ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿಗೆ ಸೇರಿದ ಕೈವಾರದಲ್ಲಿ ತಮ್ಮ ಸಾಧನೆ ಹಾಗೂ ಬೋಧನೆಯಿಂದ ಜನರಿಗೆ ತೀರ ಹತ್ತಿರದವರಾದ ಕಾರಣ ಇವರನ್ನು ಕೈವಾರದ ತಾತಯ್ಯನವರೆಂದು ಜನ ಆದರಿಸುತ್ತಾ ಬಂದಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿರುವ ಇವರ ಕೀರ್ತನೆಗಳಂತೂ ಯೋಗ ಸಾಧನೆಯ ಅತ್ಯದ್ಭುತ ಕಲಾಕೃತಿಗಳೆಂದು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ವೇದಾಂತದ ತತ್ತ್ವಗಳನ್ನು, ಯೋಗ ಸಾಧನೆಯನ್ನು ತಮ್ಮ ಕೃತಿಗಳ ಮೂಲಕ ಜನಸಾಮಾನ್ಯರಲ್ಲಿ ನೆಲೆಗೊಳಿಸಿದ್ದು ತಾತಯ್ಯನವರ ಅನುಪಮ ಕೊಡುಗೆಯಾಗಿದೆ.

ಇವರ ಕೃತಿಮಾಲೆಯಲ್ಲಿ ಖಂಡಕಾವ್ಯವನ್ನು ಹೋಲುವ ಚಂಪೂ ಪ್ರಕಾರಕ್ಕೆ ಸೇರಿದ ವಿಶೇಷವಾದ ಕೃತಿಯೊಂದಿದೆ. ಅದು 'ಶ್ರೀ ಕೃಷ್ಣ ಚರಿತ ತತ್ತ್ವಾಮೃತ ಯೋಗ ಸಾರಮು' ಎಂಬ ಗ್ರಂಥ.[2] ಸದ್ಯಕ್ಕೆ ತಾತಯ್ಯನವರ ರಚನೆಗಳ ಪೈಕಿ ಪ್ರತ್ಯೇಕವಾದ ಕಾವ್ಯಪ್ರಕಾರವಾಗಿ ದೊರೆತಿರುವ ರಚನೆ ಇದೊಂದೇ ಎಂದು ತಿಳಿದುಬಂದಿದೆ. ಈ ಕೃತಿಯಲ್ಲಿ ಶ್ರೀಕೃಷ್ಣನ ಬಾಲಲೀಲೆಗಳ ಮೂಲಕ ತಾತಯ್ಯನವರು ಯೋಗ ಸಾಧನೆಯನ್ನು ವಿವರಿಸಿದ್ದಾರೆ. ನಿರಂತರ ಪರ್ಯಟನದಿಂದ ದಕ್ಕಿಸಿಕೊಂಡ ಅನೇಕ ಐತಿಹ್ಯಗಳ ಮೂಲಕ

* ನಂ. ೩೩೩೬, ೩ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಹಂಪಿನಗರ, ವಿಜಯನಗರ ೨ನೇ ಹಂತ, ಬೆಂಗಳೂರು-೦೪೦. ಮೊ: ೯೫೩೫೭೬೨೪೬೪. ಇಮೇಲ್: sunkamgovardhan@gmail.com

ಈ ಕೃತಿ ಗಮನ ಸೆಳೆಯುತ್ತದೆ. ತೆಲುಗಿನಲ್ಲಿರುವ ಈ ಕೃತಿಯನ್ನು ಕನ್ನಡ ಭಾವಾನುವಾದ ಮತ್ತು ವ್ಯಾಖ್ಯಾನದೊಂದಿಗೆ ಶ್ರೀಯುತರಾದ 'ಕೈಪು' ಲಕ್ಷ್ಮೀ ನರಸಿಂಹ ಶಾಸ್ತ್ರಿಯವರು ೨೦೦೫ರಲ್ಲಿ ಕೈವಾರದಿಂದ ಪ್ರಕಟಿಸುವುದರ ಮೂಲಕ ಕನ್ನಡಿಗರಿಗೆ ಮಹದುಪಕಾರವನ್ನು ಮಾಡಿದ್ದಾರೆ. ಶಾಸ್ತ್ರಿಗಳು ತಮ್ಮ ಅಪಾರ ಪಾಂಡಿತ್ಯದ ಹಿನ್ನೆಲೆಯಲ್ಲಿಯೂ ಕೈವಾರ ತಾತಯ್ಯನವರ ಸಮಗ್ರ ಸಾಹಿತ್ಯದ ಹಿನ್ನೆಲೆಯಲ್ಲಿಯೂ ಈ ಕೃತಿಯನ್ನು ತಲಸ್ಪರ್ಶಿಯಾಗಿ ಪರಿಚಯಿಸಿದ್ದಾರೆ.

ಹೀಗೆ ಮಾಡುತ್ತಲೇ ಶಾಸ್ತ್ರಿಗಳು ತಾತಯ್ಯನವರು ಹೇಳಿರುವ ಈ ಕೃತಿಯ [ಶ್ರೀ ಕೃಷ್ಣ ಚರಿತೆ ತತ್ತ್ವಾಮೃತ ಯೋಗಸಾರಮು] ಒಂದು ಭಾಗವಾದ ತಲಕಾಯಲಕೊಂಡ ದ್ವಿಪದವನ್ನು ತಪ್ಪಾಗಿ ಭಾವಿಸಿಕೊಂಡು ಅದನ್ನು ಆಲಂಬಗಿರಿ ಎಂಬ ಕ್ಷೇತ್ರದೊಂದಿಗೆ ತಳಕು ಹಾಕಿ ಪ್ರಮಾದವನ್ನು ಎಸಗಿದ್ದಾರೆ. ಶಾಸ್ತ್ರಿಗಳ ಮೇಲಿನ ಅಧ್ಯಯನದ ಗೌರವದೊಂದಿಗೆ ನನ್ನ ಸ್ವತಃ ಕ್ಷೇತ್ರಕಾರ್ಯ ಹಾಗೂ ಅಧ್ಯಯನದ ಹಿನ್ನೆಲೆಯಲ್ಲಿ ಈ ಗೊಂದಲವನ್ನು ಪರಿಹರಿಸಲು ಈ ಲೇಖನವನ್ನು ಬರೆಯುತ್ತಿದ್ದೇನೆ.

ಮೊದಲಿಗೆ ಒಂದು ವಿಷಯವನ್ನು ಸ್ಪಷ್ಟಪಡಿಸಿಬಿಡುತ್ತೇನೆ. ಚಿಂತಾಮಣಿ ತಾಲ್ಲೂಕಿನ ಐತಿಹಾಸಿಕವಾಗಿ ಪ್ರಮುಖವಾಗಿರುವ ವೈಷ್ಣವ ಕ್ಷೇತ್ರ ಆಲಂಬಗಿರಿ. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡು ಭವ್ಯವಾದ ಇತಿಹಾಸವನ್ನು ಹೊತ್ತ ಕ್ಷೇತ್ರ ಈ ಆಲಂಬಗಿರಿ. ಈ ಆಲಂಬಗಿರಿಯಲ್ಲಿರುವ ವೆಂಕಟರಮಣಸ್ವಾಮಿ ದೇವಾಲಯವನ್ನು ತಾತಯ್ಯನವರು ತಮ್ಮ ಜೀವಿತ ಕಾಲದಲ್ಲಿ ಸಂದರ್ಶಿಸಿದ್ದಾರೆ. ಹಾಗೆಯೇ ಶಿಡ್ಲಘಟ್ಟ ತಾಲ್ಲೂಕಿನಲ್ಲಿಯೂ ತಲಕಾಯಲಕೊಂಡ ಎಂಬ ಬೆಟ್ಟವೊಂದಿದೆ. ಈ ಬೆಟ್ಟದ ಬುಡದಲ್ಲಿಯೂ ಒಂದು ವೆಂಕಟರಮಣಸ್ವಾಮಿ ದೇವಾಲಯವಿದೆ. ಈ ದೇವಾಲಯವನ್ನು ಸಹ ತಾತಯ್ಯನವರು ತಮ್ಮ ಜೀವಿತ ಕಾಲದಲ್ಲಿ ಸಂದರ್ಶಿಸಿದ್ದಾರೆ. ಆಲಂಬಗಿರಿಯನ್ನು ಕುರಿತು ಮೂರು ಕೀರ್ತನೆಗಳನ್ನು ರಚಿಸಿದ್ದರೆ ತೆಲಕಾಯಲ ಬೆಟ್ಟದ ಬಗ್ಗೆ ತಲಕಾಯಲ ಕೊಂಡ ದ್ವಿಪದವನ್ನು ರಚಿಸಿರುತ್ತಾರೆ. ಆದರೆ ಕೈವಾರ ತಾತಯ್ಯನವರ 'ಶ್ರೀ ಕೃಷ್ಣ ಚರಿತೆ ತತ್ತ್ವಾಮೃತ ಯೋಗ ಸಾರಮು' ಕೃತಿಯ ವ್ಯಾಖ್ಯಾನದಲ್ಲಿ ಲಕ್ಷ್ಮೀ ನರಸಿಂಹ ಶಾಸ್ತ್ರಿಗಳು ತಲಕಾಯಲಕೊಂಡ ದ್ವಿಪದದಲ್ಲಿ ಬರುವ ತಲಕಾಯಲ ಬೆಟ್ಟವನ್ನು ಆಲಂಬಗಿರಿಗೆ ಆರೋಪಿಸಿದ್ದಾರೆ. ಇದು ಖಂಡಿತವಾಗಿಯೂ ಶುದ್ಧವಾದ ತಪ್ಪು. ತಲಕಾಯಲಕೊಂಡ ಎಂದರೆ ತಲಕಾಯಲ ಬೆಟ್ಟವೇ ಹೊರತು ಆಲಂಬಗಿರಿಯಲ್ಲ.

**ತಲಕಾಯಲ ಬೆಟ್ಟ:** ಶಿಡ್ಲಘಟ್ಟ ತಾಲ್ಲೂಕಿನ ಚಿಂತಾಮಣಿ–ಬಾಗೇಪಲ್ಲಿ ಮುಖ್ಯರಸ್ತೆಯಲ್ಲಿರುವ ಪ್ರಸಿದ್ಧವಾದ ಊರು ದಿಬ್ಬೂರುಹಳ್ಳಿ. ಇಲ್ಲಿಂದ ಸುಮಾರು ೨೮ ಕಿ.ಮೀ.ಗಳ ಅಂತರದಲ್ಲಿ ತಲಕಾಯಲ ಬೆಟ್ಟವಿದೆ.[೩] ಈ ಬೆಟ್ಟದ ಬುಡದಲ್ಲಿ ವಿಜಯನಗರೋತ್ತರ ಕಾಲಮಾನಕ್ಕೆ ಸೇರಿದ ವೆಂಕಟರಮಣಸ್ವಾಮಿ ದೇವಾಲಯವಿದೆ. 'ಶಿಡ್ಲಘಟ್ಟ ಪಾಳೆಯಪಟ್ಟವನ್ನು ನೋಡಿಕೊಳ್ಳುತ್ತಿದ್ದ ತಿಮ್ಮರಾಜು ಮತ್ತು ಬೊಮ್ಮರಾಜು ಇಬ್ಬರ ನಡುವೆ ವೈಷಮ್ಯದ ಸೆಣಸಾಟ ನಡೆದು ಬೊಮ್ಮರಾಜನು ಮಡಿದನು. ಆಗ ಈ

ಪ್ರದೇಶಕ್ಕೆ ವೆಂಕಟಸಾಗರವೆಂದು ಕರೆಯುತ್ತಿದ್ದರು. ನಂತರ ತಿಮ್ಮರಾಜುಗೆ ಕನಸು ಬಿದ್ದಂತೆ ಇಲ್ಲಿಯ ಪೊದೆಗಳಲ್ಲಿ ಹುದುಗಿದ್ದ ವೆಂಕಟೇಶನ ದೇವಾಲಯವನ್ನು ತನ್ನ ಸೇನೆಯ ಸಹಾಯದಿಂದ ಶೋಧಿಸಿ ಬೆಳಕಿಗೆ ತಂದು ಪ್ರತಿಷ್ಠಾಪಿಸಿದನೆಂದು ಸ್ಥಳೀಯವಾಗಿ ಹೇಳಲಾಗುತ್ತಿದೆ'. ಕರ್ನಾಟಕ ರಾಜ್ಯ ಕೋಲಾರ ಜಿಲ್ಲೆಯ ಗ್ಯಾಸೆಟಿಯರ್ ಕೂಡ ಈ ಸ್ಥಳವನ್ನು ಕುರಿತು ದಾಖಲೆಯೊದಗಿಸುತ್ತದೆ.[೪]

'ತಲಕಾಯಲಬೆಟ್ಟವು ಗುಮ್ಮನಾಯಕನಪಾಳ್ಯ, ಅಂಬಾಜಿದುರ್ಗ ಮತ್ತು ಮರುಗಮಲೆಗಳ ಮೂಲಕ ಹಾಯ್ದುಹೋಗುವ ಬೆಟ್ಟಗಳ ಶ್ರೇಣಿಗಳಲ್ಲಿರುವ ರಮಣೀಯ ಬೆಟ್ಟವಾಗಿದೆ. ಇದರ ಸಮೀಪವೇ ಪಾಪಾಗ್ನಿ ನದಿಯು ಹರಿಯುತ್ತದೆ. ಹಿಂದೆ ಈ ಪ್ರದೇಶದಲ್ಲಿ ದಟ್ಟವಾದ ಅರಣ್ಯವಿದ್ದುದರಲ್ಲಿ ಯಾವ ಆಶ್ಚರ್ಯವೂ ಇಲ್ಲವಾಗಿದೆ. ಬೆಟ್ಟದ ಮೇಲೆಯೂ ಒಂದು ವೆಂಕಟೇಶನ ದೇವಾಲಯವಿದ್ದು ಇದೂ ಸಹ ಪಾಳೆಯಗಾರರ ಕಾಲದ ರಚನೆಯಾಗಿದೆ. ಸರಳವಾದ ಬೃಹತ್ ಬಂಡೆಗಳ ನಡುವಿನ ಜಾಗವನ್ನು ಆಯ್ಕೆ ಮಾಡಿಕೊಂಡು ಇಲ್ಲಿ ದೇವಾಲಯವನ್ನು ನಿರ್ಮಿಸಲಾಗಿದೆ. ಈ ಶತಮಾನದಲ್ಲಿ ಅದರ ಜೀರ್ಣೋದ್ಧಾರ ನಡೆದಿದೆ. ಇಲ್ಲಿನ ಜನರ ಧಾರ್ಮಿಕ ಭಾವನೆಗಳನ್ನು ಅರ್ಥ ಮಾಡಿಕೊಳ್ಳಲು ಈ ಬೆಟ್ಟದಲ್ಲಿ ನಡೆಯುವ ಕೆಲವು ಆಚರಣೆಗಳನ್ನು ಗಮನಿಸಬೇಕಾಗಿದೆ.

ತಲಕಾಯಲ ಬೆಟ್ಟದ ಬುಡದಲ್ಲಿರುವ ವೆಂಕಟೇಶ್ವರನ ದೇವಾಲಯದಿಂದ ಈ ಊರಿಗೆ ವೆಂಕಟಾಪುರವೆಂದು ಹೆಸರು ಬಂದಿದೆ. ಇಲ್ಲಿ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿರುವ ವಿಶಾಲವಾದ ಪ್ರಾಕಾರವನ್ನು ಪ್ರವೇಶಿಸಲು ಎರಡು ಕಡೆ ಬಾಗಿಲುಗಳಿವೆ. ಈ ದೇವಾಲಯದ ಹೊರಗೆ ದೇವರಿಗೆ ಅಭಿಮುಖವಾಗಿ ಒಂದು ಪುಟ್ಟ ಕಲ್ಯಾಣಿಯಿದ್ದು ಇದರ ಪಕ್ಕದಿಂದಲೇ ನಾವು ಬೆಟ್ಟವನ್ನು ಹತ್ತುವ ಜಾಗವನ್ನು ತಲುಪಬೇಕಾಗಿದೆ.

ಈ ದೇವಾಲಯವನ್ನು ತಿಮ್ಮರಾಜು-ಬೊಮ್ಮರಾಜು ಎಂಬ ಪಾಳೆಯಗಾರರು ನಿರ್ಮಿಸಿದರು ಎಂಬ ಸಂಗತಿ ಈ ಭಾಗದ ಹಲವಾರು ಜನರಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಸಂಗತಿಯಾಗಿದೆ. ಸ್ವತಃ ನಾನೇ ಈ ಜಾಗದಲ್ಲಿ ಕೈಕೊಂಡ ಕ್ಷೇತ್ರ ಕಾರ್ಯದಿಂದ ಇದನ್ನು ದೃಢಪಡಿಸಿಕೊಂಡಿದ್ದೇನೆ. ಹಾಗೂ ಇದಕ್ಕೆ ದಾಖಲೆಯಾಗಿ ಪ್ರಸಿದ್ಧ ವಿದ್ವಾಂಸರಾದ ಡಾ. ಕೆ.ಆರ್. ನರಸಿಂಹನ್ ಅವರೂ ಸಹ ತಮ್ಮ ಗ್ರಂಥದಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ.[೫]

**ಕೈವಾರ ತಾತಯ್ಯನವರ ವರ್ಣನೆ:** ಕೈವಾರ ತಾತಯ್ಯನವರ 'ತತ್ತ್ವಾಮೃತ ಯೋಗಸಾರಮು' ಕೃತಿಯ ಮೂರನೆಯ ಆಶ್ವಾಸದಲ್ಲಿರುವ ಖಾನೆಯ ದ್ವಿಪದವೇ ತಲಕಾಯಲಕೊಂಡ ದ್ವಿಪದ.

"ಶ್ರೀಮಹಿತಾನಂದ ರಾಜ್ಯಂಬುನಂದು ।
ಮಸ್ತಕಾಚಲಮನು ಪುಣ್ಯ ಕ್ಷೇತ್ರಂಬು ॥

ಎಂದು ಆರಂಭವಾದ ಈ ದ್ವಿಪದವು ನಂತರ ಇಲ್ಲಿರುವ ಪಶು–ಪಕ್ಷಿ–ಗಿಡ ಮರಗಳನ್ನು ವಿವರಿಸಿ ಸುತ್ತಮುತ್ತ ಎಡೆಬಿಡದೆ ದಟ್ಟವಾಗಿ ಒಂದು ಯೋಜನೆ ವಿಸ್ತಾರವುಳ್ಳ ಅರಣ್ಯಭೂಮಿಯಿದೆ.

“ಆ ಗಿರಿಚೆಂತ ಮಹಾಪ್ರವಾಹಂಬು ಕಲದು ।
ಸ್ನಾನ ಪಾನಮು ಸೇಯ–ತೊಲಗು ದೋಷಮುಲು ॥
ವಾತಪಿತ್ಥ ಶ್ಲೇಷ್ಮ ಜ್ವರದೋಷಮುಲುನು
ತೊಲಗಿಂಚು ವೇವೇಗ–ತೋಯಂಬು ಮಹಿಮ ॥

ಎಂದು ಆ ಬೆಟ್ಟದ ಸಮೀಪದಲ್ಲಿ ಒಂದು ದೊಡ್ಡ ಪ್ರವಾಹವಿದೆ. ಈ ಹೊಳೆಯಲ್ಲಿ ಸ್ನಾನ ಮಾಡಿದರೆ ಮತ್ತು ನೀರನ್ನು ಕುಡಿದರೆ ವಾತ–ಪಿತ್ಥ–ಶ್ಲೇಷ್ಮ ಸಂಬಂಧಿ ಕಾಯಿಲೆಗಳು ವೇಗವಾಗಿ ಪರಿಹಾರವಾಗುತ್ತವೆ ಎಂದಿದ್ದಾರೆ. ನಂತರ ವಿಜಯನಗರ ಸಾಮ್ರಾಜ್ಯದಲ್ಲಿದ್ದ ವೀರರಾಘವ ಭಟ್ಟನೆಂಬ ಪುರೋಹಿತನು ಬಹುಶಃ ಶ್ರೀರಂಗಂನಲ್ಲಿರುವ ರಂಗನಾಯಕನನ್ನು ದರ್ಶಿಸಲು ಈ ಮಾರ್ಗವಾಗಿ ಹೋಗುವಾಗ ತಲಕಾಯಲಬೆಟ್ಟದ ಕಾಡಿನಲ್ಲಿ ಒಂದು ಹಸುವು ತನ್ನ ಮೊಲೆ ಹಾಲನ್ನು ಒಂದು ಕಡೆ ಹುಲಿಗೂ ಇನೊಂದು ಕಡೆ ಕರುವಿಗೂ ಕುಡಿಸುತ್ತಿರುವುದನ್ನು ಕಂಡು ಈ ವಿಷಯವನ್ನು ತಿಮ್ಮರಾಜು ಮತ್ತು ಬೊಮ್ಮರಾಜುಗೆ ತಿಳಿಸಿದರು.

ಅಪ್ಪಾಜಿ ಮಾಟಲಕು – ಆತ್ಮನುಷ್ಯೆಂಗಿ ॥
ತಿಮ್ಮರಾಜು ಬೊಮ್ಮಿರಾಜು – ಕಾಣುವ ಕೆಲ್ಲ ।
ಪೈಣಂಬು ಜೆಪ್ಪಿರಿ – ಪರ್ವತಂಬುನಕು ॥
ಪಚ್ಚಲ ಪಲ್ಲಿಕಿಲೊ – ಪಟ್ಟಭದ್ರುಂಡು ।
ಕೂರ್ಚುಂಡಿ ರಾಣುವ – ಮುಂದುಗಾ ನಡುವ ॥
ಚೊಚ್ಚಿರಿ ವನಮುಲೋ – ಸೊಂಪು ಮೀರಗನು ।
ದಂಡು ವಿಡಿಚಿರಿ ಯೇಟಿ ದಗ್ಗರ ಅಪುಡು ॥

ತಿಮ್ಮರಾಜು, ಬೊಮ್ಮರಾಜು ಆ ಕೂಡಲೆ ಸಿಪಾಯಿಗಳೊಡನೆ ಈ ತಲಕಾಯಲ ಬೆಟ್ಟಕ್ಕೆ ಬಂದರು. ಇಲ್ಲಿ ಹೊಳೆಯ ದಡದಲ್ಲಿ ಬಿಡಾರ ಮಾಡಿದ ರಾಜನು ಊರ ಜನರನ್ನು ಕರೆದನು. ಇವನ ಅಂಗರಕ್ಷಕನಾಗಿದ್ದ ಕತ್ತಿ ಓಬಳರಾಜನು ರಾಜನ ಆಜ್ಞೆಯ ಮೇರೆಗೆ ಜನರನ್ನು ನಿಭಾಯಿಸಿದನು. ರಾಜನು ಬೆಟ್ಟದ ಎಂಟೂ ಮೂಲೆಗಳನ್ನು ನೋಡಿ ಒಂದೆಡೆ ಬಂದು ಈ ಘೋರಾರಣ್ಯದಲ್ಲಿ ಪರಮಾತ್ಮನು ನೆಲೆಗೊಂಡದ್ದಕ್ಕೆ ಆಶ್ಚರ್ಯ ವ್ಯಕ್ತಪಡಿಸಿ ಇಲ್ಲಿ ದೇವರಿಗೆ ಶಾಶ್ವತ ಪೂಜೆಯನ್ನು ಏರ್ಪಾಡು ಮಾಡಿದನು; ದೇವಾಲಯವನ್ನು ನಿರ್ಮಿಸಿದನು.

ಒಂದು ಆನೆಗೆ ಹೂಮಾಲೆಯನ್ನು ನೀಡಿ ಈ ದೇವರನ್ನು ಅರ್ಚಿಸಲು ಯಾರು ಅರ್ಹರೋ ಅವರಿಗೆ ಆನೆಯು ಮಾಲಾರ್ಪಣೆಯನ್ನು ಮಾಡಲಿ ಎಂದು ಆಶಿಸಿದರು.

ದಂತಿನಿ ದೆಪ್ಪಿಂಚಿ – ಧರಮೀದ ನಿಲಿಪಿ ॥
ಪುಷ್ಪಹಾರವು ವೇಸಿ – ಪೂಜ ಸೇಯಿಂಚಿ ।
ಸಾಮಜಮಾ ಅರ್ಚುಕುಡೆವ್ವಡು ಸಮ್ಮತಮೊ ॥
ಯೆತ್ತು ಕುರುಮ್ಮನ್ನ – ವೇವೇಗ ಪೋಯಿ ।
ಏಕಪತ್ನೀವ್ರತುಡು – ಯೆರಕಮಾನಸುಡು ॥
ಸಾತಾನಿ ವೈಷ್ಣವುಡು – ಸರಸ ಸದ್ಗುಣುಡು ।
ತಿರುವೇಂಗಳಪ್ಪಯ್ಯ – ನಾಮಾಂಕಿತುನಕು ॥
ಪಟ್ಟಿ ತೊಂಡ್ಲಮು ಚುಟ್ಟಿ – ಪಟ್ಟುಕ ವಚ್ಚಿ ।
ರಾಜದಗ್ಗರವುಂಚೆ – ಗಜರಾಜ ಘನುಡು ॥

ಆನೆಯು ಏಕಪತ್ನೀವ್ರತಸ್ಥನೂ ವಿವೇಕಿಯೂ ಸರಸ ಸದ್ಗುಣವಂತನೂ ಆದ ಸಾತಾನಿ ವೈಷ್ಣವ ಕುಲೋತ್ಪನ್ನವಾದ ತಿರುವೇಂಗಳಪ್ಪಯ್ಯನಿಗೆ ಹಾರ ಹಾಕಿ ಆತನನ್ನು ಎತ್ತಿಕೊಂಡು ಬಂದು ರಾಜನ ಮುಂದೆ ನಿಲ್ಲಿಸಿತು. ಆಗ ಅವನಿಂದ ದೇವರ ಪೂಜೆಯನ್ನು ಮಾಡಿಸಿ ನಂತರ ಬೆಟ್ಟದ ಪಶ್ಚಿಮದಲ್ಲಿ ಹರಿಯುವ ಹೊಳೆಯ ಬಳಿಗೆ ಬಂದನು. ನಂತರ ಸೇನಾಧಿಪತಿಯಾದ ಚಂದ್ರಶೇಖರ ಜಟ್ಟಿಯ ಮುಂದಾಳತ್ವದಲ್ಲಿ ಶಂಖ-ಚಕ್ರ ಮುದ್ರೆಗಳಿರುವ ಕಲ್ಲನ್ನು ಹಾಕಿಸಿ ಆ ಸ್ಥಳಕ್ಕೆ ದಾಸರಿಪಲ್ಲೆ ಎಂದು ಹೆಸರಿಡಿಸಿ ಪ್ರಭವ ಸಂವತ್ಸರದ ವೈಶಾಖ ಶುದ್ಧ ಪೌರ್ಣಮಿಯಂದು ಈ ದೇವರಿಗೆ ಜಹಗೀರು ಕೊಟ್ಟನು.

ವೇಂಕಟೇಶ್ವರ ಸ್ವಾಮಿಯ ಇತರ ಸೇವೆಗಳಿಗಾಗಿ ಅಗಸನಾದ ನಾಗಪ್ಪನನ್ನು, ಒಬ್ಬ ಕುಂಬಾರನನ್ನು, ತೋಟಿ ತಳವಾರರನ್ನು, ಮೂರು ಮಂದಿ ಕಾವಲುಗಾರರನ್ನು, ನಾಟ್ಯ ಸೇವೆಗಾಗಿ ಭೋಗದ ನಟುವರನನ್ನು ಹಾಗೂ ಕಹಳೆ ಶಂಖದ ಸೇವೆಗಾಗಿ ಒಬ್ಬ ದಾಸರಿಯನ್ನು ನೇಮಿಸಲಾಯಿತು. ಅವರವರಿಗೆ ಸಮುಚಿತವಾಗಿ ಸಲ್ಲಬೇಕಾದ ದಾನವನ್ನು ಅರ್ಚಕನಾದ ತಿರುವೆಂಗಳಪ್ಪಯ್ಯನ ಕೈಯಿಂದ ಕೊಡಿಸಲಾಯಿತು.

ತಾತಯ್ಯನವರಿಗೆ ಈ ಮೇಲಿನ ವೃತ್ತಾಂತವನ್ನೆಲ್ಲ ಮಾಘ ಶುದ್ಧ ಪಂಚಮಿಯ ರಾತ್ರಿ ಅಮರ ನಾರೇಯಣ ಸ್ವಾಮಿಯು ಕನಸಿನಲ್ಲಿ ಬಂದು ಹೇಳಿದನು.

**ಕೈಪು ಅವರ ವ್ಯಾಖ್ಯಾನದಲ್ಲಿ ಆದ ತಪ್ಪುಗಳು:** ಮೇಲೆ ತಿಳಿಸಿದ ಎಲ್ಲ ವಿವರಗಳು ಶಿಡ್ಲಘಟ್ಟ ತಾಲ್ಲೂಕಿನ ಸಾದಲಿ ಹೋಬಳಿಗೆ ಸೇರಿದ ತಲಕಾಯಲಬೆಟ್ಟಕ್ಕೆ ಹೊಂದುತ್ತದೆಯೇ ವಿನಃ ಶಾಸ್ತ್ರಿಗಳು ಮತ್ತೆ ಮತ್ತೆ ಅದನ್ನು ಆಲಂಬಗಿರಿಗೆ ತಳಕು ಹಾಕಿರುವುದು ಖಂಡಿತವಾಗಿಯೂ ಸರಿಯಲ್ಲ.

೧. ತಲಕಾಯಲ ಬೆಟ್ಟ ಎಂಬ ಬೆಟ್ಟವೇ ಇರುವಾಗ "ಕರ್ನಾಟಕದಲ್ಲಿ ಆನಂದಕ್ಕೆ ಪ್ರಸಿದ್ಧವಾದ ತಲೆಕಾಯಿ ಬೆಟ್ಟವೆಂಬ ಪುಣ್ಯಕ್ಷೇತ್ರವಿದೆ. ಆಧ್ಯಾತ್ಮಕವಾಗಿ ಇಲ್ಲಿ ದೇಹವೇ ಕರ್ನಾಟಕ ರಾಜ್ಯ ; ತಲೆಯೇ ತಲೆಕಾಯಿ ಬೆಟ್ಟ ಎಂಬ ಅರ್ಥವೂ ಇದೆ" ಎಂದಿರುವುದು ದೂರಾನ್ವಯವಲ್ಲವೇ? ಕೋಲಾರ ಜಿಲ್ಲೆಯೇ ಕರ್ನಾಟಕದ ತಲೆಯಾದರೆ ಅದೇನೂ ಹಿಂದು ಮುಂದಾಗಿ ನಿಂತಿದೆಯೇ, ಹಾಗಾದರೆ ಬೀದರ್ ಏನಾಗಿರಬಹುದು?

೨. ತಲಕಾಯಲ ಬೆಟ್ಟದ ಬಳಿ ಪಾಪಾಗ್ನಿ ನದಿ ಹರಿಯುತ್ತದೆ. ಬೆಟ್ಟ ಗುಡ್ಡಗಳಿಂದ ಹರಿಯುವ ನೀರಿನಲ್ಲಿರುವ ಖನಿಜಾಂಶಗಳು ಆರೋಗ್ಯವರ್ಧಕವಾಗಿರುವುದರಿಂದ ಇದನ್ನು ತಾತಯ್ಯನವರು ವರ್ಣಿಸಿದ್ದಾರೆ. ಆದರೆ ಆಲಂಬಗಿರಿಯಲ್ಲಿ ಬೆಟ್ಟವೇ ಇಲ್ಲ. ಆಲಂಬಗಿರಿಗೆ ಸುಮಾರು ಮೂರು ಕಿ.ಮೀ.ಗಳ ಅಂತರದಲ್ಲಿ ಸಣ್ಣದೊಂದು ಗುಡ್ಡವಿದೆಯಾದರೂ ಅಲ್ಲಿ ಯಾವುದೇ ಹೊಳೆ ಹರಿಯುವುದಿಲ್ಲ.

೩. ತಲಕಾಯಲಬೆಟ್ಟದ ಬಳಿ ನಿರ್ಮಾಣವಾದ ದೇವಾಲಯವನ್ನು ನಿರ್ಮಿಸಿದವರು ತಿಮ್ಮರಾಜು–ಬೊಮ್ಮರಾಜು ಎಂದು ಸ್ಥಳಪುರಾಣವು ಕೂಡ ತಿಳಿಸುತ್ತದೆ. ಈ ಕ್ಷೇತ್ರದಲ್ಲಿ ಹಲವರನ್ನು ವಿಚಾರಿಸಿದಾಗ ಅವರು ಇದೇ ಅಭಿಪ್ರಾಯವನ್ನು ಹೊಂದಿರುತ್ತಾರೆ. ಇದರ ನಿರ್ಮಾಣದ ಕಾಲವೂ ವಿಜಯನಗರೋತ್ತರ ಕಾಲವನ್ನು ಸೂಚಿಸುತ್ತದೆ. ಆದರೆ ಆಲಂಬಗಿರಿಯಲ್ಲಿ ವಿಜಯನಗರಕ್ಕೆ ಪೂರ್ವಕಾಲೀನ ಕಟ್ಟಡವಿದ್ದು ವಿಜಯನಗರದವರು ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದರು. ಆಲಂಬಗಿರಿಯ ಸ್ಥಳಪುರಾಣದಲ್ಲಿ[೭] ತಿಮ್ಮಪ್ಪನಾಯಕನ ಬಗ್ಗೆ ವಿಷಯ ಇದೆ. ಈ ತಿಮ್ಮಪ್ಪನಾಯಕನೇ ಬೇರೆ, ತಿಮ್ಮರಾಜುವೇ ಬೇರೆ.

೪. ಕೋಲಾರ ಜಿಲ್ಲೆಯ ಗ್ಯಾಸೆಟಿಯರ್ ತಿಳಿಸುವಂತೆ ತಿಮ್ಮರಾಜು ಹಾಗೂ ಬೊಮ್ಮರಾಜು ಶಿಡ್ಲಘಟ್ಟದ ಪಾಳೆಯಗಾರರೇ ಹೊರತು ಆಲಂಬಗಿರಿಯವರಲ್ಲ.

೫. ತಿರುವೇಂಗಳಪ್ಪಯ್ಯನಿಗೆ ಆನೆಯು ಹಾರ ಹಾಕಿ ಅವನನ್ನು ಅರ್ಚಕನನ್ನಾಗಿ ಆರಿಸಿದ ಸ್ಥಳಪುರಾಣ ತಲಕಾಯಲ ಬೆಟ್ಟದ್ದೇ ಹೊರತು ಆಲಂಬಗಿರಿಯದ್ದಲ್ಲ. ಆಲಂಬಗಿರಿಯ ಸ್ಥಳ ಪುರಾಣದಲ್ಲಿ ಈ ಉಲ್ಲೇಖವಿಲ್ಲ. ಹಾಗೂ ಆಲಂಬಗಿರಿಯ ಸರ್ವೇಕ್ಷಣೀಯ ಸಂದರ್ಭದಲ್ಲಿ ಈ ಸಂಗತಿ ಯಾರ ನೆನಪಿನಲ್ಲೂ ಇಲ್ಲ. ಬದಲಿಗೆ ಈ ಸಂಗತಿಯನ್ನು ತಲಕಾಯಲಬೆಟ್ಟದ ಹಲವು ಹಿರಿಯರು ನೆನಪಿಸಿಕೊಳ್ಳುತ್ತಾರೆ.

೬. 'ಶ್ರೀ ತಾತಯ್ಯನವರು ಮುಕ್ತಿಕ್ಷೇತ್ರವೆಂಬ ಅರ್ಥದಲ್ಲಿ ತಲೆಗಿರಿ, ತಲೆಕಾಯಿಬೆಟ್ಟ, ಮಸ್ತಕಾದ್ರಿ ಎಂದು ಆಲಂಬಗಿರಿಯನ್ನು ಹೇಳಿರುವಂತೆ ತೋರುತ್ತದೆ' ಎಂಬ ಕೈಪು ಅವರ ಮಾತನ್ನು ಒಪ್ಪಲು ಸಾಧ್ಯವಿಲ್ಲ. ಬದಲಿಗೆ ತಲೆಕಾಯಲಬೆಟ್ಟದಲ್ಲಿ ಆ ಹೆಸರು ಬರಲು ಕಾರಣವೇನೆಂದು ವಿಚಾರಿಸಿದಾಗ ದಟ್ಟವಾದ ಅರಣ್ಯಪ್ರದೇಶದಲ್ಲಿದ್ದ ಈ ಬೆಟ್ಟದಲ್ಲಿದ್ದ ಬೇಡನೊಬ್ಬ ಬರುವ ಹಾದಿಹೋಕರನ್ನು ಹಿಂಸಿಸಿ ಅವರ ತಲೆಕಾಯಿಯನ್ನು ಉರುಳಿಸುತ್ತಿದ್ದ; ಆದ್ದರಿಂದ ಇದಕ್ಕೆ ಈ ಹೆಸರು ಬಂತೆಂದು ಕೆಲವರು ಹೇಳಿದರೆ, ನಾರದರು ಆ ಬೇಡನಿಗೆ ಉಪದೇಶ ನೀಡಿ ಅವನ ತಲೆಯನ್ನು ಕಾಯ್ದು ತಲೆ ಕಾಯ್ದು ಬೆಟ್ಟವೆಂದು ಕರೆದರೆಂಬ ಹೇಳಿಕೆಯೂ ಇದೆ. ಹಾಗಾಗಿ ತಾತಯ್ಯನವರ ಕಾಲದಲ್ಲಿ ಅತ್ಯಂತ ಪ್ರಚಲಿತವಿದ್ದ ಈ ಮಾತನ್ನು ಗಮನಿಸಿ ತಾತನವರು ಈ ರೀತಿ ಹೇಳಿದ್ದಾರೆಯೇ ವಿನಃ ಆಲಂಬಗಿರಿಯ ಬಗ್ಗೆ ಅಲ್ಲ.

೭. ಇನ್ನು ನೇರವಾಗಿ ಆಲಂಬಗಿರಿಯನ್ನು ಸಂದರ್ಶಿಸಿದ್ದ ತಾತನವರು ಅದರ ಬಗ್ಗೆ ಮೂರು ಕೀರ್ತನೆಗಳನ್ನು ಬರೆದಿದ್ದಾರೆ.[೮]

೧. 'ಚೆಲಿಯರೋ ನೀವಿಪುಡು ಶೀಘ್ರಮುನ ಚನಿರಾವೆ'

೨. ಖೇಚರಿ ಮುದ್ರನು ಕೀಲೆರಿಗವುಂಡವೆ

೩. ಮಂಗಳಂ ಶತಕೋಟಿ ಮನ್ಮಥಾಕಾರನಕು

ಈ ಮೂರೂ ಕೀರ್ತನೆಗಳಲ್ಲೂ ತಾತಯ್ಯನವರು ನೇರವಾಗಿ ಅಲಂಬಗಿರಿಯ ಬಗ್ಗೆ ಹೇಳಿರುವ ಅವರು ಎಲ್ಲೂ ಈ ಐತಿಹ್ಯಗಳ ಬಗ್ಗೆ ಹೇಳಿಲ್ಲ. ಹಾಗೂ ತಲಕಾಯಲ ಬೆಟ್ಟವನ್ನು ನೋಡಿರುವ ತಾತನವರು ಅಲ್ಲಿನ ಸಂಗತಿಯನ್ನು ತಲಕಾಯಲಕೊಂಡ ದ್ವಿಪದದಲ್ಲಿ ಬರೆದಿದ್ದಾರೆ. ಅವರಿಗೆ ಗೊಂದಲವಿರಲಿಲ್ಲ, ಸರಿಯಾಗಿಯೇ ಬರೆದಿದ್ದಾರೆ. ಆದರೆ ಕೈಪು ಅವರು 'ತಲಕಾಯಲಬೆಟ್ಟ' ವನ್ನು ಆಲಂಬಗಿರಿಗೆ ತಪ್ಪಾಗಿ ಸಮೀಕರಿಸಿದ್ದಾರೆ. ತಾತಯ್ಯನವರು ಆಲಂಬಗಿರಿಯನ್ನು ಕಂಡಿದ್ದಾರೆ ಎಂದು ನಂಬುವ ಇವರು ತಲಕಾಯಿಲಬೆಟ್ಟವನ್ನು ಕಂಡಿಲ್ಲ ಎಂದು ಭಾವಿಸಿದ್ದಾರೆಯೇ ಅಥವಾ ಅಷ್ಟು ದೂರ ಅವರು ಹೋಗಿರಲಾರರು ಎಂದುಕೊಂಡಿರುವರೇ ಅಥವಾ ಕೈವಾರಕ್ಕೆ ಹತ್ತಿರವಾಗಿರುವ ತಲಕಾಯಿಯಲಬೆಟ್ಟದ ಬಗ್ಗೆಯೇ ಇವರಿಗೆ ತಿಳಿದಿಲ್ಲವೇ?

೮. ಕೈಪು ಅವರು ತಮ್ಮ ಸಮರ್ಥನೆಗಾಗಿ ಎಪಿಗ್ರಾಫಿಯಾ ಕರ್ನಾಟಕದ ಅನುಬಂಧ ಸಂಪುಟದ ವಿಜಯನಗರದ ಅರಸು ವೆಂಕಟಪತಿರಾಯನ ಶಾಸನವನ್ನು ಉದಾಹರಿಸಿದ್ದಾರೆ.[೯] ಆದರೆ ಕೃಷ್ಣದೇವರಾಯನ ಕಾಲಕ್ಕಾಗಲೇ ಈ ಆಲಂಬಗಿರಿಯಲ್ಲಿ ದೇವಾಲಯ ರೂಪುಗೊಂಡಿತ್ತು. ಕೃಷ್ಣದೇವರಾಯನ ಕಾಲ ೧೫೧೦–೧೫೩೦. ವೆಂಕಟಪತಿರಾಯನ ಕಾಲ ಕ್ರಿ.ಶ. ೧೫೮೬–೧೬೧೪, ಹಾಗಾಗಿ ಆಲಂಬಗಿರಿಯ ಐತಿಹ್ಯದ ಕಾಲ ಕೃಷ್ಣದೇವರಾಯನದಾಗಿರುವಾಗ ವೆಂಕಟಪತಿರಾಯನ ಶಾಸನದಲ್ಲಿ ಬರುವ ಅಪ್ಪರಸನನ್ನು ತಲಕಾಯಿಲಬೆಟ್ಟದ ಅಪ್ಪಾಜಿಯೊಂದಿಗೆ ಸಮೀಕರಿಸುವ ಐತಿಹಾಸಿಕ ಕಾರಣವಾದರೂ ಏನು?

೯. ತಲಕಾಯಲಬೆಟ್ಟದ ಸ್ಥಳಪುರಾಣದಲ್ಲಿ ಗುಡಿಗೆ ನಿಜವಾದ ಪ್ರೇರಣೆಯಾದ ಸಂಗತಿ ಹಸುವೊಂದು ಹುಲಿ ಮತ್ತು ಕರುವಿಗೆ ಹಾಲು ಕುಡಿಸಿದ ವಿಷಯ ಆದರೆ ಆಲಂಬಗಿರಿಯ ಸ್ಥಳಪುರಾಣದ ಪ್ರಕಾರ ದೇಗುಲ ನಿರ್ಮಾಣಕ್ಕೆ ನಿಜವಾದ ಕಾರಣ ತಿಮ್ಮಪ್ಪನಾಯಕರ ಸ್ವಪ್ನ[೧೦].

೧೦. ತಾತಯ್ಯನವರು ಹೇಳಿರುವ ದಾಸರಿಪಲ್ಲೆಗೂ ಕೈಪು ಅವರು ಹೇಳುವ ಗಡಿದಾಸಪಳ್ಳಿಗೂ ಯಾವ ರೀತಿಯ ಸಂಬಂಧವೂ ಇಲ್ಲ.

ಈ ಮೇಲೆ ತಿಳಿಸಿದ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ 'ಶ್ರೀ ಕೃಷ್ಣ ಚರಿತ ತತ್ತ್ವಾಮೃತ ಯೋಗಸಾರಮು' ಕೃತಿಯಲ್ಲಿ ಸದ್ಗುರು ತಾತಯ್ಯನವರು ಬರೆದಿರುವ ತಲಕಾಯಲಕೊಂಡ ದ್ವಿಪದವು ನೇರವಾಗಿ ಶಿಡ್ಲಘಟ್ಟ ತಾಲ್ಲೂಕಿನ ತಲಕಾಯಿಲ ಬೆಟ್ಟವೇ ಹೊರತು ಚಿಂತಾಮಣಿ ತಾಲೂಕಿನ ಆಲಂಬಗಿರಿಯಲ್ಲ ಎಂಬುದು ಸಾಬೀತಾಗಿದೆ. ಇದು ತಾತಯ್ಯನವರು ತಲಕಾಯಿಲಬೆಟ್ಟದವರೆಗೂ ಹೋಗಿರಲಾರದು ಎಂಬ ದೂರಾನ್ವಯಕ್ಕೆ ದಾರಿ

ಮಾಡಿಕೊಡದೆ ತಾತಯ್ಯನವರು ತಮ್ಮ ಕಾಲದಲ್ಲಿ ಅಲ್ಲಿ ಸಂದರ್ಶಿಸಿ ಅಲ್ಲಿನ ಸ್ಥಳಪುರಾಣವನ್ನು ಈ ಗ್ರಂಥದಲ್ಲಿ ದಾಖಲಿಸಿದ್ದಾರೆ ಎಂದು ತಿಳಿದರೆ ತಾತಯ್ಯನವರಿಗೆ ನಾವು ಗೌರವ ತೋರಿಸಿದಂತೆ ಆಗುತ್ತದೆ ಎಂದು ಭಾವಿಸುತ್ತೇನೆ.

ಈ ಲೇಖನಕ್ಕಾಗಿ ನಾನು ಸ್ವತಃ ಕ್ಷೇತ್ರಕಾರ್ಯವನ್ನು ಕೈಗೊಂಡು ಅಲ್ಲಿನ ಪರಿಸರ ಪಾಪಾಗ್ನಿ ನದಿ, ಬೆಟ್ಟ, ವೆಂಕಟೇಶ್ವರ ದೇವಾಲಯವನ್ನು ಸಂದರ್ಶಿಸಿ ಊರ ಹಿರಿಯರನೇಕರನ್ನು ಮಾತಾಡಿಸಿ ಕಂಡುಕೊಂಡ ಸತ್ಯವಾಗಿದೆ.

[ನನ್ನನ್ನು ತಮ್ಮ ದ್ವಿಚಕ್ರವಾಹನದಲ್ಲಿ ತಲಕಾಯಲಬೆಟ್ಟಕ್ಕೆ ಕರೆದುಕೊಂಡು ಹೋಗಿ ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ಸೂಲಿಬೆಲೆಯ ಪ್ರಥಮ ದರ್ಜೆ ಕಾಲೇಜಿನ ಉಪನ್ಯಾಸಕರೂ ನನ್ನ ಮಿತ್ರರೂ ಆದ ಶ್ರೀ ಚನ್ನಕೃಷ್ಣಪ್ಪನವರನ್ನು ಈ ಸಮಯದಲ್ಲಿ ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ.]

■

**ಅಡಿಟಿಪ್ಪಣಿಗಳು**

೧. ಕನ್ನಡ ವಿಷಯ ವಿಶ್ವಕೋಶದಲ್ಲಿ ಕೈವಾರ ನಾರೇಯಣ ಯೋಗಿಯವರ ಕಾಲವನ್ನು ೧೭೩೦–೧೮೪೦ ಎಂದು ನಮೂದಿಸಿರುತ್ತಾರೆ. ಆದರೆ ಕೈವಾರದ ಯೋಗಿ ನಾರೇಯಣ ಆಶ್ರಮಕ್ಕೆ ಹತ್ತಿರವಾದ ಕೈಪು ಲಕ್ಷ್ಮೀ ನರಸಿಂಹ ಶಾಸ್ತ್ರಿಯವರು ತಿಳಿಸಿರುವ ಕಾಲವಾದ ಕ್ರಿ.ಶ. ೧೭೨೬–೧೮೩೬ ಎಂಬ ಕಾಲಘಟ್ಟವನ್ನು ಅಧಿಕೃತವೆಂದು ತಿಳಿದು ಅದನ್ನೇ ಬಳಸಲಾಗಿದೆ.

೨. 'ಶ್ರೀ ಕೃಷ್ಣಚರಿತ ತತ್ತ್ವಾಮೃತ ಯೋಗಸಾರಮು' ತೆಲುಗು ಮೂಲ: ಶ್ರೀ ಯೋಗಿ ನಾರೇಯಣ ತಾತಯ್ಯನವರು, ಕನ್ನಡ ಭಾವಾನುವಾದ ವ್ಯಾಖ್ಯಾನ 'ಕೈಪು' ಲಕ್ಷ್ಮೀನರಸಿಂಹ ಶಾಸ್ತ್ರಿ, ಸದ್ಗುರು ಯೋಗಿ ನಾರೇಯಣ ಮಠದ ಪ್ರಕಟಣೆ, ಕೈವಾರ, ೨೦೦೫.

೩. ಕ್ಷೇತ್ರ ಕಾರ್ಯದಿಂದ ದೃಢೀಕರಿಸಿಕೊಂಡ ಮಾಹಿತಿ.

೪. ಮು.ಸಂ. ಹೆಚ್. ಚಿತ್ತರಂಜನ್‌ದಾಸ್, ಕೋಲಾರ ಜಿಲ್ಲೆ ಗ್ಯಾಸೆಟಿಯರ್ (ಪರಿಷ್ಕೃತ), ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೦೫, ಪುಟ ೮೭೭

೫. ಡಾ. ಕೆ.ಆರ್. ನರಸಿಂಹನ್, ಕೋಲಾರ ಜಿಲ್ಲೆಯ ಶ್ರೀ ವೇಂಕಟೇಶ್ವರ ಸ್ವಾಮಿ ಹಾಗೂ ಇತರ ವಿಷ್ಣು ದೇವಾಲಯಗಳು, ಕೋಲಾರ ಪತ್ರಿಕೆ ಪ್ರಕಾಶನ, ಕೋಲಾರ, ೧೯೮೫.

೬. ಕೋಲಾರ ಜಿಲ್ಲೆ ಎಂಬ ಪದವನ್ನು ಅವಿಭಜಿತ ಕೋಲಾರ ಜಿಲ್ಲೆ ಎಂಬರ್ಥದಲ್ಲಿ ಉದ್ದೇಶಪೂರ್ವಕವಾಗಿ ಬಳಸಿದ್ದೇನೆಯೇ ಹೊರತು ಚಿಕ್ಕಬಳ್ಳಾಪುರ ಜಿಲ್ಲೆಯಾಗಿ ವಿಭಜಿತವಾಗಿರುವ ಸಂಗತಿ ಲಕ್ಷ್ಯದಲ್ಲಿಯೇ ಇದೆ.

೭. ಲೇಖಕರು ಎಸ್. ವೆಂಕಟೇಶಪ್ಪ, ಪರಿಷ್ಕರಣೆ, ಬಿ.ಆರ್. ಪದ್ಮನಾಭ, ಆಲಂಬಗಿರಿ ದರ್ಶನ, ಇಂದಿರಾ ಪ್ರಕಾಶನ, ದೊಡ್ಡಬಳ್ಳಾಪುರ, ೧೯೯೧.

೮. ತಾತಯ್ಯನವರ ಈ ಮೂರೂ ಕೀರ್ತನೆಗಳಿಗಾಗಿ ನೋಡಿ 'ಶ್ರೀ ಅಮರ ನಾರೇಯಣ ವೇದಾಂತ ಸಾರಾವಳಿ ಕೀರ್ತನೆಗಳು, ಕೈವಾರ.

೯. Epigraphia Carnatica, Vol. xvii: Q.M. Sheshadri, Mysore, 1965.

೧೦. ಎಸ್. ಗಂಗಾಂಬಿಕೆ, ಆಲಂಬಗಿರಿ, ಓದು–ಬರಹ ಬಳಗ, ಬೆಂಗಳೂರು.

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೯. ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂಗಳಲ್ಲಿ ವಿಬಕ್ತಿ ವಿವೇಚನೆ: ಒಂದು ತುಲನಾತ್ಮಕ ಅದ್ಯಯನ

ತಿರುಳು –ಪ್ರೊ. ಬಸವರಾಜ ಕೋಡಗುಂಟಿ*

ಶಬ್ದಮಣಿದರ್ಪಣಂ ಕನ್ನಡದ ಮಹತ್ವದ ವ್ಯಾಕರಣ. ಕನ್ನಡ ಮಾತಿನ ಇತಿಹಾಸದಾಗ ಇದನ್ನು ಹೆಚ್ಚು ಅದ್ಯಯನ ಮಾಡಿದೆ, ಇದಕ್ಕೆ ಹೆಚ್ಚು ವಿಮರ್ಶೆ, ವೃತ್ತಿಗಳು ಬಂದಿವೆ. ಇದನ್ನು ಕೇಶಿರಾಜನು ಹದಿಮೂರನೆಯ ಶತಮಾನದಾಗ ಬರೆದಿದ್ದು, ಇಂದಿನವರೆಗೂ ತನ್ನ ಮಹತ್ವವನ್ನು ಉಳಿಸಿಕೊಂಡಿದೆ. ಇದು ಹಳಗನ್ನಡಕ್ಕೆ ಬರೆದ, ಅಯಿಂದ್ರ ವ್ಯಾಕರಣ ಪರಂಪರೆಗೆ ಸೇರುವ ಒಂದು ಕ್ರುತಿ. ಇದಕ್ಕೆ ಸಂವಾದಿಯಾಗಿ ತೊಲ್ಕಾಪ್ಪಿಯಂ ಎಂಬುದು ತಮಿಳಿನ ಮಹತ್ವದ ವ್ಯಾಕರಣ ಗ್ರಂತ. ಇದನ್ನು ಬರೆದವನನ್ನು ತೊಲ್ಕಾಪ್ಪಿಯಣಾರ್ ಎಂದು ಕರೆಯಲಾಗುತ್ತದೆ. ಇದನ್ನು ಕ್ರಿ.ಪೂ. ಕಾಲದಲ್ಲಿಯೆ ಬರೆಯಲಾಗಿದೆ ಎಂದು ವಿವರಿಸಲಾಗುತ್ತದೆಯಾದರೂ ಇದರ ಕಾಲದ ಬಗೆಗೆ ಹಲವು ಅನುಮಾನಗಳು ಇವೆ. ತಮಿಳು ಮಾತಿನ ಅದ್ಯಯನವನ್ನು ಹೆಚ್ಚು ಪ್ರಬಾವಿಸಿರುವ ಕ್ರುತಿ ತೊಲ್ಕಾಪ್ಪಿಯಂ. ಇದು ಕೂಡ ಅಯಿಂದ್ರ ವ್ಯಾಕರಣ ಪರಂಪರೆಗೆ ಸೇರುವ ಕ್ರುತಿಯಾಗಿದೆ.

ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂ ಕ್ರುತಿಗಳು ವಿಶದವಾಗಿ ವಿಬಕ್ತಿ ವಿವೇಚನೆಯನ್ನು ಮಾಡಿವೆ. ಪ್ರತಿಯೊಂದು ಕಾರಕ ಸಂಬಂದಗಳನ್ನು ವಿವರಿಸಿ, ವಿಬಕ್ತಿ ಪ್ರತ್ಯಯಗಳನ್ನು ತೋರಿಸಿವೆ. ಈ ಕ್ರುತಿಗಳು ನಡೆಸಿರುವ ವಿಬಕ್ತಿ ವಿವೇಚನೆಯನ್ನು ತುಲನಾತ್ಮಕವಾಗಿ ನೋಡುವ ಪ್ರಯತ್ನವನ್ನು ಈಗಿನ ಪ್ರಬಂದದಲ್ಲಿ ಮಾಡಿದೆ. ಇದರಲ್ಲಿ ಎರಡೂ ಕ್ರುತಿಗಳಲ್ಲಿ ಕೊಟ್ಟಿರುವ ಕಾರಕ ಸಂಬಂದಗಳು, ಅವುಗಳು ವಿವರಿಸಿರುವ ವಿಬಕ್ತಿ ಪ್ರತ್ಯಯಗಳನ್ನು ಪರಸ್ಪರ ಮಾತುಗಳನ್ನು ಎದುರಿಗಿಟ್ಟುಕೊಂಡು ನೋಡುವ ಪ್ರಯತ್ನ ಮಾಡಿದೆ. ಪ್ರತಿಯೊಂದು ಪ್ರತ್ಯಯದ ಸಂವಾದಿ ರೂಪ ಮತ್ತೊಂದು ಮಾತಿನಾಗ ಇರುವುದನ್ನು ಗುರುತಿಸಿ ತೋರಿಸಿದೆ. ಕನ್ನಡ ಮತ್ತು ತಮಿಳು ಒಂದೆ ಮಾತಿನ

* ಸಹಾಯಕ ಪ್ರಾದ್ಯಾಪಕರು, ಕನ್ನಡ ವಿಬಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ–೫೮೫೩೧೧. ಮೊಬೈಲ್: ೯೧೯೯೧೬೦೫೩೦೫೭

ಮನೆತನ, ಅದರಲ್ಲಿಯೂ ಒಂದೆ ಗುಂಪಿಗೆ ಸೇರುವುದರಿಂದ, ಮತ್ತು ಪರಸ್ಪರ ಹತ್ತಿರದ ಸಂಬಂದವನ್ನು ತೋರಿಸುವುದರಿಂದ ಇವೆರಡರ ತವ್ಲನಿಕ ಅಧ್ಯಯನ ಮಹತ್ವದ್ದು. ಎರಡೂ ಬಾಶೆಗಳ ರಚನೆ, ಬೆಳವಣಿಗೆ, ಸಂಬಂದ ಮೊದಲಾದವನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಈಗಿನ ಪ್ರಬಂದ ತವ್ಲನಿಕ ದ್ರಾವಿಡ ಅಧ್ಯಯನಕ್ಕೆ ಮತ್ತು ಕನ್ನಡ-ತಮಿಳು ಮಾತುಗಳ ಸಂಬಂದ ತಿಳಿದುಕೊಳ್ಳುವುದಕ್ಕೆ ಮಹತ್ವದ ಕೊಡುಗೆಯನ್ನು ಕೊಡುತ್ತದೆ.

ಕನ್ನಡ ಮತ್ತು ತಮಿಳು ಈ ಎರಡೂ ಮಾತುಗಳು ದ್ರಾವಿಡ ಕುಟುಂಬದ ತೆಂಕುಗುಂಪಿಗೆ ಸೇರಿವೆ. ಈ ಎರಡೂ ಮಾತುಗಳು ಹಲವು ಕಾರಣಗಳಿಂದಾಗಿ ದ್ರಾವಿಡ ಅದ್ಯಯನಕ್ಕೆ ಹೆಚ್ಚು ಮಹತ್ವದವು. ಈ ಮಾತುಗಳ ಬಳಕೆ, ಬರವಣಿಗೆ, ಲಿಪಿಗಳಿಗೆ ಬಹು ಉದ್ದನೆಯ ಇತಿಹಾಸ ಇದೆ, ಅಲ್ಲದೆ ಸಾಹಿತ್ಯ, ಸೊಲ್ಲಗಟ್ಟು (ವ್ಯಾಕರಣ) ಗಳಿಗೂ ಕೂಡ. ಸಾವಿರ ವರುಶಕ್ಕಿಂತ ಹೆಚ್ಚು ಕಾಲದ ಬಾಶಾದ್ಯಯನ ಇತಿಹಾಸವನ್ನು ಹೊಂದಿರುವ ಜಗತ್ತಿನ ಕೆಲವೆ ಮಾತುಗಳಲ್ಲಿ ಕನ್ನಡ ಮತ್ತು ತಮಿಳು ಸೇರಿಕೊಳ್ಳುತ್ತವೆ.

ಕನ್ನಡ ಕೇಂದ್ರಿತ ದ್ರಾವಿಡ ಅದ್ಯಯನದ ಅವಶ್ಯಕತೆ ಹೆಚ್ಚು ಇದ್ದರೂ ಅಂತಹ ಪ್ರಯತ್ನಗಳು ಇಲ್ಲವೆನ್ನುವಷ್ಟು ಕಡಿಮೆ. ಮುಕ್ಯವಾಗಿ ಬಾಶೆಗಳ ತವ್ಲನಿಕ ಅಧ್ಯಯನ ಅತ್ಯವಶ್ಯವಾಗಿ ಆಗಬೇಕಿದೆ. ಇಂತಾ ಅದ್ಯಯನಗಳು ದ್ರಾವಿಡ ಮಾತಿನ ಮನೆತನ, ದ್ರಾವಿಡ ಮನೆತನದಾಗ ಕನ್ನಡದ ಸ್ತಾನ, ಕನ್ನಡ ಮತ್ತು ಇತರ ಮಾತುಗಳ ನಡುವಿನ ಸಂಬಂದ ಈ ಮೊದಲಾದವನ್ನು ತಿಳಿದುಕೊಳ್ಳುವುದಕ್ಕೆ ಹೆಚ್ಚು ಸಹಾಯ ಮಾಡುತ್ತವೆ. ಅದರ ಜೊತೆಜೊತೆಯಲ್ಲಿ ಕನ್ನಡ ಮತ್ತು ತಮಿಳಿನ ಪಾರಂಪರಿಕ ಸೊಲ್ಲಗಟ್ಟುಗಳ ತವ್ಲನಿಕ ಅದ್ಯಯನದ ಅವಶ್ಯಕತೆಯೂ ಇದೆ. ಈ ನಿಟ್ಟಿನಲ್ಲಿ ಈಗಿನ ಪ್ರಬಂದ ಒಂದು ಪ್ರಯತ್ನವಾಗಿದೆ. ಇದರಲ್ಲಿ ಕನ್ನಡ ಮತ್ತು ತಮಿಳಿನ ಪ್ರಾತಿನಿದಿಕ ಪಾರಂಪರಿಕ ಸೊಲ್ಲಗಟ್ಟುಗಳಾದ ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂ ಇವುಗಳ ವಿಬಕ್ತಿ ವಿವೇಚನೆಯನ್ನು ತವ್ಲನಿಕವಾಗಿ ತಿಳಿದುಕೊಳ್ಳುವ ಪ್ರಯತ್ನ ಮಾಡಿದೆ. ಇದರಂತೆ ಉಳಿದೆಲ್ಲ ವ್ಯಾಕರಣಾತ್ಮಕ ಗಟಕಗಳ ತವ್ಲನಿಕ ಅದ್ಯಯನವನ್ನೂ ಮಾಡಬೇಕಿದೆ.

ಕನ್ನಡ ಮತ್ತು ತಮಿಳು ಮಾತುಗಳು ಒಂದೆ ಮನೆತನ, ಒಂದೆ ಗುಂಪಿಗೆ ಸೇರಿದ, ಅತಿ ಹತ್ತಿರದ ಸಂಬಂಧವನ್ನು ಹೊಂದಿರುವುದರಿಂದ ಹೆಚ್ಚು ಸಮಾನ ಅಂಶಗಳನ್ನು ಪರಸ್ಪರ ಹಂಚಿಕೊಳ್ಳುತ್ತವೆ. ಕಾರಕ ಸಂಬಂದಗಳನ್ನು ಅಬಿವ್ಯಕ್ತಿಸುವ ಕೆಲವು ಪ್ರತ್ಯಯಗಳು ಕೂಡ ಸಮಾನವಾಗಿವೆ ಇಲ್ಲವೆ ಸಂಬಂದವನ್ನು ಹೊಂದಿವೆ. ಅದೆ ವೇಳೆಗೆ ಪರಸ್ಪರ ವ್ಯತ್ಯಾಸಗಳೂ ಇವೆ.

ಶಬ್ದಮಣಿದರ್ಪಣಂ ಇದು ಕನ್ನಡದ ಮಹತ್ವದ ಸೊಲ್ಲಗಟ್ಟು ಕ್ರುತಿಗಳಲ್ಲಿ ಒಂದು. ಇದು ಕೇಶಿರಾಜ ಎಂಬುವನು ಹದಿಮೂರನೆ ಶತಮಾನದಾಗ ಬರೆದಿರುವ ಕ್ರುತಿ. ತೊಲ್ಕಾಪ್ಪಿಯಂ ಇದು ತಮಿಳಿನ ಅತಿ ಮಹತ್ವದ ಮತ್ತು ಹಳೆಯ ಸೊಲ್ಲಗಟ್ಟು ಕ್ರುತಿ. ಈ ಕ್ರುತಿಯನ್ನು ಬರೆದವನ ಹೆಸರು ಗೊತ್ತಿಲ್ಲದಿರುವುದರಿಂದ ಅವನನ್ನು ತೊಲ್ಕಾಪ್ಪಿಯಕಾರ

ಎಂಬರ್ತದಲ್ಲಿ ತೊಲ್ಕಾಪ್ಪಿಯಣಾರ್ ಎಂದು ಕರೆಯಲಾಗುತ್ತದೆ. ಇದರ ಕಾಲದ ಬಗೆಗೆ ಹೆಚ್ಚು ನಿಕರತೆಗಳಿಲ್ಲ. ಹಲವರು ಹೇಳುವಂತೆ ಇದನ್ನು ಕ್ರಿ.ಪೂ.ದಲ್ಲಿ ಬರೆಯಲಾಗಿದೆ. ತಮಿಳಿನಲ್ಲಿ ಹಳೆಯ ಕಾಲದಲ್ಲಿ ಕನ್ನಡಕ್ಕಿಂತ ಹೆಚ್ಚು ಸೊಲ್ಲಗಟ್ಟು ಕ್ರುತಿಗಳು ಬಂದಿವೆ. ಇವುಗಳಲ್ಲಿ ತೊಲ್ಕಾಪ್ಪಿಯಂಗೆ ವಿಶೇಶ ಸ್ತಾನವಿದೆ.

ಈ ಎರಡೂ ಸೊಲ್ಲಗಟ್ಟುಗಳು ಪರಸ್ಪರ ಮಾತುಗಳ ರಚನೆಯನ್ನು ತಿಳಿದು ಕೊಳ್ಳುವುದಕ್ಕೆ ಹೆಚ್ಚು ಸಹಾಯಕವಾಗಿವೆ. ತಮ್ಮ ಕಾಲದ ಸಯ್ದಾಂತಿಕ ನಿಲುವುಗಳನ್ನು ಹೆಚ್ಚು ಸೂಕ್ತವಾಗಿ ಅನ್ವಯಿಸಿಕೊಂಡು ಬಾಶೆಯನ್ನು ವಿವರಿಸುವ ಕೆಲಸವನ್ನು ಮಾಡಿವೆ. ಎರಡೂ ಕ್ರುತಿಗಳು ಬಾಶೆಯನ್ನು ಸಮಾಜದ ಒಳಗೆ ಇಟ್ಟು ನೋಡುವ ಪ್ರಯತ್ನವನ್ನು ಮಾಡಿವೆ. ತೊಲ್ಕಾಪ್ಪಿಯಂ ಬಾಶೆಯ ಸೊಲ್ಲಗಟ್ಟನ್ನು ಬರೆಯುವ ಪ್ರಯತ್ನದ ಜೊತೆಜೊತೆಗೆ ಬಾಶೆಯ ಸಮಾಜದ ವ್ಯಾಕರಣವನ್ನು ತೋರಿಸುವ ಕೆಲಸವನ್ನೂ ಮಾಡಿದೆ. ಕನ್ನಡದಲ್ಲಿ ಶಬ್ದಮಣಿದರ್ಪಣಂ ಇದು ಕನ್ನಡದ ಅಯ್ಡೆಂಟಿಟಿಯನ್ನು ಕಟ್ಟಿಕೊಳ್ಳುವಲ್ಲಿ ಹೆಚ್ಚು ಕೊಡುಗೆಯನ್ನು ಕೊಟ್ಟಿದೆ. ತಮಿಳಿನಲ್ಲಿ ತೊಲ್ಕಾಪ್ಪಿಯಂ ತಮಿಳಿನ ಅಯ್ಡೆಂಟಿಟಿಯನ್ನು ಇಡಿಯಾಗಿ ಕಟ್ಟಿಕೊಟ್ಟಿದೆ ಮತ್ತು ಇದುವರೆಗೂ ಪ್ರಬಾವಿಸುತ್ತಿದೆ. ಕನ್ನಡದಲ್ಲಿ ಹೀಗೆ ಕನ್ನಡದ ಅಯ್ಡೆಂಟಿಟಿಯ ಸಂದರ್ಬದಾಗ ಹೆಚ್ಚು ಪ್ರಸ್ತುತವಾಗುವ ಕ್ರುತಿ ಕವಿರಾಜಮಾರ್ಗಂ.

ತೊಲ್ಕಾಪ್ಪಿಯಂ ಕ್ರುತಿಯ ರಚನೆಯನ್ನು ಒಂದು ಚೂರು ಪರಿಚಯ ಮಾಡಿಕೊಡಬೇಕು. ತೊಲ್ಕಾಪ್ಪಿಯಂನಲ್ಲಿ ಒಟ್ಟು ಮೂರು ಅದ್ಯಾಯಗಳು ಇವೆ. ಇದರಲ್ಲಿ ಮೊದಲನೆಯದು ಎೞುತ್ತದಿಗಾರಂ 'ಅಕ್ಕರಪ್ರಕರಣ', ಎರಡನೆಯದು ಚೊಲ್ಲದಿಗಾರಂ 'ಪದ(ವಾಕ್ಯ)ಪ್ರಕರಣ' ಮತ್ತು ಮೂರನೆಯದು ಪುರುೞದಿಗಾರಂ 'ಅರ್ತಪ್ರಕರಣ'. ಮೊದಲನೆಯ ಪ್ರಕರಣ ಅಕ್ಕರ ವಿವೇಚನೆಯನ್ನು ಮಾಡುತ್ತದೆ. ಎರಡನೆಯದು ಪದ, ವಾಕ್ಯಗಳನ್ನು ಕುರಿತಿರುವುದು. ಮೂರನೆಯ ಅರ್ತಪ್ರಕರಣ ಸಮಾಜಮೀಮಾಂಸೆಯಾಗಿದೆ. ತಮಿಳು ಕಾವ್ಯಮೀಮಾಂಸೆ, ತಮಿಳು ಸಮಾಜಮೀಮಾಂಸೆ, ತಮಿಳು ಅಯ್ಡೆಂಟಿಟಿಯನ್ನು ಕಟ್ಟಿಕೊಡುವುದರಲ್ಲಿ ಈ ಪ್ರಕರಣ ಹೆಚ್ಚು ಮಹತ್ವದ್ದು.

ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂ ಕ್ರುತಿಗಳೆರಡೂ ಸ್ತೂಲವಾದ ಬಾರತೀಯ ಸೊಲ್ಲಗಟ್ಟು ಪರಂಪರೆ ಎಂಬ ಕೊಡೆಯ ಒಳಗೆ ಬರುತ್ತವೆ. ಸಂಸ್ಕ್ರುತದ ಸೊಲ್ಲಗಟ್ಟು ಪರಂಪರೆಯ ಸಿದ್ದಾಂತಗಳನ್ನು ತಳಮಟ್ಟದಲ್ಲಿ ಒಪ್ಪಿಕೊಂಡು ಬಂದ ಕ್ರುತಿಗಳಲ್ಲಿ ಇವು ಕೂಡ ಸೇರುತ್ತವೆ. ಪಾರಂಪರಿಕ ಬಾರತದಲ್ಲಿ ಬಾಶೆಯ ಅದ್ಯಯನ ಬಹು ವ್ಯಾಪಕವಾಗಿದ್ದದ್ದು ಮಾತ್ರವಲ್ಲದೆ ಹೆಚ್ಚು ಸೂಕ್ಶ್ಮವಾಗಿತ್ತು ಕೂಡ. ಹಲವು ಸೊಲ್ಲಗಟ್ಟು ಪರಂಪರೆಗಳು ಇದ್ದವು. ಹೀಗೆ ಇದ್ದ ಹಲವು ಸೊಲ್ಲಗಟ್ಟು ಪರಂಪರೆಗಳಲ್ಲಿ ಕನ್ನಡದ ಶಬ್ದಮಣಿದರ್ಪಣಂ ಮತ್ತು ತಮಿಳಿನ ತೊಲ್ಕಾಪ್ಪಿಯಮ್ ಇವು ಅಯಿಂದ್ರ ಸೊಲ್ಲಗಟ್ಟು ಪರಂಪರೆಗೆ ಸೇರುತ್ತವೆ ಎಂದು ವಿವರಿಸಲಾಗಿದೆ (ಬರ್ನೆಲ್.೧೯೮೪[೧೮೭೫]).

ಕಾರಕ ಮತ್ತು ವಿಬಕ್ತಿ ವಿವರಣೆಯನ್ನು ಗಮನಿಸಿದಾಗ ಇಡಿಯ ಬಾರತದ ಸಂದರ್ಬದಲ್ಲಿ ಸಾಮಾನ್ಯವಾಗಿ ಕಾಣುವ ಒಂದು ಸ್ತೂಲ ತಿಳುವಳಿಕೆ ಈ ಎರಡೂ

ಕ್ರುತಿಗಳಲ್ಲಿ ನೆಲೆಗೊಂಡಿರುವುದು ಸ್ಪಶ್ಟವಾಗಿ ಕಾಣುತ್ತದೆ. ಸಂಸ್ಕ್ರುತದಲ್ಲಿ ಒಟ್ಟು ಆರು ಕಾರಕ ಸಂಬಂದಗಳನ್ನು ಮತ್ತು ಏಳು ವಿಬಕ್ತಿಗಳನ್ನು ವಿವರಿಸಿದೆ.

ಸಂಸ್ಕ್ರುತದಲ್ಲಿ ವಾಕ್ಯದೊಳಗೆ ಪದಗಳ ನಡುವೆ ಇರುವ ಸಂಬಂದವನ್ನು ಕಾರಕ ಸಂಬಂದ ಎಂದು ಗುರುತಿಸಿದೆ. ಅವುಗಳ ಅಬಿವ್ಯಕ್ತಿಗೆ ಬಳಕೆಯಾಗುವ ರೂಪಗಳನ್ನು ಪ್ರತ್ಯಯ ಎಂದು ಗುರುತಿಸಿದೆ. ಸಂಸ್ಕ್ರುತದಲ್ಲಿ ವಿವರಿಸಿರುವ ಕಾರಕ ಮತ್ತು ವಿಬಕ್ತಿಗಳನ್ನು ಈ ಕೆಳಗೆ ಪಟ್ಟಿಯಲ್ಲಿ ತೋರಿಸಿದೆ.

| ಕಾರಕ | ವಿಬಕ್ತಿ |
|---|---|
| ಕರ್ತ್ರು | ಪ್ರತಮಾ |
| ಕರ್ಮ | ದ್ವಿತಿಯಾ |
| ಕರಣ | ತ್ರುತಿಯಾ |
| ಸಂಪ್ರದಾನ | ಚತುರ್ತಿ |
| ಅಪಾದಾನ | ಪಂಚಮಿ |
| – | ಶಶ್ಟಿ |
| ಅದಿಕರಣ | ಸಪ್ತಮಿ |

ಪಟ್ಟಿ ೧: ಸಂಸ್ಕ್ರುತದಲ್ಲಿ ವಿವರಿಸಿರುವ ಕಾರಕ ಮತ್ತು ವಿಬಕ್ತಿಗಳು

ಕಾರಕ ಸಂಬಂದ ಎಂದರೆ ಒಂದು ವಾಕ್ಯದಲ್ಲಿನ ನಾಮಪದ ಮತ್ತು ಕ್ರಿಯಾಪದಗಳ ನಡುವಿನ ಸಂಬಂದ. ವಾಕ್ಯದೊಳಗೆ ಇರುವ ಎರಡು ನಾಮಪದಗಳ ನಡುವಿನ ಸಂಬಂದವನ್ನು ಕಾರಕ ಎಂದು ವಿವರಿಸಲು ಸಾದ್ಯವಾಗದು. ಶಶ್ಟಿ ಎರಡು ನಾಮಪದಗಳ ನಡುವಿನ ಸಂಬಂದವನ್ನು ವಿವರಿಸುತ್ತದೆ. ಹೀಗಾಗಿ ಅದನ್ನು ಕಾರಕ ಎಂದು ಗುರುತಿಸುವುದಿಲ್ಲ. ನಾಮಪದಗಳ ನಡುವಿನ ಸಂಬಂದವನ್ನು ಕೂಡ ಕಾರಕ ಎಂದು ಪರಿಗಣಿಸಬೇಕೆಂಬ ವಾದ ಹಿಂದಿನಿಂದಲೂ ಒಂದೆಡೆ ಇದೆ.

ಶಬ್ದಮಣಿದರ್ಪಣಂ ಸಂಸ್ಕ್ರುತದಲ್ಲಿ ಬಂದಿರುವ ಈ ವಿವರಣೆಯನ್ನು ಚಾಚೂತಪ್ಪದೆ ಕಾಪಿ ಮಾಡಿಕೊಂಡು ವಿವರಿಸಿದೆ. ಇದರಲ್ಲಿ ಕಾರಕ ಸಂಬಂದಗಳ ಸಂದ, ಅವುಗಳ ಅನುಕ್ರಮ, ಕಾರಕ ಸಂಬಂದ ಮತ್ತು ವಿಬಕ್ತಿಗಳ ಹೆಸರು ಈ ಯಾವುದರಲ್ಲೂ ಬದಲಾವಣೆ ಇಲ್ಲ.

ತೊಲ್ಕಾಪ್ಪಿಯಂ ಸ್ತೂಲವಾಗಿ ಸಂಸ್ಕ್ರುತದ ವಿವರಣೆಯನ್ನು ಅನುಸರಿಸಿರುವುದು ಸ್ಪಶ್ಟ. ಆದರೆ ಒಳಗೆ ಕೆಲವು ಸಣ್ಣ ಬದಲಾವಣೆಗಳನ್ನು ಮಾಡಿಕೊಂಡಿದೆ. ಕಾರಕ ಸಂಬಂದಗಳ ಸಂಕೆ, ಅನುಕ್ರಮ ಇವುಗಳನ್ನು ಸಂಸ್ಕ್ರುತದಲ್ಲಿ ಇರುವಂತೆಯೆ

ಉಳಿಸಿಕೊಂಡಿದೆ. ಅವುಗಳನ್ನು ಹೆಸರಿಸುವಾಗ ಸ್ವಂತಿಕೆಯನ್ನು ತೋರಿಸಿದೆ. ಕಾರಕ ಎಂಬುದನ್ನು ಸ್ಥೂಲವಾಗಿ ವೆಟ್ರುಮಯ್ ಎಂದು, ವಿಬಕ್ತಿ ಎಂಬುದನ್ನು ಉರುಬು ಎಂದು ಸ್ಪಷ್ಟವಾಗಿ ಅನುವಾದಿಸಿ ಕೊಟ್ಟಿದೆ. ಕಾರಕ ಸಂಬಂದಗಳನ್ನು ಹೆಸರಿಸಿ ವಿವರಿಸುವ ಬದಲು ಅವುಗಳನ್ನು ವಿವರಿಸಿಕೊಂಡು ಹೋಗಿದೆ. ವಿಬಕ್ತಿಗಳನ್ನು ಕೇಂದ್ರವಾಗಿಟ್ಟುಕೊಂಡು ಕಾರಕಗಳನ್ನು ಹೆಸರಿಸುವ ಪ್ರಯತ್ನವನ್ನು ಮಾಡಿದೆ. ಸಂಸ್ಕೃತದ ಕರ್ತ್ರು, ಕರ್ಮ ಇವುಗಳನ್ನು ಪೆಯರ್ ವೆಟ್ರುಮಯ್, ಅಯ್ ವೆಟ್ರುಮಯ್ ಎಂದು ಮೊದಲಾಗಿ ವಿಬಕ್ತಿ ಕೇಂದ್ರಿತವಾಗಿ ವಿವರಿಸಿದೆ. ಸಂಸ್ಕೃತದ ದ್ವಿತಿಯಾ, ತ್ರುತಿಯಾ ಮೊದಲಾದ ಪದಗಳನ್ನು ಇರಂಡಾವದು, ಮೂಣಾವದು ಎಂದು ಮೊದಲಾಗಿ ಕೊಟ್ಟಿದೆ. ಈ ಕೆಳಗೆ ಪಟ್ಟಿ ೨ರಲ್ಲಿ ತೊಲ್ಕಾಪ್ಪಿಯಂ ಕೊಡುವ ಕಾರಕ ಸಂಬಂದಗಳ ಮತ್ತು ಪ್ರತ್ಯಯಗಳ ವಿವರಣೆಯನ್ನು ತೋರಿಸಿದೆ.

| ಕಾರಕ ಸಂಬಂಧ | ವಿಬಕ್ತಿ ವಿವರಣೆ |
|---|---|
| ಕರ್ತ್ರು | ಪೆಯಿರ್ ವೆಟ್ರುಮಯ್ |
| ಕರ್ಮ | ಇರಂಡಾಕುವದು ವೆಟ್ರುಮಯ್/ಅಯ್ ವೆಟ್ರುಮಯ್ |
| ಕರಣ | ಮೂಣಾಕುವದು ವೆಟ್ರುಮಯ್/ಒಡು ವೆಟ್ರುಮಯ್ |
| ಸಂಪ್ರದಾನ | ನಾಲಾಕುವದು ವೆಟ್ರುಮಯ್/ಕು ವೆಟ್ರುಮಯ್ |
| ಅಪಾದಾನ | ಅಯಿನ್ದಾಕುವದು ವೆಟ್ರುಮಯ್/ಇನ್ ವೆಟ್ರುಮಯ್ |
| – | ಆರಾಕುವದು ವೆಟ್ರುಮಯ್/ಅದು ವೆಟ್ರುಮಯ್ |
| ಅದಿಕರಣ | ಏಟಾಕುವದು ವೆಟ್ರುಮಯ್/ಕಣ್ ವೆಟ್ರುಮಯ್ |

ಪಟ್ಟಿ ೨: ತೊಲ್ಕಾಪ್ಪಿಯಂನಲ್ಲಿ ಕಾರಕ ಸಂಬಂಧ ಮತ್ತು ವಿಬಕ್ತಿಗಳ ವಿವರಣೆ

ಇನ್ನು ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂ ಕ್ರುತಿಗಳಲ್ಲಿ ವಿವರಿಸಿರುವ ಪ್ರತ್ಯಯಗಳನ್ನು ನೋಡಬಹುದು.

ಮೊದಲಿಗೆ ಶಬ್ದಮಣಿದರ್ಪಣಂ ಕೊಟ್ಟಿರುವ ಕನ್ನಡದ ವಿಬಕ್ತಿ ರೂಪಗಳ ಪಟ್ಟಿ ನಂತರ ತೊಲ್ಕಾಪ್ಪಿಯಂ ಕೊಟ್ಟಿರುವ ತಮಿಳಿನ ವಿಬಕ್ತಿ ರೂಪಗಳ ಪಟ್ಟಿಯನ್ನು ಕೊಟ್ಟಿದೆ.

| ಕಾರಕ | ವಿಬಕ್ತಿ ಹೆಸರು | ವಿಬಕ್ತಿ |
|---|---|---|
| ಕರ್ತ್ರು | ಪ್ರತಮಾ | –ಮ್ |
| ಕರ್ಮ | ದ್ವಿತಿಯಾ | –ಅಮ್ |
| ಕರಣ | ತ್ರುತಿಯಾ | –ಇಮ್, ಇಂದಮ್, ಇಂದೆ |
| ಸಂಪ್ರದಾನ | ಚತುರ್ತಿ | –ಕೆ |

| | | |
|---|---|---|
| ಅಪಾದಾನ | ಪಂಚಮಿ | –ಅತ್,–ಅತ್ತಣಿಂ,–ಅತ್ತಣಿಂದಂ,–ಅತ್ತಣಿಂದೆ |
| – | ಶಷ್ಠಿ | –ಅ,–ಆ,–ಅದು |
| ಅದಿಕರಣ | ಸಪ್ತಮಿ | –ಅಲ್,–ಅಲ್ಲಿ,–ಒಳ್,–ಎ,–ಇ,–ಅಣ್ |

ಪಟ್ಟಿ ೩: ಶಬ್ದಮಣಿದರ್ಪಣಂ ವಿವರಿಸಿರುವ ಕನ್ನಡದ ವಿಬಕ್ತಿಗಳು

| ಕಾರಕ ಸಂಬಂದ | ತಮಿಳಿನ ವಿವರಣೆ | ವಿಬಕ್ತಿ ರೂಪ |
|---|---|---|
| ಕರ್ತ್ರು | ಪೆಯಿರ್ ವೆಟ್ರುಮಯ್ | ಪೆಯಿರ್ |
| ಕರ್ಮ | ಇರಂಡಾಕುವದು ವೆಟ್ರುಮಯ್/ಅಯ್ ವೆಟ್ರುಮಯ್ | –ಅಯ್ |
| ಕರಣ | ಮೂಣಾಕುವದು ವೆಟ್ರುಮಯ್/ಒಡು ವೆಟ್ರುಮಯ್ | –ಒಡು |
| ಸಂಪ್ರದಾನ | ನಾಲಾಕುವದು ವೆಟ್ರುಮಯ್ / ಕು ವೆಟ್ರುಮಯ್ | –ಕು |
| ಅಪಾದಾನ | ಅಯಿನ್ದಾಕುವದು ವೆಟ್ರುಮಯ್/ಇನ್ ವೆಟ್ರುಮಯ್ | –ಇನ್ |
| – | ಆರಾಕುವದು ವೆಟ್ರುಮಯ್ / ಅದು ವೆಟ್ರುಮಯ್ | –ಅದು |
| ಅದಿಕರಣ | ಏಟಾಕುವದು ವೆಟ್ರುಮಯ್/ ಕಣ್ ವೆಟ್ರುಮಯ್, | ಕಣ್, ಕಾಲ್, ಪುರಂ, ಅಗಂ, ಉಳ್, ಉಳಯ್, ಕೀಟ್,ಮೇಲ್, ಪಿನ್, ಕಾರ್, ಅಯಲ್, ಪುದಯ್, ತೆವಕಯ್, ಮುನ್, ಇಡಯ್, ಕಡಯ್, ತಲಯ್, ವಲಂ, ಇಡಂ |

ಪಟ್ಟಿ ೪: ತೊಲ್ಕಾಪ್ಪಿಯಂ ವಿವರಿಸಿರುವ ತಮಿಳಿನ ವಿಬಕ್ತಿಗಳು

ವಿವಿದ ಕಾರಕಗಳಿಗೆ ಎರಡೂ ಬಾಶೆಗಳಲ್ಲಿ ವಿವರಿಸಿರುವ ಪ್ರತ್ಯಯಗಳನ್ನು ಪರಸ್ಪರ ತವ್ಲನಿಕವಾಗಿ ಇಲ್ಲಿ ನೋಡಿದೆ. ಒಂದು ನಿರ್ದಿಶ್ಟ ಕಾರಕ ಸಂಬಂದಕ್ಕೆ ಪರಸ್ಪರ ಬಾಶೆಯಲ್ಲಿ ಬಳಕೆಯಲ್ಲಿರುವ ಪ್ರತ್ಯಯಗಳನ್ನು, ಒಂದು ನಿರ್ದಿಶ್ಟ ಪ್ರತ್ಯಯ ಪರಸ್ಪರ ಮಾತಿನಲ್ಲಿ ಬಳಕೆಯಾಗುವ ಕಾರಕ ಸಂಬಂದಗಳನ್ನು ಹೋಲಿಸಿ ನೋಡಿದೆ.

**ಮಾಡುಗ ಸಂಬಂದ (ಕರ್ತ್ರು):** ಕೇಶಿರಾಜ ಕನ್ನಡದಾಗ ಕರ್ತ್ರುಕಾರಕಕ್ಕೆ –ಮ್ ಎಂಬ ಪ್ರತ್ಯಯವನ್ನು ಹೇಳಿ, ಅದಕ್ಕೆ ಹಲವು ನಿರ್ಬಂದಗಳನ್ನು ವಿವರಿಸುತ್ತಾನೆ. '–ಅ ಕೊನೆ ನಾಮಪದಗಳು ಮಾತ್ರ –ಮ್ ಪ್ರತ್ಯಯವನ್ನು ಪಡೆಯುತ್ತವೆ, –ಅ ಕೊನೆ ಪುಲ್ಲಿಂಗ ನಾಮಪದಗಳು ಸ್ವರಮೊದಲ ಪದವನ್ನು ಪಡೆಯುವಾಗ ಈ ಪ್ರತ್ಯಯ ಬಿದ್ದುಹೋಗುತ್ತದೆ. –ಅ ಕೊನೆ ನಾಮಪದವುಳಿದು ಬೇರೆಯವುಗಳಿಗೆ ಈ ಪ್ರತ್ಯಯ ಹತ್ತುವುದಿಲ್ಲ' ಎಂದು ವಿವರಿಸುತ್ತಾನೆ. ಈ ವಿವರಣೆಯಲ್ಲಿ ಹಲವು ಸಮಸ್ಯೆಗಳು ಇರುವುದನ್ನು ಆದುನಿಕರು ತೋರಿಸಿದ್ದಾರೆ. ಮೊದಲನೆಯದಾಗಿ ಕೇಶಿರಾಜ ವಿವರಿಸಲು ಪ್ರಯತ್ನಿಸುತ್ತಿರುವ ಪ್ರತ್ಯಯ /ನ್/, ಬದಲಾಗಿ /ಮ್/ ಅಲ್ಲ. ಹಳೆಗನ್ನಡದಲ್ಲಿ ಸೊನ್ನೆಯನ್ನು ಬಳಸುವುದಕ್ಕೆ ಮೊದಲು ಮಾಡಿದಾಗಿನಿಂದ ನಾಸಿಕ ದ್ವನಿಗಳನ್ನು ಸೊನ್ನೆಯ ಮೂಲಕ ಬರೆಯುವುದು ಮೊದಲಾಗಿದೆ. ಹೆಚ್ಚು ಬಾರಿ /ಮ್/ ನಾಸಿಕ ದ್ವನಿಯ ಬಳಕೆ ಇರುವುದರಿಂದ ಪದಗಳ ಜೊತೆಯಲ್ಲಿ ಇರುವ /ನ್/ ದ್ವನಿಯನ್ನೂ ಕೂಡ ಕೇಶಿರಾಜ /ಮ್/ ಎಂದು ಅರ್ತವಿಸಿಕೊಂಡಿದ್ದಾನೆ. ಎರಡನೆಯ ಸಮಸ್ಯೆ ಎಂದರೆ, ಕೇಶಿರಾಜ ವಿವರಿಸುತ್ತಿರುವ ಈ ದ್ವನಿ ನಾಮಪದದ ಬಾಗವೆ ಹೊರತು ಅದಕ್ಕೆ ಬಂದು ಸೇರುವ ಒಂದು ಪ್ರತ್ಯಯ ಅಲ್ಲ. ಹಳೆಗನ್ನಡದಾಗ ಬಹುತೇಕ ನಾಮಪದಗಳು ವ್ಯಂಜನಕೊನೆ ಆಗಿದ್ದವು. ಕನ್ನಡದಾಗ ಕರ್ತ್ರುವಿನ ಅಬಿವ್ಯಕ್ತಿಗೆ ಯಾವುದೆ ಪ್ರತ್ಯಯದ ಅವಶ್ಯಕತೆ ಇಲ್ಲ. ನಾಮಪದ ತನ್ನಶ್ಟಕ್ಕೆ ಮಾಡುಗ ಸಂಬಂದವನ್ನು ಅಬಿವ್ಯಕ್ತಪಡಿಸುತ್ತದೆ.

ತೊಲ್ಕಾಪ್ಪಿಯಂ ಕ್ರುತಿಯು ಮಾಡುಗ ಸಂಬಂದಕ್ಕೆ ಯಾವುದೆ ಪ್ರತ್ಯಯ ಇಲ್ಲ ಎನ್ನುವುದನ್ನು ಸ್ಪಶ್ಟವಾಗಿ ಗುರುತಿಸುತ್ತದೆ. ನಾಮಪದ ತನ್ನಶ್ಟಕ್ಕೆ ನಿಲ್ಲುತ್ತದೆ ಎಂದು ವಿವರಿಸುವುದು ಮಾತ್ರವಲ್ಲದೆ ಈ ಸಂಬಂದವನ್ನು ಪೆಯಿರ್ 'ಹೆಸರು' ಎಂದೆ ವಿವರಿಸುತ್ತದೆ.

ಕನ್ನಡ ಮತ್ತು ತಮಿಳು ಎರಡರಲ್ಲಿಯೂ ಮಾಡುಗ ಸಂಬಂದಕ್ಕೆ ಪ್ರತ್ಯೇಕವಾದ ಪ್ರತ್ಯಯ ಇಲ್ಲ.

**ನೆಲೆ ಸಂಬಂದ (ಅದಿಕರಣ):** ಶಬ್ದಮಣಿದರ್ಪಣಂ ಸೂತ್ರದಲ್ಲಿ –ಒಳ್ ಎಂಬ ಪ್ರತ್ಯಯವನ್ನು ಕೊಟ್ಟು, ವಿವರಣೆಯಲ್ಲಿ ಹಲವು ಪ್ರತ್ಯಯಗಳನ್ನು ವಿವರಿಸಿದೆ. ಅವುಗಳು ಹೀಗಿವೆ,

–ಒಳ್, –ಅಲ್, –ಅಲ್ಲಿ, –ಅಣ್, –ಇ, –ಎ

ಇಲ್ಲಿ ಪ್ರತಿಯೊಂದು ಪ್ರತ್ಯಯದ ಬೆಳವಣಿಗೆಯನ್ನು ಮೊದಲು ಗಮನಿಸಬಹುದು.

ನಡುತೋರುಗಮೂಲ *–ಉ/*–ಊ>–*–ಉಳ್>–ಒಳ್

| | |
|---|---|
| ದೂರತೋರುಗಮೂಲ | *–ಅ/*–ಆ>*–ಅಲ್ |
| ದೂರತೋರುಗಮೂಲ | *–ಅ/*–ಆ>*–ಅಲ್–ಅಲ್ಲಿ |
| ದೂರತೋರುಗಮೂಲ | *–ಅ/*–ಆ>*–ಅಣ್ |
| ಸಮೀಪತೋರುಗಮೂಲ | *–ಇ |
| ಸಮೀಪತೋರುಗಮೂಲ | *–ಇ/*–ಈ>–ಎ |

*–ಅಲ್ ಇದು ದಿಗ್ವಾಚಿಗಳ ಮೇಲೆ ಹತ್ತುವಾಗ –ಅಣ್ ಎಂದಾಗುತ್ತದೆ ಎಂಬ ವಿವರಣೆಯನ್ನು ಶಬ್ದಮಣಿದರ್ಪಣಂ ಕೊಡುತ್ತದೆ.

ತಮಿಳಿನ ತೊಲ್ಕಾಪ್ಪಿಯಂ *–ಉಳ್ ಪ್ರತ್ಯಯವನ್ನು ನೆಲೆ ಕಾರಕ ಸಂಬಂದಕ್ಕೆ ವಿವರಿಸುತ್ತದೆ. *–ಅಲ್ ಇದರ ಉದ್ದಕ್ಕರ ರೂಪ *–ಆಲ್ ಇದು ತಮಿಳಿನಲ್ಲಿ ಸಾದನ ಸಂಬಂದಕ್ಕೆ ಬಳಕೆ ಆಗುತ್ತದೆ.

ತೊಲ್ಕಾಪ್ಪಿಯಂ ತಮಿಳಿನಲ್ಲಿ ಹತ್ತೊಂಬತ್ತು ರೂಪಗಳನ್ನು ನೆಲೆ ಸಂಬಂದಕ್ಕೆ ವಿವರಿಸುತ್ತದೆ. ಈ ಪಟ್ಟಿಯಲ್ಲಿ ಮೊದಲನೆಯದಾದ ಕಣ್ ಪ್ರತ್ಯಯವನ್ನು ವಿಬಕ್ತಿಯನ್ನು ಹೆಸರಿಸುವುದಕ್ಕೆ ಬಳಸಿದೆ. ಈ ಪಟ್ಟಿಯಲ್ಲಿ ಬಹುತೇಕ ಪದೋತ್ತರ ರೂಪಗಳು ಇವೆ. ಹೀಗೆ ಕಾರಕ ಸಂಬಂದ ಅಬಿವ್ಯಕ್ತಿಗೆ ಪದೋತ್ತರ ರೂಪಗಳನ್ನು ಗುರುತಿಸುವ ಪ್ರಯತ್ನ ಜಗತ್ತಿನಲ್ಲಿಯೆ ಮೊದಮೊದಲಿನದು ಎಂದೆನ್ನಬಹುದು. ತೊಲ್ಕಾಪ್ಪಿಯಂ ಗುರುತಿಸಿರುವ ರೂಪಗಳನ್ನು ಇಲ್ಲಿ ಪಟ್ಟಿ ಮಾಡಿದೆ.

ಕಣ್, ಕಾಲ್, ಪುರಂ, ಅಗಂ, ಉಳ್, ಉಳಯ್, ಕೀಟ್, ಮೇಲ್, ಪಿನ್, ಚಾರ್, ಅಯಲ್, ಪುದಯ್, ತೆವಗಯ್, ಮುನ್, ಇಡಯ್, ಕಡಯ್, ತಲಯ್, ವಲಂ, ಇಡಂ.

ಇವುಗಳಲ್ಲಿ ಕೆಲವು ಬಳಕೆಯಲ್ಲಿ ಉಳಿದಿವೆ, ಇನ್ನು ಕೆಲವು ಉಳಿದಿಲ್ಲ. ಇವುಗಳಲ್ಲಿ *–ಅಗಂ, *–ಉಳ್ ಮೊದಲಾದವು ಪ್ರತ್ಯಯಗಳಂತೆ ಬಳಕೆಯಾಗುತ್ತಿವೆ. ಉಳಿದವು ಪದೋತ್ತರ ರೂಪಗಳು. ಈ ಎರಡೂ ಪ್ರತ್ಯಯಗಳು ಕನ್ನಡದಾಗ ವಿವಿದ ರೂಪಗಳಲ್ಲಿ ಬೇರೆ ಬೇರೆ ಕಾರಕ ಸಂಬಂದಗಳಿಗೆ ಬಳಕೆ ಆಗುತ್ತವೆ. *–ಉಳ್ ಇದು ಕನ್ನಡದಾಗ ಒಂದು ನೆಲೆ ಸಂಬಂದದ ಪ್ರತ್ಯಯ. ಇದರ ಬೆಳೆದ ರೂಪ –ಒಳ್ ಇದನ್ನು ಕೇಶಿರಾಜ ವಿವರಿಸುತ್ತಾನೆ. ಅದರಂತೆ –ಅಗಂ ಮತ್ತು ಅದರ ಬೆಳೆದ ಹಲವು ರೂಪಗಳು (–ಅಗ, –ಅಗೆ, –ಆಗ, –ಗೆ) ನೆಲೆ, ಗುರಿ ಮೊದಲಾದ ಸಂಬಂದಗಳನ್ನು ಅಬಿವ್ಯಕ್ತಿಸುತ್ತವೆ. ಉಳಿದಂತೆ ತೊಲ್ಕಾಪ್ಪಿಯಂ ಪಟ್ಟಿ ಮಾಡಿದ ಹಲವು ಪದೋತ್ತರ ರೂಪಗಳು ಕನ್ನಡದಲ್ಲಿಯೂ ಪದೋತ್ತರ ರೂಪಗಳಾಗಿ ನೆಲೆ ಸಂಬಂದಕ್ಕೆ ಬಳಕೆ ಆಗುತ್ತವೆ. ಇವುಗಳನ್ನು ಕೆಳಗೆ ಪಟ್ಟಿ ಮಾಡಿದೆ.

ಪುರಂ>ಹೊರಗೆ, ಉಳಯ್>ಒಳಗೆ, (ಇದು ಪ್ರತ್ಯಯ *–ಉಳ್‌ದಿಂದ ಬಿನ್ನವಾಗಿರುವ ನಾಮಪದ), ಕೀಟ್>ಕೆಳಗೆ, ಮೇಲ್>ಮೇಲೆ, ಪಿನ್>ಹಿಂದೆ, ಮುನ್>ಮುಂದೆ, ಕಡಯ್>ಕಡೆ, ಇಡಂ>ಎಡೆ.

**ಗುರಿ ಸಂಬಂದ (ಸಂಪ್ರದಾನ):** ಗುರಿಯನ್ನು ಹೇಳುವುದಕ್ಕೆ ಬಳಕೆಯಾಗುವ ಪ್ರತ್ಯಯ ದ್ರಾವಿಡ ಮನೆತನದ ಬಹುತೇಕ ಮಾತುಗಳಲ್ಲಿ ಒಂದೆ ಆಗಿದೆ.

ಕೇಶಿರಾಜನು ಸೂತ್ರದಲ್ಲಿ –ಕೆ ಇದನ್ನು ಮತ್ತು ವಿವರಣೆಯಲ್ಲಿ –ಕ್ಕೆ, –ಗೆ, –ಗ್ಗೆ ಮತ್ತು –ಂಗೆ ರೂಪಗಳನ್ನು ವಿವರಿಸಿದ್ದಾನೆ. /ಅ/ಕೊನೆ ನಪುಂಸಕ ನಾಮಪದಗಳ ಮೇಲೆ ಬಂದಾಗ ಈ ಪ್ರತ್ಯಯ ಒತ್ತಕ್ಕರ ರೂಪವಾಗಿ ಬೆಳೆಯುತ್ತದೆ ಎಂದು ವಿವರಿಸುತ್ತಾನೆ. ಸ್ವರಕೊನೆ ನಾಮಪದಗಳು –ಗೆ ರೂಪವನ್ನು ಪಡೆದುಕೊಳ್ಳುತ್ತವೆ ಮತ್ತು ಅವುಗಳಲ್ಲಿ /ಅ/ಕೊನೆ ನಾಮಪದಗಳ ಮೇಲೆ ಬಿಂದು ಆದೇಶವಾಗಿ ಬರುತ್ತದೆ ಎಂದು ವಿವರಿಸುತ್ತಾನೆ. ವಾಸ್ತವದಲ್ಲಿ ಈ ಮೇಲೆ ಮಾತನಾಡಿದಂತೆ ಕೇಶಿರಾಜ ಇಲ್ಲಿ ಆದೇಶ ಎಂದು ವಿವರಿಸುತ್ತಿರುವ ಬಿಂದು ನಾಮಪದದ ಬಾಗವಾಗಿದೆ. ಅದು ಆದೇಶವಾಗಿ ಬರುವುದಿಲ್ಲ. ಹಾಗಾಗಿ ಕೇಶಿರಾಜ ಹೇಳುವ ಗುರಿ ಸಂಬಂದದ ಬಿಂದುಸಹಿತ ರೂಪವನ್ನು ಪರಿಗಣನೆಯಿಂದ ಬಿಡಬಹುದು. ಈ ರೂಪಗಳು *–ಅಕನ್ ಎಂಬ ನಾಮಪದದಿಂದ ಬೆಳೆದಿವೆ. ಈ ಪ್ರತ್ಯಯಗಳ ಬೆಳವಣಿಗೆಯನ್ನು ಈ ಕೆಳಗೆ ತೋರಿಸಿದೆ.

*–ಅಕನ್>–ಅಕೆ>–ಕೆ

*–ಅಕನ್>–ಅಕೆ>–ಅಕ್ಕೆ>–ಕ್ಕೆ

*–ಅಕನ್>ಅಕೆ>–ಅಗೆ>–ಗೆ

*–ಅಕನ್>ಅಕೆ>–ಅಗೆ>–ಅಗ್ಗೆ>–ಗ್ಗೆ

–ಗೆ ಮತ್ತು –ಗ್ಗೆ ರೂಪಗಳ ಇನ್ನೊಂದು ಬೆಳವಣಿಗೆ ಸಾದ್ಯತೆಯನ್ನು ಇಲ್ಲಿ ತೋರಿಸಿದೆ. ಅಂದರೆ, ಈ ರೂಪ ಎರಡು ರೀತಿಯಲ್ಲಿ ಬೆಳೆದಿರಬಹುದು.

*–ಅಕನ್>ಅಗನ್>–ಅಗೆ>–ಗೆ

*–ಅಕನ್>ಅಗನ್>–ಅಗೆ>–ಅಗ್ಗೆ>–ಗ್ಗೆ

ತೊಲ್ಕಾಪ್ಪಿಯಂ ತಮಿಳಿನಲ್ಲಿ ಗುರಿ ಸಂಬಂದಕ್ಕೆ –ಕು ರೂಪವನ್ನು ವಿವರಿಸುತ್ತದೆ. ಕನ್ನಡದಲ್ಲಿ /ಎ/ಕೊನೆ ರೂಪವಾಗಿ ಬಳಕೆಯಾಗುವ ಪ್ರತ್ಯಯ ತಮಿಳಿನಲ್ಲಿ /ಉ/ಕೊನೆ ರೂಪವಾಗಿ ಬಳಕೆಯಾಗುತ್ತದೆ. ಇದರ ಬೆಳವಣಿಗೆಯನ್ನು ಈ ಕೆಳಗೆ ತೋರಿಸಿದೆ.

*–ಅಕನ್>–ಅಕು>–ಕು

**ಸಾದನ ಸಂಬಂದ (ಕರಣ):** ಶಬ್ದಮಣಿದರ್ಪಣಂ ತನ್ನ ಸೂತ್ರದಲ್ಲಿ *–ಇಂ ಸಾದನ ಸಂಬಂದ ಪ್ರತ್ಯಯ ಎಂದು ವಿವರಿಸುತ್ತದೆ ಮತ್ತು –ಇನ್ದಂ, –ಇನ್ದೆ ಮತ್ತು –ಎ

ಇವುಗಳನ್ನು ವಿವರಣೆಯಲ್ಲಿ ಒದಗಿಸುತ್ತದೆ. –ಇಂ ಮತ್ತು –ಇನ್ದಂ ಎಂದು ಕೇಶಿರಾಜ ಗುರುತಿಸುವ ರೂಪಗಳು ಕ್ರಮವಾಗಿ *–ನ್ ಮತ್ತು –ಇನ್ದನ್ ಎಂದಾಗಿವೆ. ಈ ಮೇಲೆ ಪದಕೊನೆಯ ವ್ಯಂಜನ /ನ್/ ದ್ವನಿಯನ್ನು /ಮ್/ ಎಂದು ತಪ್ಪಾಗಿ ಗುರುತಿಸಿರುವುದನ್ನು ಚರ್ಚಿಸಿದೆ. ಇವುಗಳಲ್ಲಿ *–ಇನ್ ಇದು ಸಮೀಪತೋರುಗದಿಂದ ಬೆಳೆದ ರೂಪ, –ಎ ಇದು ಸಮೀಪತೋರುಗದ ಒಂಟಿದ್ವನಿ ರೂಪ *–ಇ/*–ಈ ಇದು /ಇ/>/ಎ/ ದ್ವನಿ ಬದಲಾವಣೆ ಪ್ರಕ್ರಿಯೆಯಲ್ಲಿ ––ಎ ಎಂದು ಬೆಳೆದಿದೆ. ಈ ಎರಡು ರೂಪಗಳಾದರೆ ಉಳಿದ, –ಇನ್ದನ್ ಮತ್ತು –ಇನ್ದೆ ಇವು ರಚನೆಗಳಾಗಿವೆ. ಇವುಗಳಲ್ಲಿ ಒಂದಕ್ಕಿಂತ ಹೆಚ್ಚು ರೂಪಗಳು ಸೇರಿಕೊಂಡು ಕೂಡುಪ್ರತ್ಯಯಗಳಾಗಿ ಬೆಳೆದಿವೆ. ಈ ಕೆಳಗೆ ಮೊದಲು ವಿಬಕ್ತಿ ರೂಪಗಳ ಬೆಳವಣಿಗೆ ಅದರೊಂದಿಗೆ ಕೂಡುಪ್ರತ್ಯಯಗಳ ರಚನೆ ಮತ್ತು ಬೆಳವಣಿಗೆ ಇವುಗಳನ್ನು ತೋರಿಸಿದೆ.

*–ಇ/*–ಈ>–ಎ

*–ಇ/*–ಈ>*–ಇನ್

*–ಇ/*–ಈ>–*ಇನ್+–ಅದನ್<*–ಅತನ್=*–ಇನ್ತನ್>–ಇನ್ದನ್

*–ಇ/*–ಈ>–*ಇನ್+–ಅದನ್<*–ಅತನ್=*–ಇನ್ತನ್>–ಇನ್ದನ್>ಇನ್ದ+–ಎ=–ಇನ್ದೆ

*–ಇನ್ ರೂಪವು ತಮಿಳಿನಲ್ಲಿ ಬಿಡುಗಡೆಯನ್ನು ಹೇಳುವುದಕ್ಕೆ ಬಳಕೆಯಾಗುತ್ತದೆ ಎಂದು ತೊಲ್ಕಾಪ್ಪಿಯಂ ವಿವರಿಸಿದೆ.

ತೊಲ್ಕಾಪ್ಪಿಯಂ ಇದನ್ನು –ಒಡು ವೆಟ್ರುಮಯ್ ಎಂದು ಕರೆದಿದೆ. –ಒಡು ಇದು ಹೆಚ್ಚಾಗಿ ಸಹತ್ವಸೂಚಕವಾಗಿ ಬಳಕೆಯಾಗುತ್ತದೆ. ಇಂದಿನ ತಮಿಳಿನಲ್ಲಿ ಇದು ವಿಶಿಶ್ಟವಾಗಿ ಸಹತ್ವವನ್ನು ಹೇಳುವುದಕ್ಕೆ ಬಳಕೆಯಾಗುತ್ತದೆ. ಆದರೆ, ಸಂಗಂ ಸಾಹಿತ್ಯದಲ್ಲಿ ಈ ಪ್ರತ್ಯಯ ಸಾದನ ಸಂಬಂದವನ್ನು ಹೇಳುವುದಕ್ಕೂ ಬಳಕೆಯಾಗಿದೆ ಎಂಬ ವಿವರಣೆ ಇವೆ. ಹಳೆಯ ತಮಿಳಿನಲ್ಲಿ *–ಆನ್ ಎಂಬುದು ಸಂಬಂದವನ್ನು ಅಬಿವ್ಯಕ್ತಿಸುವುದಕ್ಕೆ ಬಳಕೆ ಆಗಿದೆ. ಇಂದಿನ ತಮಿಳಿನಲ್ಲಿ *–ಆನ್ ಮತ್ತು *–ಆಲ್ ಎರಡೂ ಬಳಕೆ ಆಗುತ್ತವೆ.

ತೊಲ್ಕಾಪ್ಪಿಯಂ ವಿವರಿಸುವ –ಒಡು ಪ್ರತ್ಯಯದ ಮೂಲ *ಉಡನ್/*ಉಡಯ್ ಎಂದಾಗಿದೆ. ಇದು ಮುಂದೆ /ಉ/>/ಒ/ ಬೆಳವಣಿಗೆ ಪ್ರಕ್ರಿಯೆಯಲ್ಲಿ –ಒಡನ್ ಎಂದು ಬೆಳೆದು ನಂತರ ಸ್ವರಕೊನೆಯಾಗಿ –ಒಡು ಎಂದು ಬೆಳೆದಿದೆ. ಇದರ ಬೆಳವಣಿಗೆಯನ್ನು ಈ ಕೆಳಗೆ ತೋರಿಸಿದೆ.

*ಉಡನ್/*ಉಡಯ್>ಒಡನ್>–ಒಡು

ಇದರ ಸಂವಾದಿ ರೂಪ ಒಡನ್, ಒಡನೆ ಎನ್ನುವ ರೂಪಗಳು ಕನ್ನಡದಲ್ಲಿ ಸಹತ್ವವನ್ನು ಹೇಳುವುದಕ್ಕೆ ಬಳಕೆಯಾಗುತ್ತವೆ. ಆದರೆ, ಕನ್ನಡದಲ್ಲಿ ಇವು ಪದೋತ್ತರ ರೂಪದಂತೆ ಬಳಕೆಯಾಗುವುದನ್ನು ಕಾಣಬಹುದು. ಸಹತ್ವವನ್ನು ಸೂಚಿಸುವುದಕ್ಕೆ ಬೇರೆ ಪ್ರತ್ಯಯಗಳನ್ನು ಗುರುತಿಸುವ ಕೆಲಸವನ್ನು ಕೇಶಿರಾಜ ಮಾಡಿಲ್ಲ.

**ಆಗುಗ (ಕರ್ಮ) ಸಂಬಂದ:** –ಅಂ ಮತ್ತು –ಅನ್ ಇವು ಕನ್ನಡದ ಆಗುಗ ಸಂಬಂದದ ಪ್ರತ್ಯಯಗಳು ಎಂದು ಕೇಶಿರಾಜ ವಿವರಿಸಿದ್ದಾನೆ. ಈ ಮೇಲೆ ಮಾತನಾಡಿದಂತೆ ನಾಮಪದಗಳ ಕೊನೆಯ ವ್ಯಂಜನ /ನ್/ ದ್ವನಿಯನ್ನು /ಮ್/ ಎಂದು ತಪ್ಪಾಗಿ ಗುರುತಿಸಿರುವುದರಿಂದ ಆಗುಗ ಸಂಬಂದಕ್ಕೆ ಎರಡು ರೂಪಗಳನ್ನು ಕೇಶಿರಾಜ ವಿವರಿಸಬೇಕಾಯಿತು. ಹಾಗಾಗಿ –ಅಂ ಮತ್ತು –ಅನ್ ಎಂದು ವಿವರಿಸಿರುವ ಎರಡು ರೂಪಗಳು ಒಂದೆ ಎಂಬುದನ್ನು ತಿಳಿದುಕೊಳ್ಳಬಹುದು. *–ಅನ್ ಇದು ಮೂಲ ದೂರತೋರುಗ ರೂಪ *–ಅ/*–ಆ ಇದರಿಂದ ಬೆಳೆದಿದೆ. ಇದರ ಬೆಳವಣಿಗೆಯನ್ನು ಇಲ್ಲಿ ತೋರಿಸಿದೆ.

*–ಅ/*–ಆ>*–ಅನ್

ಉದ್ದಕ್ಕರ ಮೊದಲ ರೂಪ *–ಆನ್ ತಮಿಳಿನಲ್ಲಿ ಸಾದನ ಸಂಬಂದಕ್ಕೆ ಬಳಕೆಯಾಗುತ್ತದೆ.

ತೊಲ್ಕಾಪ್ಪಿಯಂ ಆಗುಗ ಸಂಬಂದದ ಅಬಿವ್ಯಕ್ತಿಗೆ –ಅಯ್ ರೂಪ ಬಳಕೆಯಾಗುತ್ತದೆ ಎಂದು ವಿವರಿಸಿದೆ. ಈ ರೂಪವೂ ದೂರತೋರುಗದಿಂದ ಬೆಳೆದಿದೆ. ಇದರ ಬೆಳವಣಿಗೆಯನ್ನು ಈ ಕೆಳಗೆ ನೋಡಬಹುದು.

*–ಅ/*–ಆ>*–ಅಯ್

ಈ ರೂಪ ಕನ್ನಡದಲ್ಲಿ ಬಳಕೆ ಇಲ್ಲ, ಅದರೊಂದಿಗೆ ದ್ರಾವಿಡದ ಬೇರೆ ಯಾವುದೆ ಮನೆತನದಲ್ಲಿಯೂ ಬಳಕೆಯಲ್ಲಿರುವುದು ಕಾಣುವುದಿಲ್ಲ.

**ಬಿಡುಗಡೆ (ಅಪಾದಾನ) ಸಂಬಂದ:** ಕನ್ನಡದಲ್ಲಿ ಬಿಡುಗಡೆ ಸಂಬಂದದ ಪ್ರತ್ಯಯದ ಬಗೆಗೆ ಸಾಕಶ್ಟು ಚರ್ಚೆ ಇದೆ. –ಅತ್ ಎಂಬ ರೂಪವನ್ನು ಸೂತ್ರದಲ್ಲಿ ವಿವರಿಸಿದ ಕೇಶಿರಾಜ –ಎ ಹೊರತಾಗಿ ಉಳಿದ ಸಾದನ ಸಂಬಂದದ ಪ್ರತ್ಯಯಗಳು ಬಿಡುಗಡೆಯನ್ನು ಹೇಳುವುದಕ್ಕೆ ಬಳಕೆಯಾಗುತ್ತವೆ ಎಂದು ಹೇಳಿದ್ದಾನೆ. ಅಂದರೆ ಒಟ್ಟು ನಾಲ್ಕು ರೂಪಗಳನ್ನು ಬಿಡುಗಡೆಯನ್ನು ಹೇಳುವುದಕ್ಕೆ ವಿವರಿಸಿದ್ದಾನೆ. –ಅತ್, ಅತ್ತಣಿಂ, ಅತ್ತಣಿಂದಂ ಮತ್ತು ಅತ್ತಣಿಂದೆ. ಇವುಗಳಲ್ಲಿ *–ಅತ್ ಇದು ಮೂಲ ದೂರತೋರುಗದಿಂದ ಬೆಳೆದಿದೆ. ಉಳಿದವು ಕೂಡುಪ್ರತ್ಯಯಗಳಾಗಿವೆ. *–ಅತ್ ಎಂಬ ರೂಪಕ್ಕೆ –ಅಣ್ ಎಂಬ ರೂಪ ಸೇರಿ ನಂತರ ವಿವಿದ ಸಾದನ ಸಂಬಂದದ ಪ್ರತ್ಯಯಗಳು, –ಇನ್, –ಇನ್ದನ್, –ಇನ್ದೆ ಸೇರಿಕೊಂಡು ಈ ಮೇಲಿನ ರಚನೆಗಳು ಆಗಿವೆ. *–ಅತ್ ಇದರ ಬೆಳವಣಿಗೆಯನ್ನು ಮತ್ತು ಇತರ ಕೂಡುಪ್ರತ್ಯಯಗಳ ರಚನೆಯನ್ನು ಇಲ್ಲಿ ತೋರಿಸಿದೆ.

*–ಅ/*–ಆ>*–ಅತ್

*–ಅ/*–ಆ>*–ಅತ್+–ಅಣ್=ಅತ್ತಣ್+*–ಇನ್(<*–ಇ/*–ಈ)=ಅತ್ತಣಿಂ

*–ಅ/*–ಆ>*–ಅತ್+–ಅಣ್=ಅತ್ತಣ್+*–ಇನ್ದನ್<*–ಇನ್ತನ್<(*–ಇ/*–ಈ>*–ಇನ್+–ಅದನ್<*–ಅತನ್)=ಅತ್ತಣಿನ್ದನ್

*–ಅ/*–ಆ>*–ಅತ್+–ಅಣ್=ಅತ್ತಣ್+*–ಇನ್ದನ್<*–ಇನ್ತನ್<(*–ಇ/*–ಈ>*–ಇನ್+–ಅದನ್<*–ಅತನ್) =ಅತ್ತಣಿನ್ದನ್+–ಎ=ಅತ್ತಣಿನ್ದೆ

ವಾಸ್ತವದಲ್ಲಿ *–ಇನ್ ಎಂಬ ರೂಪವೆ ಹಳಗನ್ನಡದಾಗ ಬಿಡುಗಡೆಯನ್ನು ಹೇಳುವುದಕ್ಕೆ ಹೆಚ್ಚು ಬಳಕೆಯಾಗುತ್ತದೆ. ಇದೆ ರೂಪ ತೊಲ್ಕಾಪ್ಪಿಯಂ ವಿವರಿಸುವ ಬಿಡುಗಡೆ ಸಂಬಂದದ ಪ್ರತ್ಯಯವಾಗಿದೆ.

ತೊಲ್ಕಾಪ್ಪಿಯಂ –ಇನ್ ಇದನ್ನು ಬಿಡುಗಡೆಯನ್ನು ಹೇಳುವುದಕ್ಕೆ ಬಳಕೆಯಾಗುತ್ತದೆ ಎಂದು ವಿವರಿಸುತ್ತದೆ. *–ಇನ್ ಇದು ಮೂಲ ಸಮೀಪ ತೋರುಗದ ಬೆಳೆದ ರೂಪವಾಗಿದೆ. ಇದರ ಬೆಳವಣಿಗೆಯನ್ನು ಈ ಕೆಳಗೆ ತೋರಿಸಿದೆ.

*–ಇ/*–ಈ>*–ಇನ್

ಹಳಗನ್ನಡದಾಗ ಕೇಶಿರಾಜ –ಅತ್ ಎಂಬುದನ್ನು ಪ್ರದಾನ ರೂಪದಂತೆ ವಿವರಿಸಿದ್ದರೂ ಅದಕ್ಕೆ *–ಇನ್ ಮೊದಲಾದ ಸಾದನ ಸಂಬಂದ ಪ್ರತ್ಯಯ ಹತ್ತುತ್ತವೆ ಎಂದು ವಿವರಿಸಿದ್ದಾನೆ. ವಾಸ್ತವವಾಗಿ ಹೆಚ್ಚು ಬಳಕೆಯಾಗುವ ಬಿಡುಗಡೆ ಸಂಬಂದದ ರೂಪ *–ಇನ್ ಎಂಬುದೆ ಆಗಿದೆ. ಅಲ್ಲದೆ ಸಾದನ ಸಂಬಂದವನ್ನು ಹೇಳುವುದಕ್ಕೂ ಇದೆ ರೂಪ ಬಳಕೆಯಾಗುತ್ತದೆ ಮತ್ತು ಇದನ್ನು ಕೇಶಿರಾಜ ವಿವರಿಸಿದ್ದಾನೆ.

**ನಾಮಪದಗಳ ಸಂಬಂದ:** ಎರಡು ನಾಮಪದಗಳ ನಡುವಿನ ಸಂಬಂದವನ್ನು ಹೇಳುವುದಕ್ಕೆ –ಅ ಮತ್ತು –ಆ ರೂಪಗಳನ್ನು ಕೇಶಿರಾಜ ವಿವರಿಸಿದ್ದಾನೆ.

ತಮಿಳಿನಲ್ಲಿಯೂ –ಅ ಪ್ರತ್ಯಯ ನಾಮಪದಗಳ ಸಂಬಂದವನ್ನು ಹೇಳುವುದಕ್ಕೆ ಬಳಕೆಯಾಗುತ್ತದೆ.

ತೊಲ್ಕಾಪ್ಪಿಯಣಾರ್ –ಅತು ರೂಪವು ನಾಮಪದಗಳ ಸಂಬಂದದ ಪ್ರತ್ಯಯ ಎಂದು ವಿವರಿಸಿದ್ದಾನೆ. ಈ ರೂಪವು ಕನ್ನಡದಲ್ಲಿಯೂ ಗೋಶ ದ್ವನಿಯೊಂದಿಗೆ –ಅದು ರೂಪದಲ್ಲಿ ಬಳಕೆಯಾಗುತ್ತದೆ.

ಈ ಎರಡೂ ಸೊಲ್ಲಟ್ಟುಗಳನ್ನು ಗಮನಿಸಿದಾಗ ಸ್ಪಶ್ಟವಾಗಿ ಕಾಣುವ ಅಂಶವೆಂದರೆ, ಕೇಶಿರಾಜ ಹೆಚ್ಚು ಪ್ರತ್ಯಯಗಳನ್ನು ಪ್ರತಿಯೊಂದು ಕಾರಕ ಸಂಬಂದಕ್ಕೂ ವಿವರಿಸುತ್ತಾನೆ. ಆದರೆ, ತೊಲ್ಕಾಪ್ಪಿಯಂ ಕೇವಲ ಒಂದೊಂದು ಪ್ರತ್ಯಯವನ್ನು ಮಾತ್ರ ವಿವರಿಸುತ್ತದೆ. ಆದರೆ, ನೆಲೆ ಸಂಬಂದಕ್ಕೆ ಮಾತ್ರ ಹಲವಾರು ಪದೋತ್ತರ ರೂಪಗಳನ್ನು ಪಟ್ಟಿ ಮಾಡಿರುವುದನ್ನು ಗಮನಿಸಬಹುದು.

ಈ ಕೆಳಗೆ ಶಬ್ದಮಣಿದರ್ಪಣಂ ಮತ್ತು ತೊಲ್ಕಾಪ್ಪಿಯಂ ಸೊಲ್ಲಗಟ್ಟುಗಳಲ್ಲಿ ವಿವರಿಸಿರುವ ಪ್ರತ್ಯಯಗಳು ಮತ್ತು ಪರಸ್ಪರ ಬಾಶೆಗಳಲ್ಲಿ ಈ ಪ್ರತ್ಯಯಗಳ ಇರುವಿಕೆಯನ್ನು ಗುರುತಿಸುವ ಪ್ರಯತ್ನ ಮಾಡಿದೆ.

| ಕಾರಕ ಸಂಬಂದ | ಪ್ರತ್ಯಯ | ಮೂಲ | ತಮಿಳಿನಲ್ಲಿ ಆ ಪ್ರತ್ಯಯದ ಇರುವಿಕೆ | |
|---|---|---|---|---|
| | | | ರೂಪ | ಕಾರಕ |
| ಕರ್ತೃ | – | – | – | – |
| ನೆಲೆ | *–ಅಲ್ | ದೂರತೋರುಗ | *–ಆಲ್ | ಸಾದನ |
| | *–ಒಳ್ | ನಡುತೋರುಗ | *–ಉಳ್ | ನೆಲೆ |
| | *–ಇ, –ಎ | ಸಮೀಪತೋರುಗ | – | – |
| ಗುರಿ | –ಕೆ | ನಾಮಪದ | –ಕು | ಗುರಿ |
| ಸಾದನ | *–ಇನ್ | ಸಮೀಪತೋರುಗ | *–ಇನ್ | ಬಿಡುಗಡೆ |
| | *–ಇನ್ದಂ, –ಇನ್ದೆ | ಕೂಡುಪ್ರತ್ಯಯ | – | – |
| | –ಎ | ಸಮೀಪತೋರುಗ | – | – |
| ಆಗುಗ | *–ಅನ್ | ದೂರತೋರುಗ | *–ಆಲ್ | ಬಿಡುಗಡೆ |
| ಬಿಡುಗಡೆ | *–ಅತ್ | ದೂರತೋರುಗ | –ಅತು | ನಾಮಪದಗಳ ಸಂಬಂದ |
| | –ಅತ್ತಣಿಂ, –ಅತ್ತಣಿನ್ದಂ, –ಅತ್ತಣಿನ್ದೆ | ಕೂಡುಪ್ರತ್ಯಯ | – | – |
| ನಾಮಪದಗಳ ಸಂಬಂದ | *–ಅ, *–ಆ,–ಅದು | ದೂರತೋರುಗ | –ಅತು | ನಾಮಪದಗಳ ಸಂಬಂದ |

ಪಟ್ಟಿ೫: ತಮಿಳಿನಲ್ಲಿ ಕನ್ನಡದ ವಿಬಕ್ತಿ ಪ್ರತ್ಯಯಗಳು

| ಕಾರಕ ಸಂಬಂದ | ಪ್ರತ್ಯಯ | ಮೂಲ | ತಮಿಳಿನಲ್ಲಿ ಆ ಪ್ರತ್ಯಯದ ಇರುವಿಕೆ | |
|---|---|---|---|---|
| | | | ರೂಪ | ಕಾರಕ |
| ಕರ್ತೃ | – | – | – | – |
| ನೆಲೆ | *–ಅಕನ್,*–ಉಳ್ | ನಾಮಪದ | ಪ್ರತ್ಯಯವಾಗಿ –ಅಗ, –ಆಗ, *–ಉಳ್, –ಒಳ್ | ನೆಲೆ |
| | | | –ಕೆ, –ಗೆ | ಗುರಿ |

| | | | | |
|---|---|---|---|---|
| | ಪುರಂ, ಕೀೞ್, ಮೇಲ್, ಪಿನ್, ಮುನ್, ಕಡಯ್, ಇಡಂ | | ಪದೋತ್ತರ ರೂಪವಾಗಿ ಹೊರಗೆ, ಕೆಳಗೆ, ಹಿಂದೆ, ಮುಂದೆ, ಕಡೆ, ಎಡೆ | |
| ಗುರಿ | –ಕು | ನಾಮಪದ | –ಕೆ | ಗುರಿ |
| ಸಾದನ | –ಒಡು | ನಾಮಪದ | – | – |
| ಆಗುಗ | –ಅಯ್ | ನಾಮಪದ | – | – |
| ಬಿಡುಗಡೆ | *–ಇನ್ | ನಡು ತೋರುಗ | *–ಇನ್ | ಸಾದನ |
| ನಾಮಪದಗಳ ಸಂಬಂದ | –ಅತು | ದೂರ ತೋರುಗ | –ಅದು | ನಾಮಪದಗಳ ಸಂಬಂದ |

## ಉಪಯುಕ್ತ ಗ್ರಂಥಗಳು


* ಅಗಸ್ತ್ಯಲಿಂಗಂ, ಬಿ. ಮತ್ತು ಕುಶಾಲಪ್ಪ ಗವ್ಡ, ಕೆ. (ಸಂ.). ೧೯೭೨. *Dravidian Case System*. ಅಣ್ಣಾಮಲಯ್ ವಿಶ್ವವಿದ್ಯಾಲಯ, ಅಣ್ಣಾಮಲಯ್ ನಗರ.
* ಅಲ್ಬರ್ಟ್, ಡಿ. ೧೯೮೫. *Tolkappiam Phonology and Morphology (An English Translation)*. ಅಂತಾರಾಷ್ಟ್ರೀಯ ತಮಿಳು ಅದ್ಯಯನ ಕೇಂದ್ರ, ಚೆನ್ನಯ್.
* ಕಾಲ್ಡ್‌ವೆಲ್ ರಾಬರ್ಟ್. ೨೦೦೦ (ಮೊ.ಮು.). *A Comparative Grammar of Dravidian or South Indian Languages*. ಮದ್ರಾಸ್ ವಿಶ್ವವಿದ್ಯಾಲಯ, ಚೆನ್ನಯ್.
* ಕುಳ್ಳಿ, ಜೆ.ಎಸ್. ೧೯೯೧. *History of Grammatical Theories in Kannada*. ಅಂತಾರಾಷ್ಟ್ರೀಯ ದ್ರಾವಿಡ ಭಾಷಾ ವಿಜ್ಞಾನ ಸಂಸ್ಥೆ, ತಿರುವನಂತಪುರಂ.
* ಕೇಶಿರಾಜ. ೧೩ನೇ ಶ. ಶಬ್ದಮಣಿದರ್ಪಣಂ. ಸಂ. ಡಿ.ಎಲ್. ನರಸಿಂಹಾಚಾರ್ (೧೯೬೫). ಡಿ.ವಿ.ಕೆ. ಮೂರ್ತಿ, ಮಯ್ಸೂರು.
* ಗಾಯಿ, ಜಿ.ಎಸ್. ೧೯೬೪. *Historical Grammar of Old Kannada*. ಡೆಕ್ಕನ್ ಕಾಲೇಜು, ಪೂನಾ.
* ದಾಮೋದರನ್, ಎ. ೧೯೯೯. ನನ್ನೂಲ್ ಮೂಲಮುಂ ವಿರುತ್ತಿಯುಂ (ತಮಿಳು). ಅಂತಾರಾಷ್ಟ್ರೀಯ ತಮಿಳು ಅಧ್ಯಯನ ಕೇಂದ್ರ, ಚೆನ್ನಯ್.
* ಬದ್ರಿರಾಜು ಕ್ರಿಷ್ಣಮೂರ್ತಿ. ೨೦೦೩. *The Dravidian Languages*. ಕೇಂಬ್ರಿಜ್ ವಿಶ್ವವಿದ್ಯಾಲಯ ಮುದ್ರಣ, ನ್ಯೂಯಾರ್ಕ್

* ಬರ್ನೆಲ್, ಎ.ಸಿ. ೧೯೮೬ (ಮೊ.ಮು. ೧೮೭೫). *On the Aindra School of Sanskrit Grammarians: Their Place in the Sanskrit and Subordinate Literatures*. ಪಯೋನಿಯರ್ ಬುಕ್ ಸರ್ವಿಸಸ್. ಚೆನ್ನಯ್.

* ಬರೊ, ಟಿ. ಮತ್ತು ಎಮಿನೊ, ಎಂ.ಬಿ. ೧೯೮೪. (ಎರಡನೆ ಮು.). *A Dravidian Etymological Dictionary*. ಕ್ಲಾರೆಂಡನ್ ಮುದ್ರಣ, ಆಕ್ಸ್‌ಫರ್ಡ್.

* ಸೀತಾರಾಮಯ್ಯ, ಎಂ.ವಿ. ೧೯೮೮. ಪ್ರಾಚೀನ ಕನ್ನಡ ವ್ಯಾಕರಣಗಳು. ಮಯ್ಸೂರು ವಿಶ್ವವಿದ್ಯಾಲಯ, ಮಯ್ಸೂರು.

* ಸುಬ್ರಮೋಣಿಯಂ, ವಿ.ಅಯ್. (ಸಂ.). ೧೯೯೭. *Dravidian Encyclopedia*, ಸಂ.೩ *(Language and Literature)*. ಅಂತಾರಾಷ್ಟ್ರೀಯ ದ್ರಾವಿಡ ಭಾಷಾ ವಿಜ್ಞಾನ ಸಂಸ್ಥೆ, ತಿರುವನಂತಪುರಂ.

* ಶಣ್ಮುಗಂ, ಎಸ್.ವಿ. (ಸಂ.). ೧೯೯೭. *Dravidian Nouns: A Comparative Study*. ಅಣ್ಣಾಮಲಯ್ ವಿಶ್ವವಿದ್ಯಾಲಯ, ಅಣ್ಣಾಮಲಯ್ ನಗರ.

* ಪ್ರೊ. ಜಿ. ಅಬ್ದುಲ್ ಬಷೀರ್, ಭಾಷೆ: ಕೆಲವು ವಿಚಾರಗಳು, ೧೯೯೬. ಪ್ರ: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೫೬೦೦೫೬

* ಪ್ರೊ. ಜಿ. ಅಬ್ದುಲ್ ಬಷೀರ್, ಶಬ್ದಮಣಿ ದರ್ಪಣ ದೀಪಿಕೆ, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–೫೬೦೦೧೮, ಮೂರನೆಯ ಮುದ್ರಣ ೨೦೧೫.

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧೦. ಶಬ್ದಾರ್ಥ ನಿರ್ಣಯದ ಕೆಲವು ಸಾಧನೋಪಾಯಗಳು

-ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ*

ಶಬ್ದಾರ್ಥಗಳ ವಿವರಣೆಯಲ್ಲಿ ವೃತ್ತಿ ವ್ಯಾಖ್ಯಾನ ತಾತ್ಪರ್ಯ ಟೀಕು ಟಿಪ್ಪಣಿ ಪಂಜಿಕೆ ವಿವೃತಿ ನ್ಯಾಸ ಪದ್ಧತಿ-ಹೀಗೆ ಹಲವು ಬಗೆಯ ಸಾಧನೆಗಳನ್ನು ಅನುಸರಿಸಲಾಗುತ್ತದೆ. ಕೋಶ ಅಥವಾ ನಿಘಂಟು ಕೂಡ ಅಂಥ ಒಂದು ಸಾಧನ. ಸಂಕ್ಷಿಪ್ತತೆ ನಿರ್ದಿಷ್ಟತೆಗಳಿಂದಾಗಿ ಅದರ ಸ್ಥಾನ ಅತಿಶಯವಾದ್ದು. ಗೊತ್ತಾದ ಭಾಷೆಯೊಂದರ ಪದಗಳನ್ನು ಒಂದು ವ್ಯವಸ್ಥಿತ ಕ್ರಮದಲ್ಲಿ ಸರಣಿ ಮಾಡಿ, ಆ ಪದಗಳಲ್ಲಿ ಒಂದೊಂದರ ಅವು ವ್ಯಸ್ತಪದಗಳಾಗಿರಲಿ, ಸಮಸ್ತ ಪದಗಳಾಗಿರಲಿ-ವಾಚ್ಯಾರ್ಥ, ಅರ್ಥಚ್ಛಾಯೆಗಳು, ನಾನಾರ್ಥಗಳು ಹೀಗೆ ಎಲ್ಲವನ್ನೂ ನಿಸ್ಸಂದಿಗ್ಧವಾಗಿಯೂ ಸಂಕ್ಷಿಪ್ತವಾಗಿಯೂ ನಿರೂಪಿಸುವುದು ಇಲ್ಲಿಯ ಉದ್ದೇಶವಾಗಿರುತ್ತದೆ. ಈ ಉದ್ದೇಶ ಎಷ್ಟು ಚೆನ್ನಾಗಿ ನೆರವೇರುತ್ತದೆಯೋ ಅಷ್ಟರ ಮಟ್ಟಿನ ಪ್ರಾಮಾಣ್ಯದಿಂದ ಆ ನಿಘಂಟು ಉಪಾದೇಯವಾಗುತ್ತದೆ. ಈ ಪ್ರಾಮಾಣ್ಯದ ಪ್ರಯೋಗಗಳ ಬಲದಿಂದ ಹಾಗೂ ಜ್ಞಾತಿ ಪದಗಳ ಪೋಷಕ ಆಧಾರಗಳ ಮೇಲೆ ಅವಲಂಬಿತವಾಗಿರುತ್ತದೆ.

ಶಬ್ದಾರ್ಥಗಳನ್ನು ನಿರ್ಣಯಿಸುವುದಕ್ಕೆ ಎಂಟು ವಿಧವಾದ ಉಪಾಯಗಳನ್ನು ಹೇಳುವ ಒಂದು ವೃದ್ಧವಚನವಿದೆ. ಅದೆಂದರೆ:

ಶಕ್ತಿಗ್ರಹಂ ವ್ಯಾಕರಣೋಪಮಾನ
ಕೋಶಾಪ್ತವಾಕ್ಯಾದ್ವ್ಯವಹಾರತಶ್ಚ
ವಾಕ್ಯಸ್ಯ ಶೇಷಾದ್ವಿವೃತೇರ್ವದಂತಿ
ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ ॥

ಇಂದ್ರವಜ್ರಾವೃತ್ತವಾಗಿರುವ ಈ ವೃತ್ತವನ್ನು ಡಾ. ಎ. ವೆಂಕಟಸುಬ್ಬಯ್ಯನವರು ತಮ್ಮ 'ವೇದಾರ್ಥ ಮೀಮಾಂಸೆ' ಎಂಬ ವಿಶೇಷೋಪನ್ಯಾಸ ಗ್ರಂಥದಲ್ಲಿ ಉದ್ಧರಿಸಿ,

* ಬ್ರಾಹ್ಮೀ, ೬೮/ಬಿ., ಆಶ್ರಮ ರಸ್ತೆ, ಮೂರನೇ ಬ್ಲಾಕ್, ಜಯಲಕ್ಷ್ಮೀಪುರ, ಮೈಸೂರು-೫೭೦೦೧೨.
ದೂರವಾಣಿ: ೦೮೨೧-೨೫೧೯೯೬೦

ವೇದಮಂತ್ರಗಳ ಅರ್ಥವನ್ನು ತಿಳಿಯಲು ಇಲ್ಲಿ ಉಕ್ತವಾದ ಉಪಾಯಗಳು ಎಷ್ಟರಮಟ್ಟಿಗೆ ಸಹಕಾರಿಯಾಗಬಲ್ಲುವು ಎಂದು ವಿಚಾರ ಮಾಡಿದ್ದಾರೆ.

ಉಕ್ತವಾದ ಶಬ್ದಾರ್ಥ ಗ್ರಹಿಕೆಯ ಎಂಟು ಉಪಾಯಗಳೆಂದರೆ: ವ್ಯಾಕರಣ, ಉಪಮಾನ, ಕೋಶ, ಆಪ್ತವಾಕ್ಯ, ವ್ಯವಹಾರ, ವಾಕ್ಯಶೇಷ, ವಿವೃತಿ ಮತ್ತು ಸಿದ್ಧಪದ ಸಾನ್ನಿಧ್ಯ

ಈ ವೃದ್ಧ ವಚನದಲ್ಲಿ ಹೇಳಿರುವ ಉಪಾಯಗಳು ಲೌಕಿಕ ಸಂಸ್ಕೃತ ಸಾಹಿತ್ಯಕ್ಕೆ ಮಾತ್ರವಲ್ಲದೆ, ಅನ್ಯ ಭಾರತೀಯ ಭಾಷೆಗಳ ಸಾಹಿತ್ಯಕ್ಕೆ ಕೂಡ ಅನ್ವಯಿಸುತ್ತವೆಯೆಂದು ಹೇಳಬಹುದಾಗಿದೆ. ಆಯಾ ಭಾಷೆಯ ವಿಸ್ತೃತ ಪದಭಂಡಾರದ ಅರ್ಥಗಳನ್ನು ಗೊತ್ತು ಮಾಡಲು ಈ ಉಪಾಯಗಳಲ್ಲಿ ಒಂದಲ್ಲ ಒಂದು ಅಥವಾ ಒಂದಕ್ಕೊಂದು ಕೂಡಿ ಸಹಾಯ ಮಾಡಬಲ್ಲುವು ಎನ್ನುವುದು ನಿಘಂಟುಕಾರರು ಈಗಾಗಲೇ ಕಂಡುಕೊಂಡಿರುವ ವಿಚಾರವಾಗಿದೆ.

ಪ್ರಸ್ತುತ, ಈ ಉಪಾಯಗಳ ಸಹಾಯವನ್ನು ನಾನು ಕೂಡ ಹೇಗೆ ಒಬ್ಬ ಪ್ರಾಚೀನ ಸಾಹಿತ್ಯಾಭ್ಯಾಸಿಯಾಗಿ, ನಿಘಂಟುಕಾರನಾಗಿ ಪಡೆದುಕೊಂಡೆನೆಂಬುದನ್ನು ನನ್ನ ಅನುಭವದ ಕೆಲವು ಸಂದರ್ಭಗಳ ಬಲದಿಂದ ಇಲ್ಲಿ ತಮ್ಮ ಗಮನಕ್ಕೆ ತರಬಯಸುತ್ತೇನೆ. ಈ ಪ್ರಯತ್ನದಲ್ಲಿ ಪ್ರಾತಿನಿಧಿಕವಾಗಿ ಕೆಲವು ಪ್ರಯೋಗಗಳನ್ನಷ್ಟೇ ಕೊಡಲು ಸಾಧ್ಯ.

**೧. ವ್ಯಾಕರಣ ಮಾಡುವ ಸಹಾಯ**

ಅಗ್ಗಳನ (೧೧೮೯) ಚಂದ್ರಪ್ರಭ ಪುರಾಣದಿಂದ ಒಂದು ಪದ್ಯ:

ಪರಿಜನ ಫಳವತ್ ಕ್ಷೇತ್ರೋ
ತ್ಕರ ಬಂಧುಸಮೂಹ ಭವನ ಮಹಿಳಾವಳಿಯೆಂ
ಬುರುತರ ಪವರ್ಗ ಚಿಂತಾ
ಪರಿಗತನಪವರ್ಗ ಚಿಂತೆಯಂ ಮಾಡುಗುಮೇ ॥ (೧೩-೮೨)

"ಪವರ್ಗದ ಚಿಂತೆಗೆ ಸಿಕ್ಕಿದವನು ಅಪವರ್ಗದ ಚಿಂತೆಯನ್ನು ಮಾಡುತ್ತಾನೆಯೇ?" ಎಂಬುದಾಗಿ ಹೇಳುವುದರಲ್ಲಿ ಕವಿ ಒಂದು ಚಮತ್ಕಾರವನ್ನು ಕಲ್ಪಿಸಿದ್ದಾನೆ. ಪವರ್ಗವೆಂದರೆ ವರ್ಣಮಾಲೆಯ ಪವರ್ಗದ ಐದು ವರ್ಣಗಳೆಂದೂ ಅಪವರ್ಗವೆಂದರೆ ಪವರ್ಗವಲ್ಲದುದು ಮತ್ತು ಮೋಕ್ಷ ಎಂಬ ಅರ್ಥಗಳ ಮಾತುಗಳೆಂದೂ ತಿಳಿದಾಗಲೇ ನಮಗೆ ಪದ್ಯದ ಅಭಿಪ್ರಾಯ ಸ್ಪಷ್ಟವಾಗುವುದು. ಮೋಕ್ಷಕ್ಕೆ ಸಹಕಾರಿಯಾಗದವು ಯಾವುವು ಎನ್ನುವುದನ್ನು ಕವಿ ಪದ್ಯ ಶರೀರದಲ್ಲಿಯೇ ಹುದುಗಿಸಿದ್ದಾನೆ. ಪರಿಜನ, ಫಳವತ್ ಕ್ಷೇತ್ರ, ಬಂಧು ಸಮೂಹ, ಭವನ, ಮಹಿಳಾವಳಿ ಎನ್ನುವಲ್ಲಿ ಪ್ರಥಮಾಕ್ಷರಗಳು ಪವರ್ಗದ ವರ್ಣಗಳಾಗಿರುವುದು ವಿದಿತ.

ಅದೇ ಕಾವ್ಯದ ಇನ್ನೊಂದು ಉದಾಹರಣೆ:

ಪಿರಿದುಂ ರೇಫದ್ವಯ ಭಾ
ಸುರಮಂ ಚಂದ್ರಪ್ರಭಾಂಕಮಂ ನಲವಿಂದು
ಚ್ಚರಿಸಿ ಮೊರೆವಳಿಗಳದಱಿಂ
ದ್ವಿರೇಫನಾಮಂಗಳಾದುವಂದಿಂ ಬೞಿಯಂ ॥ (೧೫-೪೩)

"ದುಂಬಿಗಳು ದ್ವಿರೇಫವೆಂಬ ಹೆಸರನ್ನು ಪಡೆಯಲು ಚಂದ್ರಪ್ರಭ ಎಂಬ ತೀರ್ಥಂಕರನ ಹೆಸರಿನ ಎರಡು ರೇಫೆಗಳು ಕಾರಣವಾದುವೆಂದು" ಕವಿ ಇಲ್ಲಿ ಹೇಳಿರುವುದು ಕವಿಕಲ್ಪನೆಯ ಚಮತ್ಕಾರ. ಆದರೆ ಭ್ರಮರ ಎಂಬ ಶಬ್ದದಲ್ಲಿರುವ ಎರಡು ರೇಫೆಗಳು ಕಾರಣ ಎನ್ನುವುದು ನಮಗೆ ತಿಳಿಯುವುದು ವ್ಯಾಕರಣ ಮತ್ತು ಕೋಶಜ್ಞಾನದ ಬಲದಿಂದ.

**೨. ಉಪಮಾನ (=ಸಾದೃಶ್ಯ) ಮಾಡುವ ಸಹಾಯ**

ಪಂಪಭಾರತದ (೯೪೧) ಕೆಲವು ಪ್ರಯೋಗಗಳು:

ದುರ್ಯೋಧನನಿಂದ ಕರ್ಣನಿಗೆ ಅಂಗರಾಜ್ಯದ ಒಡೆತನ ದೊರೆತ ಮೇಲೆ "ನಿತ್ಯದಾನಕ್ಕೆ ದೇವಸಬಳದ ಪದಿನೆಂಟು ಕೋಟಿ ಪೊನ್ನುಮನಿತ್ತು" (೨-೮೪ ವ.) ಎಂದೂ ಜನ್ಮರಹಸ್ಯ ತಿಳಿದ ಮೇಲೆ ಕರ್ಣನು ಸೂರ್ಯೋಪಾಸನೆಗೆ ಮೊದಲು ಬ್ರಾಹ್ಮಣರಿಗೆ ದಾನ ಮಾಡಿದ ಮೇಲೆ "ದುರ್ಯೋಧನನಟ್ಟಿದ ದೇವಸವಳದ ಪದಿನೆಂಟು ಕೋಟಿ ಪೊನ್ನುಮನೊಟ್ಟಿ ಬೆಟ್ಟಾಗಿ ಪುಂಜಿಸಿ" (೯-೭೧ ವ.) ಎಂದೂ ದುರ್ಯೋಧನ ಕುರುಕ್ಷೇತ್ರದ ಕಾಳಗದಲ್ಲಿ ಕರ್ಣನಿಗೆ ವೀರಪಟ್ಟವನ್ನು ಕಟ್ಟುವಾಗ ಮತ್ತೆ "ದೇವಸಬಳದ ಪದಿನೆಂಟು ಕೋಟಿ ಪೊನ್ನುಮಂ ತರಿಸಿಕೊಟ್ಟು" (೧೨-೫೨ ವ.) ಎಂದೂ ಕಥನವಿರುವ ಮೂರು ಸಂದರ್ಭಗಳಲ್ಲಿ ದೇವಸಬಳ / ದೇವಸವಳ ಎಂಬ ಮಾತು ಬಂದಿದೆ.

ಪಂಪ ಭಾ. ನಿಘಂಟುವಿನಲ್ಲಿ ಈ ಮಾತಿಗೆ "ದೇವಮಾನ (ಒಂದು ಅಳತೆ)" ಎಂದೂ ಪಂ. ಭಾ. ದೀಪಿಕೆಯಲ್ಲಿ "ದೇವತೆಗಳಲ್ಲಿರುವ ಒಂದು ತೂಕ ಅಥವಾ ಅಳತೆ (?)" ಎಂದೂ ಕಸಾಪ ಕನ್ನಡ ನಿಘಂಟುವಿನಲ್ಲಿ "ಒಂದು ಬಗೆಯ ನಾಣ್ಯ" ಎಂದೂ ಸರಳ ಪಂಪಭಾರತದ ಸಾಂದರ್ಭಿಕ ಅರ್ಥಕೋಶದಲ್ಲಿ "ಒಂದು ವಿಶೇಷ ಮುದ್ರೆಯ ನಾಣ್ಯ, ನಾಣ್ಯವಿಶೇಷ" ಎಂದೂ ಅರ್ಥ ಮಾಡಿದೆ. ಕಸಾಪ. ಕನ್ನಡ ನಿಘಂಟುವಿನಲ್ಲಿ "ಇದು ಪ್ರತಿನಿತ್ಯವೂ ನಡೆಯಬೇಕಾದ ಯಾವುದೋ ದಾನ ಪೂಜೆ ಬಾಗಿನ ಇತ್ಯಾದಿ ಉದಾರ ಕಾರ್ಯಕ್ಕೆ ಸಂಬಂಧಿಸಿ ವರ್ತನೆಯಾಗಿ ಬರುತ್ತಿದ್ದವರಿಗೆ ಕೊಡುತ್ತಿದ್ದ ದಾನವಿರಬೇಕು" ಎಂದು ಒಂದು ವಿಶೇಷ ಟಿಪ್ಪಣಿಯನ್ನು ಕೂಡಿಸಿ, "ಶಬ್ದದ ಮೂಲ ದೆವಸವಳವಿರಬಹುದೇ?" ಎಂದು ಸಂದೇಹಿಸಿದೆ. ಶಬ್ದ 'ದೆವಸವಳ' ರೂಪದ ಸಾಧ್ಯತೆಗೆ, ಹಾಗೂ ಟಿಪ್ಪಣಿಗೆ ನಾನು ನಿಮಿತ್ತವಾದುದನ್ನು ಇಲ್ಲಿ ಹೇಳಬಹುದು. ಕೆಲವು ಶಾಸನಗಳಲ್ಲಿ 'ದೆವಸವಳ' ಶಬ್ದದ ಪ್ರಯೋಗಗಳಿದ್ದು (ಕನಿ; ಪು. ೪೦೪೩), ನಿತ್ಯಕಟ್ಟಳೆ, ಪ್ರತಿ ದಿನದ ಸೇವೆ, ವರ್ತನೆಯಾಗಿ ಮಾಡುವ ಕಾರ್ಯ ಎಂಬ ಅರ್ಥ ಅವುಗಳಿಂದ ಹೊರಡುವ

ಹಾಗೆ ತೋರುವುದು. ಈ ಶಾಸನೋಲ್ಲೇಖಗಳ ಉಪಮಾನ ಅಥವಾ ಸಾದೃಶ್ಯಗಳ ಬಲದಿಂದ ಪಂಪಭಾರತದ ಪ್ರಕೃತ ಶಬ್ದದ ಅರ್ಥವನ್ನು ಮನಗಾಣಬಹುದಾಗಿದೆ. ಹ್ರಸ್ವದ ದೀರ್ಘಗಳ ಅನಿಶ್ಚಿತತೆ ಕಾರಣವಾಗಿ (ದೆವಸವಳ >) ದೇವಸವಳ / ದೇವಸಬಳ ರೂಪಗಳ ಭ್ರಾಂತಿ ಬಂದಿರಬಹುದು.

ಅದೇ ಕಾವ್ಯದಲ್ಲಿ "ಭಗವತಿಯೇಱುವೇಟ್ವಿ ತೆರದಿಂ ಕಥೆಯಾಯ್ತಿವರೇಱು" ಎಂಬ ಆರಂಭದ ಪದ್ಯವೊಂದಿದ್ದು (೧೦-೧೬), ಇದರಲ್ಲಿಯ 'ಭಗವತಿಯೇಱು' ಎಂಬ ಶಬ್ದ ಒಂದು ಸಮಸ್ತ ಪದವಾಗಿಯೂ ದಾಖಲಾಗಬಹುದು. ಈ ಸಂಬಂಧದಲ್ಲಿ ಶಾಬ್ದಿಕ ಚರ್ಚೆಗಳು ನಡೆದಿದ್ದು, "ದುರ್ಗಿಯು ಮಾಡಿದ ಯುದ್ಧ, ಎಂದೋ ಆಗಿ ಹೋದ ಪುರಾತನ ಕಾಲದ ಕಾಳೆಗ" ಎಂದು ಡಿ.ಎಲ್. ನರಸಿಂಹಾಚಾರ್ಯರೂ "ಭಗವತಿಯ ಉತ್ಸವ ಸಮಯದಲ್ಲಿ ನಡೆಯುವ ಅನುಕರಣೆಯ ವಿನೋದದ ಯುದ್ಧ" ಎಂದು ಎಂ. ಚಿದಾನಂದಮೂರ್ತಿಯವರೂ ಅರ್ಥ ಮಾಡಿದ್ದಾರೆ. ಆದರೆ ರೋಣ ಗ್ರಾಮದ ಒಂದು ಶಾಸನದಲ್ಲಿ 'ದೇವೀಸಂಗರ' ಎಂಬ ಮಾತನ್ನು ನಾನು ಗುರುತಿಸಿದಾಗ, "ಅನುಕರಣೆಯ ಯುದ್ಧ" ಎಂಬ ಅರ್ಥವನ್ನು ಪೋಷಿಸುವ ಒಂದು ಸಾದೃಶ್ಯ ದೊರೆತಂತಾಯಿತು. ಎರಡು ಪದಗಳೂ ನಿಘಂಟುವಿನ ದಾಖಲಾತಿಗೆ ಸಲ್ಲುವುದಾಯಿತು.

ರನ್ನ ಕವಿಯ 'ಗದಾಯುದ್ಧ' ಮತ್ತು 'ರನ್ನ ಕಂದ'ದ ಪ್ರಯೋಗಗಳು:

'ಗದಾಯುದ್ಧ'ದಲ್ಲಿ ಬರುವ "ಬಸಕನಂ ಕೊಂದಂ ಮರುನ್ನಂದನಂ" ಎಂಬ ಪದ್ಯಭಾಗದಲ್ಲಿಯ (೩-೧೩) 'ಬಸಕನ್' ಎಂಬ ಶಬ್ದದ ಅರ್ಥ ವಿಚಾರಾರ್ಹ. ತೃಪ್ತಿಕರವಾಗಿ ಅರ್ಥ ಹೇಳಲಾಗದೆ ಕೈಬಿಟ್ಟಿರುವುದು ಇಲ್ಲವೆ ಸಮರ್ಥನೀಯವಲ್ಲದ ಅರ್ಥವನ್ನು ಹೇಳಿರುವುದು ನನ್ನನ್ನು ಬಹಳ ದಿನಗಳಿಂದ ಕಾಡುತ್ತಿತ್ತು. ಹೀಗಿರುವಾಗ ನಾಗವರ್ಮನ 'ಕಾವ್ಯಾವಲೋಕನ' ದಲ್ಲಿಯ

ಒಳಕೆಯ್ಯೊಳಿರ್ದು ಪಲ್ಲಿರಿ
ದೊಳವಾಲಂಗೊಂಡು ಮೊಱೆವ ಭಷಕನ ತೆಱದಿಂ
ದೊಳಪೊಕ್ಕು ದುರ್ಗಮಂ ಸಂ
ಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ ॥ (೨೪೪)

ಎಂಬ ಪದ್ಯದಲ್ಲಿಯ 'ಭಷಕ' ಶಬ್ದದ ಸಾದೃಶ್ಯ ಸಮಸ್ಯೆಯನ್ನು ಬಗೆಹರಿಸಿತು. 'ಭಷಕ' ಎಂದರೆ ಬೊಗಳುವ ನಾಯಿ. ಆ ಶಬ್ದದ ಅಪಲಿಖಿತವೋ ತದ್ಭವವೋ 'ಬಸಕ'ವಾಗಿರಬೇಕು ಎಂದು ತಿಳಿದಾಗ ಮನಸ್ಸಿಗೆ ಸಮಾಧಾನವಾಯಿತು.

'ರನ್ನ ಕಂದ'ದಲ್ಲಿಯೂ (ಪ. ೪) 'ಶಬ್ದಮಣಿ ದರ್ಪಣ'ದ ಪ್ರಯೋಗ ಸಾರದಲ್ಲಿಯೂ 'ಬಳಮರ್ದೆಂದು ಅಂಕದೌಷಧಂ' ಎಂಬ ಒಂದು ಉಲ್ಲೇಖವುಂಟು. ಬಳಮರ್ದು ಎಂಬ ಶಬ್ದಕ್ಕೆ ಕಿಟ್ಟೆಲರ ಕಾಲದಿಂದ ಸಿಡಿಮದ್ದು ಎಂಬುದಾಗಿ ಅರ್ಥ ಹೇಳುತ್ತಿದ್ದು, ಅದೇ ಸರಿಯೆಂದು ಈಗಲೂ ತಿಳಿಯುವವರಿದ್ದಾರೆ. ಆದರೆ ಪಂಪಭಾರತ (೪-೮೭

ವ.), ಶಾಂತಿಪುರಾಣ (೪-೨೩ ವ.), ಮಲ್ಲಿನಾಥ ಪುರಾಣ (೨-೬೦), ಲೀಲಾವತೀ ಪ್ರಬಂಧ (೨-೯೬). ಈ ಕೆಲವು ಪ್ರಾಚೀನ ಕಾವ್ಯಗಳಲ್ಲಿಯ ಈ ಶಬ್ದದ ಪ್ರಯೋಗಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ, ಅದು ಸಿಡಿಮದ್ದಲ್ಲ, ದೇಹಪುಷ್ಟಿಯ ಔಷಧಿ ಎಂಬುದಾಗಿ ಸ್ಪಷ್ಟವಾಗಿ ಅಭಿಪ್ರಾಯವಾಗುತ್ತದೆ. ಸಹೃದಯತೆಯ ಪ್ರಾಮಾಣ್ಯವನ್ನು ನಂಬಿ ಕಾವ್ಯ ಪ್ರಯೋಗಗಳ ಆಶಯುವನ್ನು ಅರ್ಥ ಮಾಡಿಕೊಂಡರೆ ಗೊಂದಲಗಳಿಗೆ ಅವಕಾಶವಿರುವುದಿಲ್ಲ.

ನೇಮಿಚಂದ್ರನ 'ಲೀಲಾವತೀ ಪ್ರಬಂಧ'ದ ಒಂದು ಪ್ರಯೋಗ:

ಈ ಕಾವ್ಯದಲ್ಲಿ ಗೊಲ್ಲರಹಟ್ಟಿಯ  ವರ್ಣನೆಯ ಭಾಗವಾಗಿ,

ಪರವತ್ಸಂಗಳ ಬಱಿಯಂ
ಪರಿಗೊಳುತುಂ ತೊಱೆದ ಗೊಂತಮಂ ಬಿಡುತುಂ ಹೂಂ
ಕರಿಸುತ್ತುಂ ಪೋಪಗ್ಗದ
ಪುರುಳಿಗಳಂ ಮಿಗೆ ಮರಲ್ದು ನೋಡಿದನರಸಂ ॥ (೫-೯೦)

ಎಂಬೊಂದು ಪದ್ಯದಲ್ಲಿ 'ಪುರುಳಿಗಳ್' ಎಂಬುದಾಗಿ ಬರುವ ಶಬ್ದ ನಮಗೆ ಈಗಾಗಲೇ ಪರಿಚಿತವಾಗಿರುವ ಗಿಣಿಗಳು (ಹೆಣ್ಣು ಗಿಣಿಗಳು) ಎಂಬರ್ಥದ ಶಬ್ದವಲ್ಲ, ಗೋವುಗಳಿಗೆ ಸಂಬಂಧಿಸಿದ ಶಬ್ದವೆಂದು ತಿಳಿಯುವಂತಿದೆ. ಸಾದೃಶ್ಯದಿಂದ ಇದನ್ನು ವಿಶದಪಡಿಸಿಕೊಳ್ಳುವ ಅವಕಾಶಗಳನ್ನು ಈಗ ನೋಡಬಹುದು.

ದೇವರಸನೆಂಬವನ ಮದನ ಚಕ್ರೇಶ್ವರ ಚರಿತೆಯ ಸಂಪಾದಕರು ಅಲ್ಲಿಯ ಕೆಲವು ಪದಗಳ ಅರ್ಥ ಕ್ಲೇಶದ ಬಗೆಗೆ ಚರ್ಚಿಸುವಾಗ ಪುರುಳು ಮತ್ತು ಹುರುಳುಗಳು ಎಂಬ ಶಬ್ದಗಳು ಬಂದಿರುವ ಈ ಪದ್ಯದ ಅರ್ಥವನ್ನೂ ನನ್ನೊಂದಿಗೆ ಚರ್ಚಿಸಿದರು:

ಅದಱೊಳು ಪ್ರಥಮಗರ್ಭದ ಪುರುಳೆಳಗಂತಿ
ಮುದುಕಿಯ ತೋರಗೆಚ್ಚಲವು
ಮುದದಿಂದ ಬರಿಸಂಪ್ರತಿಯೀವ ಪರಮ ಶಾಂ
ತದ ಹುರುಳುಗಳಲ್ಲಿಹವು ॥ (೨-೮೪)

ಇಲ್ಲಿಯ ಪ್ರಯೋಗಗಳು ಸಹಜವಾಗಿಯೇ ಲೀಲಾವತೀ ಪ್ರಬಂಧದೊಳಗಿನ ಪುರುಳಿ ಶಬ್ದವನ್ನು ನೆನಪಿಗೆ ತಂದುವು. ಇಲ್ಲಿಯ ಈ ಸಾದೃಶ್ಯ ಸಾಮಾನ್ಯಾರ್ಥದ ಹಸು, ಕರೆಯುವ ಹಸು ಎಂಬ ಅರ್ಥಗಳನ್ನು ಪೋಷಿಸುವಂತಿರುವುದು ಸ್ಪಷ್ಟ ಅಲ್ಲದೆ ಶಬ್ದಾರ್ಥ ನಿರ್ಣಯಕ್ಕೆ ಅಡ್ಡಿಯಾಗಬಹುದಾಗಿದ್ದ ಏಕೈಕ ಪ್ರಯೋಗವೆಂಬ ಆಕ್ಷೇಪವೂ ಆಗ ನಿವಾರಣೆಯಾದಂತಾಯಿತು.

ಕನ್ನಡದ ದೇಶ್ಯಮೂಲದ ಪುರುಳ್ ಶಬ್ದಕ್ಕೆ ವಸ್ತು, ಪದಾರ್ಥ, ಬೆಲೆ, ಮೌಲ್ಯ ಧನ, ದ್ರವ್ಯ, ಐಶ್ವರ್ಯ, ಅರ್ಥ, ಆಶಯ ಮೊದಲಾದ ಅರ್ಥಗಳಿರುವುದರ ಜೊತೆಗೆ

ಹಸು, ದನ, ಕರೆಯುವ ಆಕಳು ಎಂಬ ಅರ್ಥಗಳೂ ಇರುವುದು ಉದ್ಧೃತ ಪ್ರಯೋಗಗಳಿಂದ ಸ್ಪಷ್ಟವಾಗುವುದು. ಸ್ವಾರಸ್ಯವೆಂದರೆ, ಸಂಸ್ಕೃತದಲ್ಲಿ ಧನ ಶಬ್ದಕ್ಕೆ ಹಣ, ಐಶ್ವರ್ಯ, ಸ್ವತ್ತು, ಆಸ್ತಿ ಎಂಬ ಅರ್ಥಗಳಿರುವುದರ ಜೊತೆಗೆ ಗೋಧನ, ಗೋರೂಪವಾದ ಐಶ್ವರ್ಯ ಎಂಬ ಅರ್ಥಗಳೂ ಇರುವ ಸಾದೃಶ್ಯ. ಅಲ್ಲಿಗೆ 'ಧನ'ದ ಸಮಾನಾರ್ಥಕವಾಗಿ ಪುರುಳ್ ಮತ್ತು ಅದರ ರೂಪ ಭೇದಗಳೂ ತದ್ಭವವಾಗಿ ದನವೆಂಬ ಶಬ್ದವೂ ಇರುವುದು ತಿಳಿಯುತ್ತದೆನ್ನಬೇಕು. ಇದನ್ನು ಶಾಸನ ಸಾಕ್ಷ್ಯದಿಂದಲೂ ದೃಢಪಡಿಸಬಹುದಾಗಿದೆ.

ಬೆಂಗಳೂರು ಜಿಲ್ಲೆಯ ಹೊಸಕೋಟೆಯ ಒಂದು ಶಾಸನದಲ್ಲಿ (ಎಕ. IX, ಹೊಸಕೋಟೆ.೧೦. ೧೦–೧೯; ೧೦೨೩):

"ನೆಲ್ಲಿಗೆಱೆಯ ಕೆಱೆಗಂ ಕೊಟ್ಟ ಪೊನ್ ಅಯ್ವತ್ತು ಏೞು ಗದ್ಯಾಣಂ ಪೊನ್ನುಂ ಬತ್ತಂ ಮುನ್ನೂಱಯ್ವತ್ತೊಂಬತ್ತುಮುಂ ನಾಲ್ವತ್ತೆರಡು ಪೊರಳುಂ ಬ್ರಮ್ಹಣರ್ಗಂ ತಪಸಿಯರ್ಗ್ಗಂ ಕೊಟ್ಟು ಪೊರಳು ಮೂವತ್ತೇೞು ಮನ್ನಾದಿಯರ ನೊೞಬ್ಬಿಸೆಟ್ಟಿಯಮ್ಮಗಂ ನಿರುಗುಂದ ಸೆಟ್ಟಿಯುಂ ಮಣಿಯಬ್ಬೆಯುಂ ಇವರಿಬ್ಬರು । ಕಾರಕಪ"ರಾಗಿ ಗೆಯ್ಸಿದರ್...

ಇಲ್ಲಿ ಎರಡು ಕಡೆಗಳಲ್ಲಿ ಹೇಳಿರುವ ಪೊರುಳ್ ಶಬ್ದ ಕಸಾಪ. ಕನ್ನಡ ನಿಘಂಟುವಿನಲ್ಲಿ ತೋರಿಸಿರುವಂತೆ ಧನ, ದ್ರವ್ಯ ಎಂಬ ಸಾಮಾನ್ಯಾರ್ಥದ ಶಬ್ದವಾಗಿರದೆ, ಗೋವು, ಗೋಧನ ಎಂಬರ್ಥಗಳಲ್ಲಿ ಹೇಳಿದ ಶಬ್ದವಾಗಿರುವಂತೆ ತೋರುವುದು. ಬ್ರಾಹ್ಮಣರಿಗೆ ೪೨ ಗೋವುಗಳನ್ನೂ ತಪಸ್ವಿಗಳಿಗೆ ೩೭ ಗೋವುಗಳನ್ನೂ ಕೊಟ್ಟರೆಂಬುದು ಇಲ್ಲಿಯ ಆಶಯ. ಪೊರುಳ್ ಶಬ್ದದ ಅರ್ಥದಲ್ಲಿ ಸಂಶಯವಿದ್ದ ಕಾರಣದಿಂದಲೇ ರೈಸ್ ಅವರು ತಮ್ಮ ಭಾಷಾಂತರದ ಭಾಗದಲ್ಲಿ 'ಪೊರುಳ್' ಎಂಬ ಮಾತನ್ನು ಹಾಗೆಯೇ ಇಟ್ಟಿದ್ದಾರೆ.

**೩. ಕೋಶದಿಂದಾಗುವ ಸಹಾಯ**

ಒಂದು ಕೋಶದಲ್ಲಿ ದಾಖಲಾಗುವ ಶಬ್ದ ಮತ್ತು ಅದರ ಅರ್ಥಗಳ ವಿವರಣೆಯ ಸಲುವಾಗಿ ಹಲವು ಸ್ವಭಾಷಾಕೋಶಗಳನ್ನೂ ಅನ್ಯಭಾಷಾಕೋಶಗಳನ್ನೂ ನೋಡಬೇಕಾಗುವುದು ಸಾಮಾನ್ಯ ಸಾಧನೋಪಾಯಗಳಲ್ಲಿ ಒಂದು. ಅಂತಹ ಕೋಶಗಳ ಸೂಚನೆಗಳನ್ನು ಪ್ರತ್ಯೇಕವಾಗಿ ತೋರಿಸುವ ರೂಢಿಯೂ ಇದೆ. ಅನ್ಯ ಸಾಧನೋಪಾಯಗಳಿಗೆ ಪ್ರಯೋಗಗಳ ಪುಷ್ಟಿ ಶಕ್ಯವಿರಬಹುದು; ಆದರೆ ಈ ಕೋಶಗಳು ಕೊಡುವ ಶಬ್ದಾರ್ಥಗಳು ಎಷ್ಟೋ ವೇಳೆ ತಮಗೆ ತಾವೇ ಪ್ರಮಾಣಗಳಾಗಿ ಗ್ರಾಹ್ಯವಾಗುತ್ತವೆ. ಇಂತಹುದು ಸ್ವಭಾಷಾಕೋಶಗಳಲ್ಲಿ ಸಾಮಾನ್ಯ. ಆದರೆ ಅನ್ಯಭಾಷಾಕೋಶಗಳು ಮಾಡುವ ಸಹಾಯ ಬೇರೆ ತೆರನಾದ್ದು.

ಕರ್ಣಾಟಕ ಪಂಚತಂತ್ರದ (೧೦೩೧) 'ಖಲ್ವಾಯಿತ' ಎಂಬ ಶಬ್ದದ ರೂಪ ಮತ್ತು ಅರ್ಥಗಳ ನಿರ್ಣಯದಲ್ಲಿ ಶಬ್ದಕಲ್ಪ ದ್ರುತಿಯ ವಾಚಸ್ಪತ್ಯಾದಿ ಕೋಶಗಳಲ್ಲಿಯೂ ಮೋನಿಯರ್ ವಿಲಿಯಂಸ್ ಆಪ್ಟೆ ಮೊದಲಾದವರ ದ್ವಿಭಾಷಿಕ ಕೋಶಗಳಲ್ಲಿಯೂ

ವಿಶೇಷವಾಗಿ ಟರ್ನರ್ ಅವರ ಇಂಡೋ-ಆರ್ಯನ್ ಭಾಷೆಗಳ ತೌಲನಿಕ ಕೋಶದಲ್ಲಿಯೂ ದೊರೆತ ನೆರವು ಖಚಿತತೆಗೆ ಅವಕಾಶ ಮಾಡಿತು.

ಒಂದಾನೊಂದು ತಪೋವನದಲ್ಲಿಯ ಸಾತ್ವಿಕ ಪ್ರಭಾವವನ್ನು ವರ್ಣಿಸುವ ಒಂದು ಸಾಂಪ್ರದಾಯಿಕ ವರ್ಣನಾಂಶವಿದ್ದು, ಪಠ್ಯದಲ್ಲಿ ಈ ಮಾತು ಬರುವ ಭಾಗ ಹೀಗಿದೆ:

"ತ್ರಿಕಾಲದೊಳಂ ಖಲ್ವಾಯಿತನಂತೆ ಗಂಗಾಜಲಮಂ ತಂದು ತಳಿವ ಬೆಳ್ಮಗಿಲ್ಗಳು ಮಂ..."

ಇರುವಂತೆಯೇ 'ಖಲ್ವಾಯಿತ' ಶಬ್ದಕ್ಕೆ ಯಾವ ಕಾವ್ಯ ಪ್ರಯೋಗವೂ ನಿಘಂಟು ದಾಖಲಾತಿಯೂ ಕಾಣಿಸದಿರುವಾಗ 'ಖಲ್ವ' ಶಬ್ದ 'ಖಲ್ಲ' ಎಂಬ ಸರಿರೂಪದಲ್ಲಿ ಸಂಸ್ಕೃತ ಪ್ರಾಕೃತಾದಿ ಭಾಷೆಗಳಲ್ಲಿ 'ನೀರು ತುಂಬುವ ಚರ್ಮದ ಚೀಲ' (a leather water bag) ಎಂಬ ಅರ್ಥದಲ್ಲಿ ಗೋಚರಿಸಿತು; ಬಳಿಕ 'ಖಲ್ಲಾಯಿತ' ಎಂಬುದು ತದ್ಧಿತನಾಮರೂಪವೆಂದು ವಿಶದಪಟ್ಟಿತು. ಆನೆಗಳು ತಮ್ಮ ನೀರಿನ ಚೀಲದಂತಹ ಸೊಂಡಿಲುಗಳಿಂದ ನೀರನ್ನು ತುಂಬಿಕೊಂಡು ಋಷ್ಯಾಶ್ರಮವನ್ನು ಸ್ವಚ್ಛಗೊಳಿಸಲು ನೀರು ಸೂಸುತ್ತಿದ್ದುದನ್ನು ಹೇಳುವ ಹಲವು ಕಾವ್ಯ ಪ್ರಯೋಗಗಳಿರುವುದಿಂದ 'ಬೆಳ್ಮಗಿಲ್ಗಳ್' ಬಲುಮಟ್ಟಿಗೆ 'ಬೆಳ್ಮಿಗಂಗಳ್' (= ಸಾಧು ಪ್ರಾಣಿಗಳು) ಎಂದು ಮೂಲದಲ್ಲಿದ್ದಿರಬೇಕು ಎಂದು ಸಿದ್ಧ ಮಾಡುವುದು ಸಾಧ್ಯವಾಯಿತು (ನೋಡಿ: ಕರ್ಣಾಟಕ ಪಂಚತಂತ್ರದಲ್ಲಿ 'ಖಲ್ವಾಯಿತ', ಶಾಸ್ತ್ರೀಯ-೧, ೧೯೯೯, ಪು. ೮೩-೮೯).

ಒಮ್ಮೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನ ಸಂಪಾದಕ ಸಮಿತಿ ಸಭೆಯಲ್ಲಿ ದಸರಿ ಮತ್ತು ಅದರ ರೂಪಭೇದಗಳ ಚರ್ಚೆ ನಡೆಯುತ್ತಿದ್ದಾಗ ಅದು 'ಒಂದು ಬಗೆಯ ವಸ್ತ್ರ' ಎಂಬ ಅರ್ಥವನ್ನು ಹಲವು ಕಾವ್ಯಪ್ರಯೋಗಗಳ ಆಧಾರದ ಮೇಲೆ ಸಭಾಪ್ರತಿಯಲ್ಲಿ ಆಗಲೇ ಗುರುತಿಸಿ ಮುಗಿದಿತ್ತು. ಆದರೆ ಆ ಶಬ್ದ ದೇಶ್ಯವೇ, ಸ್ವೀಕೃತವೇ ಎಂದು ಹೇಳಬೇಕಾಗಿದ್ದ ನಿಷ್ಪತ್ತಿಯ ಭಾಗದಲ್ಲಿ ಪ್ರಶ್ನ ಚಿಹ್ನೆಯನ್ನಿಡಲಾಗಿತ್ತು. ಪ್ರಾಕೃತ ಮೂಲವಿರಬಹುದೇ ಎನ್ನುವ ವಿಚಾರ ಮನಸ್ಸಿಗೆ ಸುಳಿದಾಗ, ಪ್ರಾಕೃತ ಕೋಶವನ್ನು ನೋಡಿದೆ. ಟಸರ (ಪ್ರಾ.)– ತ್ರಸರ (ಸಂ.) -tussore (Eng.) ಅನುಬಂಧಿ ಶಬ್ದಗಳೆಂಬುದು ಸ್ಪಷ್ಟವಾಯಿತು. ಹಾಗೆಯೇ ಕಾವ್ಯಪ್ರಯೋಗಗಳಲ್ಲಿ ಬರುವ 'ದಸರಿ ದೊಡಕು' ಎನ್ನುವುದರ ಆಶಯ 'ನೆಯ್ಗೆಯ ವೇಳೆ ಲಾಳಿಯಾಡುವಾಗ (ಸಂ. ತ್ರಸರ = ನೆಯ್ಗೆಯ ಲಾಳಿ) ನೂಲು ಸಿಕ್ಕಾಗುವುದು' ಎಂಬುದು ಕೂಡ ಸ್ಪಷ್ಟವಾಯಿತು.

**೪. ಆಪ್ತ ವಾಕ್ಯದಿಂದಾಗುವ ಸಹಾಯ**

ಶ್ರುತಿ ಸ್ಮೃತಿ ಇತಿಹಾಸ ಪುರಾಣವಾದ ವಿಷಯಗಳನ್ನು ಹಾಗೆಯೇ ಆ ವಿಷಯಗಳ ಬಗೆಗೆ ಅಧಿಕಾರಯುತವಾಗಿ ತಿಳಿವಳಿಕೆಯುಳ್ಳವರು ಹೇಳುವ ಅಥವಾ ಒದಗಿಸುವ ಸಾಕ್ಷ್ಯಗಳನ್ನು ಆಪ್ತವಾಕ್ಯವೆಂದು ತಿಳಿಯಬಹುದಾಗಿದೆ. ಇದು ಸಹ ಒಂದು ಉಪಯುಕ್ತವಾದ ಸಾಧನೋಪಾಯ.

ನಾಗವರ್ಮನ 'ಛಂದೋಂಬುಧಿ'ಯ ಸಂಜ್ಞಾ ಪ್ರಕರಣದಲ್ಲಿ ಯತಿ ವಿಚಾರದ ಪ್ರಸ್ತಾವವಾದ ಮೇಲೆ ಪದ್ಯ ಜಾತಿಗಳನ್ನು ಪ್ರಸ್ತಾವಿಸುವಾಗ,

"ಸಂಸ್ಕೃತ ಪ್ರಾಕೃತಾಪಭ್ರಂಶ ಪೈಶಾಚಿಕಮೆಂಬ ಮೂಱುವರೆ ಭಾಷೆಗಳೊಳ್ ಪುಟ್ಟುವವೆಲ್ಲಂ ದ್ರಮಿಡಾಂಧ್ರ ಕರ್ಣಾಟಾದಿ ಷಟ್ಪಂಚಾಶತ್ಸರ್ವ ವಿಷಯ ಭಾಷಾ ಜಾತಿಗಳಕ್ಕುಂ..."

ಎಂಬುದಾಗಿ ಹೇಳಿದೆಯಷ್ಟೆ. ಸಂಸ್ಕೃತ ಮೊದಲಾಗಿ ನಾಲ್ಕು ಭಾಷೆಗಳನ್ನು ಹೇಳಿ, ಅವನ್ನು 'ಮೂಱುವರೆ ಭಾಷೆಗಳ್' ಎಂದು ಏಕೆ ಹೇಳಿದೆ ಎನ್ನುವ ಕುತೂಹಲ ನನ್ನನ್ನು ಬಹು ಕಾಲ ಕಾಡಿತ್ತು. ಹೀಗಿರುವಾಗ ಪೊನ್ನನ ಶಾಂತಿಪುರಾಣದಲ್ಲಿ ಕೂಡ "ನೋಡಿರೆ ಪೇಟ್ವ ಮೂಱುವರೆ ಭಾಷೆಗಳಂ" (೧೨-೭೭) ಎಂಬುದಾಗಿ ಇನ್ನೊಂದು ಉಲ್ಲೇಖ ಕಣ್ಣಿಗೆ ಬಿತ್ತು. ಕೊನೆಯದಾದ ಪೈಶಾಚಿಕವನ್ನು ಅರ್ಧಭಾಷೆಯನ್ನಾಗಿ ತಿಳಿದಿರಬಹುದೇ ಎಂದು ಛಂದೋಂಬುಧಿಯಲ್ಲಿ ಬಂದಿರುವ ಭಾಷೆಗಳ ಅನುಕ್ರಮವನ್ನು ನೋಡಿ ಊಹಿಸುವುದೇನೋ ಸರಿಯೆ, ಆದರೆ ಅದಕ್ಕೆ ಸಮರ್ಥನೆ ಕೊಡುವುದು ಹೇಗೆ?

ಹೀಗಿರುವಾಗ ಸಂಸ್ಕೃತ ಆಲಂಕಾರಿಕನಾದ ರುದ್ರಟನ 'ಕಾವ್ಯಾಲಂಕಾರ'ವೆಂಬ ಲಕ್ಷಣ ಗ್ರಂಥದ ನಮಿಸಾಧುವಿನ ವ್ಯಾಖ್ಯಾನದಲ್ಲಿ "ತಥಾ ಪ್ರಾಕೃತಮೇವ ಕಿಂಚಿದ್ವಿಶೇಷಾತ್ ಪೈಶಾಚಿಕಮ್" ಎಂದಿರುವ ಮಾಪ (೨-೧೨) ಆಪ್ತವಾಕ್ಯವಾಗಿ ನನ್ನ ವಿಚಾರಕ್ಕೆ ಸ್ವಲ್ಪ ಮಟ್ಟಿಗೆ ಸಮರ್ಥನೆ ಕೊಡುವುದು ಶಕ್ಯವಾಯಿತು.

ಈ ಸಂದರ್ಭದಲ್ಲಿ, ರನ್ನನ ಗದಾಯುದ್ಧದ ಈ ಮುಂದಿನ ಪದ್ಯದ (೪-೪೧) ಆಶಯ ಕೂಡ ವಿಶದಪಡುವುದು ಸಾಧ್ಯ.

ನವಭೂತ ಭಾಷೆಯಿಂ ಕುಱು
ಪುವೇೞ್ದು ತಾಮಡ್ಡಗವಿತೆಯಂ ಮಾಡಿ ಮಹಾ
ವ್ಯವಸಾಯಂಗೆಯ್ದ ಮರು
ಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ ॥

ಗುಣಾಢ್ಯದ ಪೈಶಾಚಿ ಭಾಷೆಯ ಬೃಹತ್ಕಥೆಯನ್ನು ಮರುಳು ಕವಿಗಳ ಅಡ್ಡಗವಿತೆಯನ್ನು ಒಗ್ಗೂಡಿಸಿ ವ್ಯಂಗ್ಯವಾಡುವ ಸಂಗತಿ ಇರಲಿ, ಇಲ್ಲಿ 'ಅಡ್ಡಗವಿತೆ' ಎಂದಿರುವುದು 'ಅರ್ಧ ಭಾಷೆಯಲ್ಲಿ ಕಟ್ಟಿದ ಕವಿತೆ', 'ಮರುಳುಗಳ ಎಂದರೆ ಪಿಶಾಚಿಗಳ ಭಾಷೆಯ ಕವಿತೆ' ಎಂದು ಅಭಿಪ್ರಾಯವಾಗುವಂತಿದೆ. ನಾಣ್ಯದ ಲೆಕ್ಕದಲ್ಲಿ ಹಣ ಎಂಬುದರ ಅರ್ಧ ಬೆಲೆಯ ಒಂದು ನಾಣ್ಯ, 'ಅಡ್ಡ' ಎನ್ನುವುದು ಪ್ರಯೋಗಸಿದ್ಧವಾದ್ದು.

ವಿಡಂಬನ ಕಾವ್ಯವಾಗಿ ಪ್ರಸಿದ್ಧವಾದ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿ ಯಾವುದೋ ಐತಿಹ್ಯ ಮೂಲದ ಒಂದು ಚಮತ್ಕಾರೋಕ್ತಿಯಿದೆ. ಅದಕ್ಕೆ ಅನುಗುಣವಾಗಿ

'ಚಕಾರ ಚತುಷ್ಕಂ' ಎಂಬ ಮಾತು ಇಲ್ಲಿ ಬಂದಿದೆ (೧೦-೧೭೫). ಇದರ ಹಿನ್ನೆಲೆಯನ್ನು ನಾವು ಆಪ್ತ ವಾಕ್ಯ ಮೂಲದಿಂದ ಕಂಡುಕೊಳ್ಳಬೇಕಾಗುವುದು. ಅದು ಹೀಗೆ:

ಮಹಾಭಾರತದಲ್ಲಿ ಚಕಾರ ಪ್ರಯೋಗದ ಬಳಕೆ ಹೆಚ್ಚು ಎನ್ನುವ ಪ್ರತೀತಿಯಿಂದಾಗಿ ವ್ಯಾಸರಿಗೆ 'ಚಕಾರಕುಕ್ಷಿ' ಎಂಬುದಾಗಿ ಐತಿಹ್ಯ ಹುಟ್ಟಿದೆ. ಪಾಂಡವರ ಮತ್ತು ದ್ರೌಪದಿಯ ಕೌಟುಂಬಿಕ ಸಂಬಂಧವನ್ನು ಸೂಚಿಸುವಾಗ ಸಾಂದರ್ಭಿಕವಾಗಿ ನಕುಲಶ್ಚ ಸಹದೇವಶ್ಚ ಎಂದು ಮುಂತಾಗಿ ಚಕಾರ ಸಹಿತವಾಗಿ ಹೇಳಲಾಗುತ್ತದೆ. ಇದನ್ನು ಪರಮಚಿ ಆಕ್ಷೇಪಿಸುತ್ತ ವ್ಯಾಸನ ಆಕೃತಿಯ ಹೊಟ್ಟೆಗೆ ಬೆರಳಿಟ್ಟು ತೋರಿಸಿದನಂತೆ; ಆಗ ಬೆರಳು ಅಲ್ಲಿಯೇ ಅಂಟಿಕೊಂಡಿತಂತೆ. ಅದಕ್ಕೆ ತಕ್ಕ ಉತ್ತರ ನೀಡಿದ ಮೇಲೆ ಅಂಟಿಕೊಂಡ ಬೆರಳು ಬಿಟ್ಟಿತಂತೆ. ಈ ಪ್ರತೀತಿಯ ಮೂಲ ತಿಳಿಯದು. ಬ್ರಹ್ಮಶಿವ ಈ ಸಂದರ್ಭದಲ್ಲಿ 'ಪದ್ಯದ ಚಕಾರ ಚತುಷ್ಕಂ' (೧೦-೧೭೫) ಎಂದಿದ್ದಾನೆ. ಇದೇ ಕಾವ್ಯದಲ್ಲಿ 'ವಕಾರತ್ರಯ' ಎಂಬ ಮಾತು ಕೂಡ ಬಂದಿದ್ದು, ಅದು ವೈದಿಕರ ದೇವಕಾರ್ಯ ಪಿತೃಕಾರ್ಯ ಮತ್ತು ಮಾನುಷಕಾರ್ಯ (ಯಜ್ಞಕರ್ಮ) ಈ ಮೂರು ಕರ್ಮಗಳಲ್ಲಿ ಕ್ರಮವಾಗಿ ಬಳಸುವ ಸ್ವಾಹಾಕಾರ, ಸ್ವಧಾಕಾರ ಮತ್ತು ವಷಟ್ಕಾರ ಎಂಬ ಮೂರು ಪದಗಳಲ್ಲಿಯ ವಕಾರವನ್ನು ಅದು ಹೇಳುತ್ತಿದೆ ಎಂದು ತಿಳಿಯಬೇಕು.

ಇನ್ನೀಗ, ಈಚೆಯ ಒಂದು ಗದ್ಯ ಕಾವ್ಯ ಮುದ್ರಾ ಮಂಜೂಷದ (೧೮೨೩) ಪರ್ವತರಾಯ ನಿರ್ಯಾಣ ಕಥನ (೧೦ನೆಯ ಆಶಯ)ದಲ್ಲಿ ಪರ್ವತರಾಜನ ಮೃತಿಯನ್ನು ವಿಷಕನ್ಯೆ ವಿವರಿಸುವಾಗ, ಅವನು ತನ್ನನ್ನು "ತವಕದಿಂದ ಕುಕ್ಕುಟಾಚಾರವಂಗೈದು ಕ್ರೀಡಿಸಿ ಮೃತನಾದನು" ಎಂದು ಬಾಗುರಾಯಣನಿಗೆ ಹೇಳಿದ ಹಾಗೆ ನಿರೂಪಣೆಯಿದೆ. 'ಕುಕ್ಕುಟಾಚಾರ'ವೆಂಬುದು ನನಗೆ ಸ್ಪಷ್ಟವಾದ್ದು ರಾಮಾಯಣದ ರಾವಣ-ಮಹಾಪಾರ್ಶ್ವ ಸಂವಾದದಲ್ಲಿ ಬರುವ "ಬಲಾತ್ ಕುಕ್ಕುಟವೃತ್ತೇನ..." (ಯುದ್ಧಕಾಂಡ ೧೩-೪) ಎಂಬ ಪದ್ಯದಿಂದ. ನನ್ನ ಬಾಲ್ಯಕಾಲದ ಮಿತ್ರರು ಕೆ.ಎಸ್. ನಾರಾಯಣಾಚಾರ್ಯರು ಈ ಶ್ಲೋಕವನ್ನು ನನ್ನ ಗಮನಕ್ಕೆ ತಂದರು. ಹುಂಜ ಕೋಳಿಯನ್ನು ಅಟ್ಟಿಸಿಕೊಂಡು ಹೋಗಿ ಬಲಾತ್ಕಾರದಿಂದ ರಮಿಸುವುದು ಈ ಮಾತಿನ ಆಶಯ.

**೫. ವ್ಯವಹಾರ ಅಥವಾ ಲೋಕವ್ಯವಹಾರದಿಂದಾಗುವ ಸಹಾಯ**

ಲೋಕ ವ್ಯವಹಾರದ ವಸ್ತು ಜ್ಞಾನದಿಂದ, ಸಂದರ್ಭ ವಿಶೇಷಗಳಿಂದ ಶಬ್ದಾರ್ಥಗಳು ಸ್ಪಷ್ಟವಾಗುವುದು ಸಾಧ್ಯವಿದೆ. ರಾಘವಾಂಕನ ಹರಿಶ್ಚಂದ್ರ ಚಾರಿತ್ರದೊಳಗಿನ ಬೇಟೆಯ ವರ್ಣನೆಯಲ್ಲಿ ಬರುವ ಮೇಗಾಳಿ, ಕಿಗ್ಗಾಳಿ ಎಂಬ ಶಬ್ದಗಳ (೫-೩೦) ಅರ್ಥದ ವಿವರಣೆಯನ್ನು ತಾವು ಸಂಜೆಯ ವಿಹಾರದ ವೇಳೆ ನಂಟರೊಬ್ಬರ ಅನುಭವ ಕಥನದಿಂದ ತಿಳಿದುದಾಗಿ ಡಿ.ಎಲ್. ನರಸಿಂಹಾಚಾರ್ಯರು ತಮ್ಮ ಒಂದು ಲೇಖನದಲ್ಲಿ ತಿಳಿಸಿದ್ದಾರೆ (ಪೀಠಿಕೆಗಳು, ಲೇಖನಗಳು, ಪು. ೮೩೨-೩೫). ಇದು ಲೋಕಜ್ಞಾನದ ಒಂದು ಒಳ್ಳೆಯ ಉದಾಹರಣೆ.

ನನ್ನ ಅನುಭವವನ್ನಿಲ್ಲಿ ಹೇಳಬಹುದು: ಪಂಪಭಾರತದ ವೇಶ್ಯಾವಾಟಿಯ ವರ್ಣನೆಯ ಒಂದು ಗದ್ಯಭಾಗದಲ್ಲಿ "ಮೆಣಸುನಡವೆಯ ಪುಡಿಯೊಳಡಸಿದಲ್ಲದಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು" ಎಂದೂ (೪-೮೭ ವ.), ಇಂದ್ರ ಕೀಲ ನಗೇಂದ್ರದ ನರೇಂದ್ರ ತಾಪಸನಾದ ಅರ್ಜುನನ ತಪೋಭಂಗಕ್ಕೆ ಬಂದ ಅಪ್ಸರೆಯರಲ್ಲಿ ಒಬ್ಬಳು "ಕಳ್ಗ ಚಕ್ಕಣಮೆನಿಪ್ಪುದು ಸಾಗೆನಿಸಲ್ಕೆ ಸಾಲ್ವ" ಸ್ವರ್ಗದ ದೇಸಿಗಳನ್ನು ಹಾಡಿದಳೆಂದೂ (೭-೯೦) ನಿರೂಪಣೆಯಿದೆ. ಇಲ್ಲಿ ಬರುವ 'ಚಕ್ಕಣ' ಶಬ್ದದ ರೂಪ ಮತ್ತು ಅರ್ಥಗಳಲ್ಲಿ ಮೊದಲು ಸ್ವಲ್ಪ ಗೊಂದಲವಿತ್ತು ಎನ್ನುವುದು ಪಂಪಭಾರತದ ಪರಿಷ್ಕರಣಗಳನ್ನು ನೋಡಿದರೆ ತಿಳಿಯುವುದು. ಆದರೆ ನಾಗವರ್ಮನ 'ಅಭಿಧಾನ ವಸ್ತುಕೋಶ'ದ ಸಹಾಯದಿಂದ ಅದೊಂದು ಕಳ್ಳಿನ ಅನುಬಂಧಿ ಶಬ್ದವೆಂಬುದನ್ನು ನಾನು ಸ್ಪಷ್ಟ ಮಾಡಿಕೊಂಡೆ. ಅದನ್ನು ತಮಿಳು ಶಬ್ದಕೋಶವೂ ಪುಷ್ಟೀಕರಿಸಿತು. ಆದರೆ ಕಳ್ಳಿನ ವ್ಯಾಪಾರದಲ್ಲಿ ನೇರವಾಗಿ ವ್ಯವಹರಿಸುತ್ತಿದ್ದ ವ್ಯಕ್ತಿಯೊಬ್ಬರನ್ನು ಸಂಪರ್ಕಿಸಿ ಈ ಬಗ್ಗೆ ಕೇಳಿದಾಗ, ಚಕ್ಕಣವೆನ್ನುವುದು ಕಳ್ಳು ಕುಡಿಯುವಾಗ ನಂಜಿಕೊಳ್ಳುವ ಒಂದು ವಿಶಿಷ್ಟವಾದ ಖಾದ್ಯವೆಂದು ತಿಳಿಯಿತು. ಸಂಸ್ಕೃತದ 'ಚಕ್ಷಣಾ' ಶಬ್ದದ ತದ್ಭವ ರೂಪವೆಂದು ಅನಂತರದಲ್ಲಿ ವಿಶದಪಟ್ಟಿತು (ನೋಡಿ: ಪಂಪಭಾರತದ ಕೆಲವು ಪದಪಾಠಗಳು, ಶಾಸ್ತ್ರೀಯ ೧, ಪು. ೩೪-೩೭).

**೬. ವಾಕ್ಯಕೇಷ ನೆರವಾಗುವ ರೀತಿ**

ಸಂದರ್ಭ ವಿಶೇಷದ ವಾಕ್ಯವೊಂದರ ಉಳಿದ ಪದಗಳ ಅರ್ಥ ಆಶಯಗಳ ಬಲದಿಂದ ಅಪರಿಚಿತಾರ್ಥದ ಪದದ ಅರ್ಥ ಆಶಯಗಳು ಸ್ಫುಟಗೊಳ್ಳುವುದು ಸಾಧ್ಯ. ಇದರ ಸ್ವರೂಪವನ್ನು ತಿಳಿಯುವ ಹಲವು ಪ್ರಯೋಗಗಳಿಗೆ 'ಅರ್ಧನೇಮಿ ಪುರಾಣದ' ಕೆಲವು ಪಾಠಗಳ ವಿಚಾರ ಎಂಬ ಪ್ರಬಂಧವನ್ನು ನೋಡಬಹುದು (ನೋಡಿ: ಶಾಸ್ತ್ರೀಯ ೧, ಪು. ೧೧೫-೧೩೧). ಇಲ್ಲಿ ಒಂದೆರಡು ಪ್ರಯೋಗಗಳನ್ನು ಮಾತ್ರ ಎತ್ತಿಕೊಳ್ಳಬಹುದಾಗಿದೆ.

**ವಾಕ್ಯವೊಂದರ ಸಂದರ್ಭ:** ಕಂಸನು ತನ್ನ ಗುರು ವಸುದೇವನ ಅಪ್ಪಣೆಯಂತೆ ಚಕ್ರವರ್ತಿ ಜರಾಸಂಧನ ಶತ್ರುವಾಗಿದ್ದ ಸಿಂಹರಥನನ್ನು ನಿಗ್ರಹಿಸಿ, ಅವನನ್ನು ಸೆರೆಹಿಡಿದು ತರಲು ಹೊರಟಾಗ ಕಂಸನು ಘೋಷಣೆಯನ್ನು ಒಪ್ಪಿಕೊಂಡಿದ್ದು ವಸುದೇವನಿಗೆ ಸಂತೋಷ ತಂದಿತು. ಇದು ಸಂದರ್ಭ. ಪದ್ಯದ ವಾಕ್ಯ "ಕಂಸಂ ಪಿಡಿದು ವಸುದೇವನಲ್ಲಿಗೆ ತಪ್ಪುದು ಮಾನಕ ದುಂದುಭಿಯಿಂ ಚಟ್ಟರೊಳಗೆ ಪೆಸರಂ ನಿಲಿಸಿರೆಯೆಂದು..." ಎಂದಿದ್ದು (೬-೬೩ ವ.), ೧೮೧೪ರ ಪರಿಷ್ಕರಣ ನೋಡಲು ದೊರೆಯದೆ ಇದ್ದಾಗ ಈಚಿನ ಮೂರು ಪರಿಷ್ಕರಣಗಳಲ್ಲಿಯೂ ಹೀಗೆಯೇ ವಾಕ್ಯವಿದ್ದ ಕಾರಣ ಅಭಿಪ್ರಾಯ ವಿಶದವಾಗದೆ ಹೋಯಿತು. ಕರ್ತೃಪದವೇ ಇಲ್ಲದ್ದರಿಂದ ಹೀಗಾಯಿತು. ವಸುದೇವನಿಗೆ ಆನಕದುಂದುಭಿ ಎಂಬುದೂ ಒಂದು ಹೆಸರು. "ಕಂಸಂ ಪಿಡಿದು ವಸುದೇವನಲ್ಲಿಗೆ ತಪ್ಪುದು ಮಾನಕದುಂದುಭಿಯಾನಕದುಂದುಭಿ ಧ್ವನಿಯಿಂ ಚಟ್ಟರೊಳಗೆ ಪೆಸರಂ

ನಿಲಿಸಿದೆಯೆಂದು..." ಎಂಬುದಾಗಿ ೧೯೧೪ರ ಪರಿಷ್ಕರಣದಲ್ಲಿ ಕರ್ತೃ ಸಹಿತ ವಾಕ್ಯವಿರುವುದು ಕಂಡುಬಂದು ಸಮಸ್ಯೆ ಪರಿಹಾರವಾಯಿತು.

ಈಗ ಇದೇ ಕಾವ್ಯದ ಇನ್ನೊಂದು ಪ್ರಯೋಗವನ್ನು ಎತ್ತಿಕೊಳ್ಳಬಹುದು.

ಯೌವನೋದಯ ಕಾಲದಲ್ಲಿ ವಸುದೇವನು ಲೀಲಾವಿಹಾರ ನಿರತನಾದ ವರ್ಣನೆಯ ಒಂದು ಭಾಗವಾಗಿ ಈ ಪದ್ಯವಿದೆ.

ವಾರಿಜಮನಿಟ್ಟು ಕಿವಿಯೊಳ್
ವಾರುವಮಂ ಪೀಲಿಯಿಂದೆ ಪಕ್ಕರಿಸಿ ಮನೋ
ಹಾರಿಯೆನೆ ಮೂಱುಮೊಗದ ಕು
ಮಾರನ ವೊಲ್ ನೃಪಕುಮಾರನೇಱುವನೊಲವಿಂ ॥ (೪-೧೪೧)

ವಸುದೇವಕುಮಾರನು ತಾನು ಸವಾರಿಗೆ ಹೊರಡುವಾಗ ತನ್ನ ಕುದುರೆಯನ್ನು ನವಿಲು ಗರಿಗಳ ರಕ್ಷಾ ಕವಚದಿಂಧ ಸಜ್ಜುಗೊಳಿಸಿ ಹೊರಡುತ್ತಿದ್ದನು ಎನ್ನುವಾಗ 'ಮೂಱುಮೊಗದ ಕುಮಾರನ ವೊಲ್' ಎಂಬ ಉಪಮಾ ವಾಚಕದಲ್ಲಿ ಏನೋ ಲಿಪಿಕಾರ ಸ್ಖಾಲಿತ್ಯವಾಗಿರಬೇಕೆಂದು ತೋರದಿರದು. ಷಣ್ಮುಖನು ಮಯೂರವಾಹನ ಎಂಬುದರಿಂದಾಗಿ, ಇಲ್ಲಿ "ಮನೋಹಾರಿಯೆನೆಯಾಱುಮೊಗದ ಕುಮಾರನ ವೊಲ್" ಎಂದಿರಬೇಕು ಎನ್ನುವ ತಿದ್ದುಪಡಿ ತಾನೇ ಹೊಳೆಯುತ್ತದೆ. ನಿಘಂಟಿನಲ್ಲಿ ಆಱುಮೊಗದ ಕುಮಾರ ಎಂಬ ಶಬ್ದವನ್ನು ಷಣ್ಮುಖನಿಗೆ ಪರ್ಯಾಯ ವಾಚಕವಾಗಿ ದಾಖಲಿಸುವುದು ಸಾಧ್ಯವಿದೆ.

ಹಳೆಯ ಸಂಪಾದನೆಗಳ ವಿಚಾರ ಹೇಗೇ ಇರಲಿ. ಈಚಿನ ಸಂಪಾದನೆಗಳಲ್ಲಿ ಕೂಡ ಶಬ್ದಾರ್ಥ ವಿಮರ್ಶೆಯ ಟಿಪ್ಪಣಿಗಳನ್ನೂ ಲೇಖನಗಳನ್ನೂ ಗ್ರಂಥದ ಸಂಪಾದಕರು ಕಣ್ಣೆತ್ತಿಯೂ ನೋಡದಿರುವ ಕಾರಣದಿಂದಾಗಿ ಇಂತಹ ಅನವಧಾನದ ಪದಪಾತಗಳು ಹಾಗೆಯೇ ಉಳಿದುಕೊಳ್ಳುತ್ತಿವೆ.

ನಂಜುಂಡ ಕವಿಯ 'ರಾಮನಾಥ ಚರಿತ'ವೆಂಬ ಸಾಂಗತ್ಯ ಕಾವ್ಯದಲ್ಲಿ ಒಂದು ಪದ್ಯ ಹೀಗಿದೆ :

ಪನಿನೀರ ಕುಪ್ಪಿಗೆ ಕರ್ಪೂರದಂಡೆ ಪೂ
ವಿನ ಪೊಟ್ಟಣ ಮೃಗಮದದ
ತನಿಗಂಪಿನ ವೀಣೆ ಸಾದಿನ ಭರಣಿಗ
ಳನಲ ಕೊಂಡಕೆ ಹಾಕಿದರು ॥ (೩೬-೧೫೩)

ಕುಮಾರರಾಮನ ಪತ್ನಿಯರ ಸಹಗಮನಕ್ಕೆ ಅಗ್ನಿಕುಂಡವನ್ನು ಸಿದ್ಧಪಡಿಸಿದ ವಿಚಾರ ಈ ಪದ್ಯದ ವರ್ಣನಾಂಶ. ಪನ್ನೀರು-ಕುಪ್ಪಿಗೆ, ಕರ್ಪೂರ-ಅಂಡೆ, ಪೂವು-ಪೊಟ್ಟಣ, ಮೃಗಮದದ ತನಿಗಂಪು-ವೀಣೆ, ಸಾದು-ಭರಣಿ, ಕುಪ್ಪಿಗೆ, ಅಂಡೆ, ಪೊಟ್ಟಣ,

ಭರಣಿ ಇವು ಮೇಲುನೋಟದಲ್ಲಿಯೇ (ಕಾಣುವಂತೆ ವಸ್ತುವಿನ ಧಾರಕಗಳು; ಆದರೆ ಇವುಗಳ ನಡುವೆ ಬಂದಿರುವ ವೀಣೆ ಧಾರಕವಲ್ಲ. ಉಳಿದ ವಿವರಗಳ ಸಾಹಚರ್ಯದಿಂದ ಅಲ್ಲಿ ಏನೋ ತಪ್ಪು ಬಿದ್ದಿರುವುದನ್ನು ಸುಲಭವಾಗಿ ಊಹಿಸಬಹುದು. ಪರಾಮರ್ಶೆಯಿಂದ ಇಲ್ಲಿ "ಮೃಗಮದದ ತನಿಗಂಪಿನಯೀಳೆ ಸಾದಿನ ಭರಣಿ" ಎಂದಿರುವುದು ತಿಳಿಯುತ್ತದೆ. ಉಚ್ಚಾರ ಮೂಲವಾಗಿಯೋ ಕಿವಿ ತಪ್ಪಿನಿಂದಾಗಿಯೋ ಶ > ಣ ಭ್ರಮೆಯುಂಟಾಗಿ ಹೀಗಾಗಿದೆ. (ಈಳೆಸಾಂದು>) ಈಳೆ ಸಾದು, ಈಳೆಯನ್ನು ಬಳಸಿ ಮಾಡಿದ ಸಾದು ಎಂಬುದು ಉಳಿದ ಪರಿಮಳ ದ್ರವ್ಯಗಳ ಸಾಹಚರ್ಯದಿಂದ ಸ್ಪಷ್ಟವಾಗುತ್ತದೆ. ಈ ಶಬ್ದಕ್ಕೆ ಕಾವ್ಯಪ್ರಯೋಗಗಳು ಸಾಕಷ್ಟು ಉಂಟು.

**೭. ವಿವೃತಿ ಅಥವಾ ವಿವರಣೆಯಿಂದಾಗುವ ಸಹಾಯ**

ಹಲವು ಶಬ್ದಗಳು ವಿಸ್ತೃತವಾದ ವಿವರಣೆಯನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತವೆ. ಇವನ್ನು ತಕ್ಕ ವಿವರಣೆಗಳೊಂದಿಗೆ ಅರ್ಥ ಮಾಡಿಕೊಂಡು ನಿಘಂಟುಗಳಲ್ಲಿ ದಾಖಲಿಸಬೇಕಾಗುತ್ತದೆ. ಈ ವಿವರಣೆಗಳು ಶಾಸ್ತ್ರ ಗ್ರಂಥಗಳ ಇಲ್ಲವೆ ಅನ್ಯ ಉಪಯುಕ್ತ ಆಕರಗಳ ಮೂಲಕ ಆಗಬೇಕಾಗುತ್ತದೆ.

ಈಚೆಗೆ, ಬಾಲವೈದ್ಯರ ಚೆಲುವನೆಂಬ ಕವಿಯ 'ರತ್ನಶಾಸ್ತ್ರ' ಎಂಬ ಗ್ರಂಥವನ್ನು ಸಂಪಾದಿಸುವ ಸಂದರ್ಭ ಬಂತು. ಅಲ್ಲಿಯ ಕೆಲವು ಶಬ್ದಗಳು ಅಂತಹ ವಿವರಣೆಯನ್ನು ಬಯಸುವ ಅವಕಾಶಗಳನ್ನು ಕೊಟ್ಟವು. ಇದಕ್ಕಾಗಿ ನಾನು ಉಕ್ತಗ್ರಂಥದ ಮೂಲವಾದ ಅಗಸ್ತ್ಯಕೃತ 'ನವರತ್ನ ಮಣಿ ಮಾಹಾತ್ಮ್ಯ' ಮತ್ತು ಕೆಳದಿ ಬಸವರಾಜನ 'ಶಿವತತ್ತ್ವ ರತ್ನಾಕರ' ಎಂಬ ಸಂಸ್ಕೃತ ಆಕರಗಳನ್ನು ಪರಿಶೀಲಿಸಬೇಕಾಗಿ ಬಂದಿತು. ಉದಾಹರಣೆಗೆ ಕನ್ನಡ ರತ್ನಶಾಸ್ತ್ರದ 'ನೀಲದ ಕಲ್ಪ' ಎಂಬ ಮೂರನೆಯ ಭಾಗದಲ್ಲಿ 'ತೃಣಗ್ರಾಹಿಯಿಂದ್ರನೀಲ' ಎಂಬ ವಿಶಿಷ್ಟ ರತ್ನದ ಪ್ರಸ್ತಾವವಿದೆ (ಪ. ೭; ವ. ೧೦) ಈ ಜಾತಿನಾಮದ ಅರ್ಥವನ್ನು "ಶಾಖ ಹುಟ್ಟುವಂತೆ ಉಜ್ಜಿದಾಗ ತೃಣವನ್ನು ಸೆಳೆದುಕೊಳ್ಳುವ ಶಕ್ತಿಯಿರುವ ನೀಲರತ್ನ'' ಎಂಬುದಾಗಿ ಇಂಥ ಮೂಲಗಳನ್ನು ನೋಡಿ ತಿಳಿಯಬೇಕಾಗುತ್ತದೆ. ಹಾಗೆಯೇ ಮೊದಲನೆಯ ವಜ್ರಕಲ್ಪದಲ್ಲಿ ಹಸ್ತಸಂಜ್ಞೆ ಎಂಬ ಮಾತಿದ್ದು, ಇದಕ್ಕೆ "ಕೈಯಿಂದ ಮಾಡುವ ಸನ್ನೆಗಳು" ಎಂದು ಅರ್ಥ ಹೇಳಿದರಾಗದು. ಮಾತಿಲ್ಲದೆ, ಕೈಬೆರಳ ಸನ್ನೆಗಳಿಂದಲೇ ರತ್ನದ ಬೆಲೆಯನ್ನು ತಿಳಿಸಿಕೊಡುವ ಒಂದು ವಿಶಿಷ್ಟವಾದ ಪದ್ಧತಿಯೆಂಬ ಅರ್ಥ ವಿವರಣೆಯನ್ನು, ಆ ಬಗ್ಗೆ ವಿಸ್ತೃತ ವಿವರಣೆಯಿರುವ ಶಿವತತ್ತ್ವ ರತ್ನಾಕರದ ಸಂಬಂಧಪಟ್ಟ ಶಾಸ್ತ್ರಭಾಗದ (೬-೧೭-೧೮೦ ರಿಂದ ೧೮೭) ಪರಿಶೀಲನೆಯಿಂದ ಸ್ಪಷ್ಟ ಮಾಡಿಕೊಳ್ಳಬೇಕಾಗುವುದು. ದನಗಳ ವ್ಯಾಪಾರದಲ್ಲಿ ಕೂಡ ಈ ಪದ್ಧತಿಯ ಅನುಸರಣೆಯುಂಟು ಎಂದು ಬಲ್ಲವರು ಹೇಳುತ್ತಾರೆ.

ಚೆಲುವನ ಕೃತಿಯಲ್ಲಿಯೇ 'ನಯನ ಕಾಂತಿಯ ನ್ಯಾಯ', 'ರತ್ನಗುಂಜಿಯ ನ್ಯಾಯ' ಎಂಬ ಎರಡು ನ್ಯಾಯಗಳ ವಿವರಣೆಗೆ ಕೂಡ ನಾನಾ ನ್ಯಾಯ ವಿವರಣೆಯ ಕೋಶಗಳನ್ನು ಶೋಧಿಸಿ ತಿಳಿಯಬೇಕಾಗುವುದು. ನಾನು ಓದಿದ ಕೋಶಗಳಲ್ಲಿ ಈ ನ್ಯಾಯಗಳ ವಿವರಣೆ ನನಗೆ ದೊರೆಯಲಿಲ್ಲ.

೮. ಸಿದ್ಧಪದ ಸಾನ್ನಿಧ್ಯದ ಸಹಾಯ

ಶಬ್ದವೊಂದರ ರೂಪವೂ ಅರ್ಥವೂ ಅನಿಶ್ಚಿತವಾಗಿದ್ದಾಗ ಆ ಶಬ್ದದ ಹೆಚ್ಚಿನ ಪ್ರಯೋಗಗಳು ಒಬ್ಬನೇ ಕವಿಯ ಕಾವ್ಯದಲ್ಲಿ ಅಥವಾ ಆತನದೇ ಬೇರೆ ಕಾವ್ಯಗಳಲ್ಲಿ ಎಲ್ಲೆಲ್ಲಿ ಬಂದಿವೆಯೆಂಬುದನ್ನು ಒಗ್ಗೂಡಿಸಿಕೊಂಡು ತುಲನಾತ್ಮಕವಾಗಿ ವಿಮರ್ಶಿಸಿ ನಿಶ್ಚಯಿಸಬೇಕಾಗುವುದು. ಅಲ್ಲದೆ ಇತರ ಕವಿಗಳ ಕಾವ್ಯಗಳಿಂದಲೂ ಪ್ರಯೋಗಸಿದ್ಧವಾಗಿ ಅದು ಕಂಡುಬರುತ್ತಿದ್ದರೆ ಆ ನಿಶ್ಚಯ ಇನ್ನೂ ಬಲಗೊಳ್ಳುತ್ತದೆ ಎನ್ನಬಹುದು.

ಅಷ್ಟು ಪರಿಚಿತವಲ್ಲದ, ಹಳಗನ್ನಡ ವೈಯಾಕರಣರ ಕಣ್ಣನ್ನೂ ತಪ್ಪಿಸಿರುವ, ತಿರಸ್ಕಾರ ಸೂಚಕ 'ತೆ' ಎಂಬ ಅವ್ಯಯವನ್ನು ಮೊದಲ ಸಲ ಬಿ.ಎಂ. ಶ್ರೀಕಂಠಯ್ಯನವರು ಬಹುಶಃ ಅಂತಸ್ಸಂಭಾವ್ಯತೆಯಿಂದ ಪಂಪಭಾರತದ ಪದ್ಯವೊಂದರ ಅರ್ಥವನ್ನು (೬–೪೨) ವಿದ್ಯಾರ್ಥಿಗಳಿಗೆ ವಿವರಿಸುವಾಗ ಗುರುತಿಸಿದ್ದು, ಮುಂದೆ ಪ್ರಾಚೀನ ಪಠ್ಯಗಳಲ್ಲಿ ಆ ಅವ್ಯಯದ ಇನ್ನಿತರ ಪ್ರಯೋಗಗಳನ್ನು ಗುರುತಿಸಲು ಅವಕಾಶ ಮಾಡಿಕೊಟ್ಟಿತು. ನಾನು ಅನಂತರದಲ್ಲಿ ಅಜಿತಪುರಾಣ (೨–೯೧), ಇಮ್ಮಡಿ ಗುರುಸಿದ್ಧನ ಹಾಲಾಸ್ಯ ಪುರಾಣ (೩.೫–೧೭), ಲೀಲಾವತೀ ಪ್ರಬಂಧ (೯–೮೨), ಚೌಂಡರಸನ ನಳಚಂಪು (ಪ. ೭೫೮), ಬ್ರಹ್ಮಶಿವನ ಸಮಯ ಪರೀಕ್ಷೆ (೬–೨೧, ೮–೨೪೮, ೧೧–೧೩೨) ಹೀಗೆ ಕೆಲವು ಮೂಲಗಳಲ್ಲಿ ಅವುಗಳ ಸಂದರ್ಭವನ್ನು ಗುರುತಿಸುವುದು ಸಾಧ್ಯವಾಯಿತು. ಈ ಮೊದಲೇ ಜಗನ್ನಾಥ ವಿಜಯ (೧–೧೩), ಜೀವ ಸಂಬೋಧನ (೬–೨೫) ಈ ಕಾವ್ಯ ಪ್ರಯೋಗಗಳು ಗಮನಕ್ಕೆ ಬಂದಿದ್ದುವು. ನನ್ನ ಕಣ್ಣು ತಪ್ಪಿಸಿದ್ದ ಪಂಪಭಾರತದ ಇನ್ನೊಂದು ಪ್ರಯೋಗವನ್ನು (೧೨–೩೭) ಡಾ. ಉ. ಶಂಕರನಾರಾಯಣ ಭಟ್ಟರು ನನ್ನ ಗಮನಕ್ಕೆ ತಂದರು. ಇವು ಒಂದು ರೀತಿಯಲ್ಲಿ ಸಿದ್ಧಪದ ಸಾನ್ನಿಧ್ಯದ ಬಲದಿಂದ ಗುರುತು ಹತ್ತಿದ ಪ್ರಯೋಗಗಳು.

ಕರ್ಣಪಾರ್ಯನ 'ನೇಮಿನಾಥ ಪುರಾಣ'ದಲ್ಲಿ ವಿಂಧ್ಯಕನೆಂಬ ಪುಳಿಂದ ನಾಯಕನ ಪತ್ನಿಯ ಹೆಸರು ವಾಗುರೆ ಎಂದಿದೆ (೧–೭೪, ೭೪ ವ). ಆದರೆ ಮುಂದೆ ಎರಡು ಕಡೆ ವಾಗ್ವರೆ ಎಂದಿದೆ (೧–೭೭ ವ, ೮೦ ವ.). ಎರಡು ಕಡೆಗಳಲ್ಲೂ ಪಾಠಾಂತಗಳನ್ನು ತೋರಿಸಿಲ್ಲ. ಇವುಗಳಲ್ಲಿ ಯಾವ ರೂಪ ಸರಿ? ಸಂಸ್ಕೃತದಲ್ಲಿ ವಾಗುರಾ ಎಂದರೆ ಬೇಟೆಗೆ ಬಳಸುವ ಬಲೆ ಎಂದರ್ಥ. ಈಯರ್ಥದ ಹೆಸರು ಬೇಟೆಗಾರನ ಪತ್ನಿಗೆ ಸಾಂಕೇತಿಕವಾಗಿ ಒಪ್ಪುತ್ತದೆ. ಅಲ್ಲದೆ ಅರ್ಥನೇಮಿ ಪುರಾಣದಲ್ಲಿ ವಾಗುರೆ ಎಂದೇ ಹೇಳಿದೆ (೩–೫೫, ೭೪ ವ., ೭೮ ವ.ಇ.).

ಇನ್ನೊಂದು ಉದಾಹರಣೆ: ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನಲ್ಲಿ ನಳಿದೋಳ್ ಎಂಬ ಪದ ಮುಖ್ಯೋಲ್ಲೇಖವಾಗಿ ಬಂದಿದೆ. ಇದಕ್ಕೆ ಪರ್ಯಾಯ ರೂಪಗಳಾಗಿ ನಳಿತೋಳ್, ನಳಿತೋಳು ಎಂಬ ರೂಪಗಳನ್ನು ತೋರಿಸಿದೆ. ದಿಟವಾಗಿ ಇದೊಂದು ಪ್ರಮಾದ. ಈ ಪ್ರಮಾದವನ್ನು ನಾನು ಸಕಾರಣವಾಗಿ ಸಂಪಾದಕ ಸಮಿತಿಯ ಸಭಾ ಕಲಾಪದ ವೇಳೆ ಚರ್ಚಿಸಿ, ನಳಿತೋಳ್ ಎಂಬುದೇ ಮುಖ್ಯೋಲ್ಲೇಖವಾಗಿ ದಾಖಲಾಗಬೇಕೆಂದು ವಾದಿಸಿದರೂ, ನನ್ನ ದುರ್ದೈವದಿಂದ ಅದು ವ್ಯರ್ಥಾಲಾಪ

ವಾಯಿತು. ಅದು ಆ ಶಬ್ದದ ದುರ್ದೈವ ಕೂಡ. ಶಬ್ದಮಣಿ ದರ್ಪಣದಲ್ಲಿ ವರ್ಗಪ್ರಥಮಾಕ್ಷರಗಳಿಗೆ ಅವುಗಳ ತೃತೀಯಾಕ್ಷರಗಳು ಸಂಧಿಕಾರ್ಯದಲ್ಲಿ ಬರುವುದೆಂದು ಹೇಳುವ ಸೂತ್ರದಲ್ಲಿ (೭೫) ಬಹುಳಕ್ಕೆ ಕೊಟ್ಟ ಉದಾಹರಣೆಗಳ ಸಾಲಿನಲ್ಲಿ ನಳಿತೋಳ್ ಎಂಬುದನ್ನು ಸೇರಿಸಲು ಕೇಶಿರಾಜನು ಮರೆತಿರುವುದರ ಫಲವಿದು. ದಿಟವಾಗಿ ಆದೇಶ ರೂಪಗಳ ಉದಾಹರಣೆಗಳು (ಪುಷ್ಪದಂತಪುರಾಣ ೭-೨೯; ಕುಸುಮಾವಳೀ ಕಾವ್ಯ ೧೧-೧೬೫) ಪ್ರಾಚೀನ ಕಾವ್ಯ ಪ್ರಯೋಗಗಳಿಗೂ ವ್ಯಾಕರಣದ ವಿಧಿಗೂ ಸಲ್ಲದ ಲಿಪಿಕಾರ ಪ್ರಮಾದದ ರೂಪಗಳು. ಪುಷ್ಪದಂತ ಪುರಾಣದಲ್ಲಿಯೇ ನಳಿತೋಳ್ ಎಂಬ ಸರಿಯಾದ ಪ್ರಯೋಗವೇ ಇನ್ನೊಂದೆಡೆ ಉಂಟು (೯-೬೮), ಪಂಪಾದ್ಯರ ಕೃತಿಗಳು ಕೂಡ ನಳಿತೋಳ್ ಎಂಬ ರೂಪವನ್ನೇ ಸರ್ವತ್ರ ಸಮರ್ಥಿಸುತ್ತವೆ ಎನ್ನುವುದನ್ನು ತಪ್ಪದೆ ಗಮನಿಸಬೇಕು.

ಈವರೆಗೆ ವ್ಯಾಕರಣಾದಿಯಾದ ಎಂಟು ಸಾಧನೋಪಾಯಗಳ ಸಂಬಂಧದಲ್ಲಿ ನನ್ನ ಶೋಧನೆಯಗಳನ್ನು ವಿಶೇಷವಾಗಿ ಲಕ್ಷಿಸಿ ಶಬ್ದಾರ್ಥ ನಿರ್ಣಯ ಹೇಗೆ ಸಾಧ್ಯವಾಗಬಹುದು ಎಂಬುದನ್ನು ನಿರೂಪಿಸಿದ್ದೇನೆ. ಆದರೆ ಯಾವ ಉಪಾಯವೂ ಕೆಲಸಕ್ಕೆ ಬಾರದೆ ಹೋಗುವ, ಅವಶ್ಯವಾಗಿ ನೈಘಂಟುಕ ವ್ಯಾಪ್ತಿಗೆ ಬರುವ ಅನೇಕ ಶಬ್ದಗಳು ಹಾಗೆಯೇ ಉಳಿದುಕೊಳ್ಳುವುವು. ಇವುಗಳ ಅರ್ಥ ನಿರ್ಣಯಕ್ಕೆ ಏಕೈಕ ಆದ ಪ್ರಯೋಗವೋ ವಿರಳ ಪ್ರಯೋಗಗಳೋ ಮಾತ್ರವೇ ಗೋಚರಿಸುತ್ತಿರುವುದು ತೊಡಕಾಗಿ ಕುಳಿತಿವೆ; ನಾವು ನಿರುಪಾಯರಾಗುವಂತೆ ಮಾಡಿವೆ. ಉದಾಹರಣೆಗೆ ದೇಹದ ಅಂಗಭಾಗಗಳಾಗಿರುವ ತೊಳಂಕು-ತೊಳಕು, ಕರ್ಚರೆ-ಕರ್ಜರೆ, ಅಜ್ಜೆಜಿ, ಪಂಚರಾಯುಧ, ಸಟ್ಟಂಗ, ಮರಸುರಿಗೆ, ರಸತ್ತಾರುಗ ಇಂಥವು ಈ ಗುಂಪಿಗೆ ಸೇರಿವೆ.

ನನ್ನ ಗಮನಕ್ಕೆ ಬಂದ ಮಟ್ಟಿಗೆ ಕಾವ್ಯಾವಲೋಕನದಲ್ಲಿ ಕಾಣಿಸಿಕೊಂಡಿರುವ (ಪ. ೩೪೭) ನೇಸನ್ನಿಕೆ ಪದಕ್ಕೆ ಇರುವುದು ಒಂದೇ ಪ್ರಯೋಗ.

ಬೇಸಱಿದಾಸಱಿದೆ ವನಾ
ವಾಸಂಗಳೊಳುನ್ನತಿಕ್ಕೆ ನಿಲೆ ನಮೆದವರೊಳ್
ನೇಸನ್ನಿಕೆಯಿಂ ಕುರುಪತಿ
ಬೀಸರಮಂ ನುಡಿಯದೊಳ್ಳಿತಂ ನುಡಿದಪನೇ ॥

ತೀ.ನಂ. ಶ್ರೀಕಂಠಯ್ಯನವರು ಕಾವ್ಯಾವಲೋಕನದ ತಮ್ಮ ಸ್ವಂತ ಪ್ರತಿಯಲ್ಲಿ ತ. ನೇಶನ್ = ಸ್ನೇಹ ಎಂದು ಗುರುತಿಸಿಕೊಂಡಿದ್ದುದನ್ನು ನಾನು ಗಮನಿಸಿ, ಆ ಅರ್ಥದೊಂದಿಗೆ ಆ ಪದ ಕನ್ನಡ ನಿಘಂಟುವಿನಲ್ಲಿ ದಾಖಲಾತಿ ಪಡೆಯುವಂತೆ ಮಾಡಿದೆ. ಸ್ವಾರಸ್ಯವೆಂದರೆ ತಮಿಳು ಭಾಷೆಯ ಪರಿಣತಿಯಿದ್ದ ಆರ್. ನರಸಿಂಹಾಚಾರ್ಯರು 'ನೀಸನ್ನಿಕೆಯಿಂ' ಎಂಬ ಭಿನ್ನಪಾಠವನ್ನು ಬಿಟ್ಟು 'ನೇಸನ್ನಿಕೆಯಿಂ' ಎಂಬ ಪಾಠವನ್ನು ಪುರಸ್ಕರಿಸಿದ್ದು ಬಹು ಭಾಷಾ ಪರಿಚಯವೂ ಪಾಂಡಿತ್ಯವೂ ಇದ್ದಲ್ಲದೆ ಇಂಥ ಪಾಠ ಸ್ವೀಕೃತಿಯೂ ಅರ್ಥ ವಿವರಣೆಯೂ ಶಕ್ಯವಾಗುವುದಿಲ್ಲ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# ೧೧. ಅತ್ತಿಮಬ್ಬೆ ಪ್ರತಿಷ್ಠಾನದ ಮನುಶ್ರೀ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತ ಡಾ. ವರದಾ ಶ್ರೀನಿವಾಸ ಅವರನ್ನು ಕುರಿತ ಅಭಿನಂದನಾ ನುಡಿ

**–ಹೆಚ್.ವಿ. ರಾಮಚಂದ್ರರಾವ್***

ವಸ್ತು ನಿಷ್ಠ ಗ್ರಹಿಕೆ ವಾಸ್ತವದ ಬೆಳಕು
ರಚನೆಯೇ ಕೃಷಿ ಸಾಹಿತ್ಯದ ರಸಋಷಿ
ದಾರ್ಶನಿಕ ದೃಷ್ಟಿ ಧನಾತ್ಮಕ ಚಿಂತನೆ
ಮೇಳೈಸಿದಾ ಮೂರ್ತಿ...**ವರದಾ ಶ್ರೀನಿವಾಸ**

ಮಧುರ ನುಡಿಗಳ ಮಂಗಳ ಮೂರುತಿ
ನೋಂಪಿಯೊಲು ದಾನವ ಕೈಗೊಂಡ ಖ್ಯಾತಿ
ಹದಿಬದೆಯ ಧರ್ಮದಲಿ ಅತ್ತಿಮಬ್ಬೆಯಂತಾಗಿ
ರಿಸಿಬದುಕ ನಡೆಸಿದಾ ಆದರ್ಶ ನಾರಿ...**ಮನೋಹರಿ ಪಾರ್ಥಸಾರಥಿ**

ಕರ್ನಾಟಕದ ಅವಿಭಾಜ್ಯ ಅಂಗವಾಗಿದ್ದ ಕಾಸರಗೋಡಿನಲ್ಲಿ ಅರಳಿದ ಕಮನೀಯ ಪುಷ್ಪಗಳೆನಿತೊ! ಬೇರು ಅಲ್ಲಿ, ಬೆಳಕು ಇಲ್ಲಿ. ಆ ನೆಲದ ಮಣ್ಣಿನ ವಾಸನೆಯನ್ನು ಮೈಗೂಡಿಸಿಕೊಂಡು ಗಡಿ ನಮ್ಮದಲ್ಲದಿದ್ದರೂ ನುಡಿಯನ್ನು ತಮ್ಮದಾಗಿಸಿಕೊಂಡು ತೆಂಕಣ ಪಡುವಣ ಗಾಳಿ ಸೋಂಕಿ ಒಳ್ನುಡಿಗಳೇಳ್ದು ಮೂಡಲ ಪಾಳೆಯದಲ್ಲಿ ಛಾಪು ಮೂಡಿಸಿದ ಹಿರಿಯ ಲೇಖಕಿ ಡಾ. ವರದಾ ಶ್ರೀನಿವಾಸ ಅವರು.

ನೃತ್ಯ ಸಂಗೀತವನ್ನು ಬದುಕಿನ ಅವಿಭಾಜ್ಯ ಅಂಗವಾಗಿಸಿಕೊಂಡು ಅತ್ತಿಮಬ್ಬೆ ಪ್ರತಿಷ್ಠಾನದ ಮೂಲಕ ಪಾಲಕರಾಗಿ, ಪೋಷಕರಾಗಿ ಸಾಹಿತ್ಯಶ್ರೀಗೆ ಪ್ರೋತ್ಸಾಹ ನೀಡುತ್ತಾ ಅಭಿನವ ಅತ್ತಿಮಬ್ಬೆ ಎನಿಸಿಕೊಂಡವರು. ಮೃದು ಮಧುರ ಮನಸ್ಸಿನ ಮನೋಹರಿ ಪಾರ್ಥಸಾರಥಿಯವರು.

---

* ಆಂ.ಆ. ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, # ೪೦೯/ಎ, ಸರ್.ಎಂ. ವಿಶ್ವೇಶ್ವರಯ್ಯ ಬಡಾವಣೆ, ೩ನೇ ಬ್ಲಾಕ್, ಉಲ್ಲಾಳ ಮುಖ್ಯರಸ್ತೆ, ಜ್ಞಾನಭಾರತಿ ೨ನೇ ಬಡಾವಣೆ, ಬೆಂಗಳೂರು–೫೬೦೦೫೬. ಮೊ: ೯೮೪೫೮೬೮೬೮೪.

ಡಾ. ವರದಾ ಶ್ರೀನಿವಾಸ ಮತ್ತು ಮನೋಹರಿ ಪಾರ್ಥಸಾರಥಿಯವರದು ಅನನ್ಯ ಸ್ನೇಹ. ದೇಹವೆರಡು ಪ್ರಾಣವೊಂದು ಎಂಬಂತೆ ಬದುಕಿನುದ್ದಕ್ಕೂ ಬೆಳೆದು ಬಂದವರು. ಒಬ್ಬರು ಕಲೆ, ದಾನದಲ್ಲಿ ಕೈ ಎತ್ತಿದರೆ, ಮತ್ತೊಬ್ಬರು ಸಾಹಿತ್ಯದಲ್ಲಿ ಮೇಲುಗೈಯಾದವರು. ಈ ಬಂಧ ಅವಿನಾಭಾವ ಸಂಬಂಧ. ಆದರೆ ಮಂಗಳದ ಬೆಳಗೆ ಇಂಗಳದ ಮಳೆ ಸುರಿದಂತೆ ಬದುಕಿನಂಗಳದಿಂದ ದೂರ ಹೊರಟವರು ಮನೋಹರಿ ಪಾರ್ಥಸಾರಥಿಯವರು.

ಈ ದಿನ ಅತ್ತಿಮಬ್ಬೆ ಪ್ರತಿಷ್ಠಾನದ ಮನುಶ್ರೀ ರಾಷ್ಟ್ರೀಯ ಪ್ರಶಸ್ತಿಗೆ ಭಾಜನರಾಗಿರುವ ಡಾ. ವರದಾ ಶ್ರೀನಿವಾಸ ಅವರ ಬಗ್ಗೆ ಅಭಿನಂದನಾ ನುಡಿಗಳನ್ನು ನುಡಿಯಲು ಹೆಮ್ಮೆಯೆನಿಸುತ್ತದೆ.

ಡಾ. ವರದಾ ಶ್ರೀನಿವಾಸ ಕನ್ನಡ ಸಾರಸ್ವತ ಲೋಕದಲ್ಲಿ ಒಡಮೂಡಿರುವ ಹಿರಿಯ ಹೆಸರು. ಶ್ರೀಮಂತಿಕೆಯ ವಂಶದಲ್ಲಿ ಹುಟ್ಟಿದವರನ್ನು ಬಾಯಲ್ಲಿ ಬೆಳ್ಳಿ ಚಮಚದೊಂದಿಗೆ ಹುಟ್ಟಿ ಬಂದವರೆಂದು ಕರೆಯುವುದು ರೂಢಿ. ಸಂಸ್ಕಾರ, ಸಂಸ್ಕೃತಿ, ಸಾಹಿತ್ಯಗಳ ಸಮ್ಮೇಳನಗೊಂಡ ಸಂಗಾತಿಗಳಿಗೆ ಸರಸ್ವತಿಯನ್ನೇ ಹುಟ್ಟುವಾಗಲೇ ನಾಲಗೆಯಲ್ಲಿ ಪಡೆದ ಅಪೂರ್ವ ಅದೃಷ್ಟದ ಪ್ರತಿಭಾವಂತೆ ಡಾ. ವರದಾ ಶ್ರೀನಿವಾಸ.

ತಾಯಿ ಶ್ರೀಮತಿ ಪಿ.ಕೆ. ಸುಂದರಿ, ತಂದೆ ವಿದ್ವಾನ್ ಪಿ.ಕೆ. ನಾರಾಯಣ ಕವಿಯಾಗಿ, ನಾಟಕಕಾರರಾಗಿ, ಅನುವಾದಕರಾಗಿ, ಸಂಪಾದಕರಾಗಿ, ಪತ್ರಕರ್ತರಾಗಿ, ಗಾಂಧೀವಾದಿಯಾಗಿ, ಸಮಾಜ ಸೇವಕರಾಗಿ ತಮಗೆ ನಿರ್ವಹಿಸಿದ ಕೆಲಸವನ್ನು ಯಶಸ್ವೀಗೊಳಿಸಿದ ಧೀಮಂತ ಚೇತನ. ಡಾ. ಶಿವರಾಮ ಕಾರಂತರಿಂದ "ಆತನ ಒಂದು ದೊಡ್ಡ ಗುಣ, ಯಾವ ಕೆಲಸವನ್ನು ವಹಿಸಿಕೊಂಡರೂ ಒಂದಿಷ್ಟು ಆಲಸ್ಯವಿಲ್ಲದೆ ದುಡಿಯತಕ್ಕ ಬುದ್ಧಿ. ಅದರಿಂದ ಆತನ ವಿದ್ವತ್ತು ಬೆಳೆದಿದೆ. ಪ್ರತಿಷ್ಠೆಯೂ ಹೆಚ್ಚಿದೆ. ಅದೊಂದರಿಂದಲೂ ಅಹಂಕಾರ ಮಾತ್ರ ಹುಟ್ಟಲಿಲ್ಲ. ನಾನು ಆತನನ್ನು ಕಂಡಂದಿನಿಂದ ತನ್ನ ಕೊನೆಯ ಗಳಿಗೆಯವರೆಗೂ ವಿನಯ ಸಂಪನ್ನನಾಗಿ ಬಾಳಿದವ ಪಿ.ಕೆ. ನಾರಾಯಣ" ಎಂದು ಹೊಗಳಿಸಿಕೊಂಡವರು. ಇಂತಹ ಸಾಹಿತ್ಯ ಪರಿಸರದಲ್ಲಿ ತಂದೆಯವರ ಸ್ನೇಹಿತರಾದ ಕೈಯಾರ, ಇದಿನಬ್ಬ, ಬಾಳಿಗಾ, ಪಡುಕೋಣೆ, ಹೆಗಡೆ, ಕಾರಂತ, ಸೇಡಿಯಾಪು, ಕಡೆಂಗೋಡ್ಲು ಮುಂತಾದವರ ಪ್ರಭಾವದಿಂದಾಗಿ ಒಂದು ಚೇತನವರಳಲು ಭೂಮಿಕೆ ಸಿದ್ಧವಾಗಿತ್ತು.

ಬದುಕಿನ ಯಾನದಲ್ಲಿ ಮಂಗಳೂರಿಗೆ ಪಯಣ. ಎಂ.ಎ. ರಾಷ್ಟ್ರಭಾಷಾ ವಿಶಾರದ (ಹಿಂದಿ), ವಿಶಾರದ (ಸಂಸ್ಕೃತ) ವಿದ್ಯೆ ಮುಗಿಸಿದ ನಂತರ ತಂದೆ ಕರ್ತವ್ಯ ನಿರ್ವಹಿಸಿದ್ದ ಕಾಲೇಜಿನಲ್ಲಿಯೇ ಉಪನ್ಯಾಸಕ ವೃತ್ತಿ. ಮದುವೆಯ ನಂತರ ಬೆಂಗಳೂರಿಗೆ ಪಯಣ. ಭಾಷಾಂತರ ಇಲಾಖೆಯಲ್ಲಿ ಸರ್ಕಾರಿ ಸೇವೆ. ಸಾಹಿತ್ಯದ ಕರೆಗೆ ಓಗೊಟ್ಟು ಸ್ವಯಂ ನಿವೃತ್ತಿ. ಸತತ ೪೦ ವರ್ಷಗಳಿಂದಲೂ ೪೦ಕ್ಕೂ ಹೆಚ್ಚು ಕೃತಿಗಳಿಂದ ನಿರಂತರ ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡಿರುವ ಸಾಹಿತ್ಯ ಋಷಿ ಡಾ. ವರದಾ ಶ್ರೀನಿವಾಸ.

ಡಾ. ಹಂಪನಾ ಅವರ ಮಾರ್ಗದರ್ಶನದಲ್ಲಿ ಮಂಡಿಸಿದ ಮಹಾಪ್ರಬಂಧ 'ಪಂಜೆ ಮಂಗೇಶರಾಯರ ಕೃತಿಗಳು ಒಂದು ಅಧ್ಯಯನ.' ಸಮೃದ್ಧ ಹಾಗೂ ಸಾರ್ಥಕ ಬದುಕು ಬರಹಗಳಿಂದ ದೊಡ್ಡ ಆದರ್ಶವನ್ನು ಬಿಟ್ಟು ಹೋದ ಪಂಜೆಯವರ ಸಿದ್ಧಿ ಸಾಧನೆಗಳನ್ನು ಅದರೆಲ್ಲ ಸಮಗ್ರತೆಯಲ್ಲಿ, ಸಂಕೀರ್ಣತೆಯಲ್ಲಿ ಶೋಧಿಸಿ ನೋಡುವ ಪ್ರಯತ್ನದ ಫಲ ಈ ಮಹಾ ಪ್ರಬಂಧ. ಪಂಜೆಯವರ ವ್ಯಕ್ತಿತ್ವ ಮತ್ತು ಕರ್ತೃತ್ವದ ಗುಣಾತ್ಮಕ ಆಯಾಮಗಳನ್ನು ವಸ್ತುನಿಷ್ಠ ಗ್ರಹಿಕೆಯಿಂದ, ವಾಸ್ತವದ ಬೆಳಕಿನಲ್ಲಿ ಪುನಸ್ಸಂಘಟಿಸುತ್ತ ರೂಪುಗೊಂಡಿರುವ ಮಹಾಪ್ರಬಂಧ. ಪಂಜೆಯವರ ಸಾಹಿತ್ಯ ದೀಪಿಕೆಯಾಗಿ ಈ ಮಹಾ ಪ್ರಬಂಧ ಆಕರ ಉದ್ದಕ್ಕೂ ಎದ್ದು ಕಾಣುತ್ತದೆ. ಸಂಗ್ರಹಿಸಿರುವ ವಿಪುಲವಾದ ಮಾಹಿತಿ, ಅದನ್ನು ವರ್ಗೀಕರಿಸಿ, ವಿವೇಚಿಸಿರುವ ಕ್ರಮ, ಪಂಜೆಯವರ ಪ್ರತಿಭೆಯ ಹೊಳಹುಗಳನ್ನು ಹಿಡಿದಿಡುವ ವಿಧಾನ, ಇವು ಡಾ. ವರದಾ ಶ್ರೀನಿವಾಸ ಅವರ ವ್ಯಾಸಂಗ ನಿಷ್ಠೆ ಹಾಗೂ ವಸ್ತುನಿಷ್ಠ ವಿಮರ್ಶನ ಪ್ರಜ್ಞೆಯನ್ನು ಬಿಂಬಿಸುತ್ತದೆ. ಈ ಮಹಾ ಪ್ರಬಂಧ ಸಾಹಿತ್ಯ ಲೇಖನಿಗೆ ಸಾಣೆ ಹಿಡಿದ ಕೃತಿಯಾಯಿತು, ಸಾಹಿತ್ಯಕ ದಿಕ್ಸೂಚಿಯಾಯಿತು. ಬದುಕು ಸಂಶೋಧನೆಗೆ ಮಾತ್ರ ಸೀಮಿತವಾಗದೆ ತಾವು ಆರಿಸಿಕೊಂಡ ವ್ಯಕ್ತಿಯ – ಪಂಜೆ ಮಂಗೇಶರಾಯರ–ಅಪ್ರಕಟಿತ ಬರಹಗಳನ್ನು ಸಂಪಾದಿಸಿ ಅಂಕಿತ ಪ್ರಕಾಶನದ ಮೂಲಕ ಹೊರಬರಲು ಕಾರಣೀಭೂತರಾದರು.

ಮುಂದಿನದು ಇತಿಹಾಸ. ವಿಮರ್ಶಾ ಕೃತಿಗಳಾಗಿ ಸಮ್ಮೇಲ, ಮಹಿಳೆ, ವೈಚಾರಿಕತೆ ಮತ್ತು ವಿಮರ್ಶೆ. ಮಕ್ಕಳ ಸಾಹಿತ್ಯಕ್ಕೆ ಡಾ. ಶಿವರಾಮ ಕಾರಂತರ ಕೊಡುಗೆ ಹಾಗೂ ಅರ್ಥೈಸಿದ ರೀತಿ, ಸಂಶೋಧನೆಯಲ್ಲಿ ಪಂಜೆ ಮಂಗೇಶರಾಯರ ಕೃತಿಗಳು – ಒಂದು ಅಧ್ಯಯನ, ಪ್ರೊ. ವಿ. ಕೃಷ್ಣಶೆಟ್ಟಿ – ಒಂದು ಅಧ್ಯಯನ, ಅವತಾರ ಶೃಂಗ – ಒಂದು ಅಧ್ಯಯನ. ಸಂಪಾದನೆಯಲ್ಲಿ ಸ್ಫಟಿಕ ಮಂಜೂಷ, ರಜತ ಸಿರಿ, ಸಾತತ್ಯ. ಶ್ರೀ ನುಡಿ ತತ್ತ್ವ ಚಿಂತನ, ಕಹಳೆ ಮತ್ತು ಹನ್ನೆರಡು ಕಥಾ ರತ್ನಗಳು. ಮಕ್ಕಳ ಸಾಹಿತ್ಯದಲ್ಲಿ ಪುಟ್ಟನ ಗಾಳಿಪಟ, ಪುಷ್ಪಕ ವಿಮಾನ, ಶೋಧ, ಪೌರಾಣಿಕ ಪಾತ್ರಗಳು, ಸಾಮಾಜಿಕ ಚಿತ್ರಗಳು, ಯಾರು ಶ್ರೇಷ್ಠರು, ಸ್ಮರಣೆ ಸೊಗಸು ಲಲಿತ ಪ್ರಬಂಧವಾದರೆ, ಮುಂಜಾವದ ಕನಸುಗಳು, ಸೂರ್ಯೋದಯ ಕವನ ಸಂಕಲನಗಳು. ಕನಸು ಮತ್ತು ವಾಸ್ತವಗಳ ನಡುವೆ ಕಥಾ ಸಂಕಲನ, ಸುಮಾನಸ ಪ್ರತಿಭಾ ಸಂಪನ್ನರು, ಕನ್ನಡ ಚಳುವಳಿ ಮತ್ತು ತಿ. ಶ್ರೀನಿವಾಸ ಹಾಗೂ ಮಾಚಿದೇವರ ಜೀವನಕ್ಕೆ ಸಂಬಂಧಿಸಿದಂತೆ ತಲಸ್ಪರ್ಶಿ ಅಧ್ಯಯನದೊಡನೆ ಒಂದು ಮಹಾನ್ ಕೃತಿ ಬಿಡುಗಡೆಗೆ ಸಿದ್ಧವಾಗುತ್ತಿದೆ. ಇದಲ್ಲದೆ ಇನ್ನೂ ಸುಮಾರು ಅನುವಾದ, ಐತಿಹಾಸಿಕ, ಪೌರಾಣಿಕ ಕಾದಂಬರಿ, ನಾಟಕಗಳು ಪ್ರಕಟಣೆಯ ಹಂತದಲ್ಲಿವೆ.

'ಸೂರ್ಯೋದಯ' ಮಕ್ಕಳ ಕವನ ಸಂಕಲನ. ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ನಡೆಯುವ ಮಕ್ಕಳ ಚಟುವಟಿಕೆಗಳು.

ಇರುಳು ಕಳೆಯಲು ರವಿಯು ಮೂಡಿದ
ಬಣ್ಣ ಚೆಲ್ಲಿತು ಗಗನದಿ
ಹಸಿರು ಚಿಗುರಲಿ ಇರುಳ ಹನಿಗಳು
ಬುವಿಯು ನೆನೆಯಿತು ಚಂದದಿ

ಮುತ್ತಿನ ಮಾಲೆಗಳಂತೆ ಸರಳ ಭಾಷೆಯಲ್ಲಿ ಕಿರಿದರೊಳು ಪಿರಿದರ್ಥವಂ ನೀಡುವ ಕವನಗಳಾಗಿವೆ.

ಅರ್ಥೈಸಿದ ರೀತಿಯ ಲೇಖನಗಳಲ್ಲಿ ವಿಶ್ಲೇಷಣೆ, ಸಂಶೋಧನೆ, ಸೀಳುನೋಟ, ಪರಾಮರ್ಶೆಯ ಜೊತೆಯಲ್ಲಿ ವಿವೇಚನೆ, ಸಮರ್ಥನೆಯ ಜೊತೆಯಲ್ಲಿ ನಿರ್ಣಯ, ಔಚಿತ್ಯ ಪೂರ್ಣವಾದ ವಿವರಗಳನ್ನು ಗಮನಿಸಬಹುದಾಗಿದೆ.

ಸರ್ಕಾರಿ ಸೇವೆ, ಅನೇಕ ಸಂಘ ಸಂಸ್ಥೆಗಳಲ್ಲಿ ಕಾರ್ಯನಿರ್ವಹಣೆ, ನೂರಾರು ಕಾರ್ಯಕ್ರಮಗಳಲ್ಲಿ ಭಾಗಿಯಾಗಿ ಮಂಡಿಸಿದ ಪ್ರಬಂಧಗಳು–ಹೀಗೆ ಇವರ ಬಹುಮುಖ ಪ್ರತಿಭೆ ಅನಾವರಣಗೊಂಡಿದೆ. ಸರಳ ಸೌಜನ್ಯತೆಯ ಪ್ರತೀಕವಾದ ಇವರನ್ನು ಅರಸಿ ಬಂದ ಪ್ರಶಸ್ತಿ ಪುರಸ್ಕಾರಗಳೆಷ್ಟೋ. ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ನೀಡಲಾದ ಕೆಂಪೇಗೌಡ ಪ್ರಶಸ್ತಿ, ಮಲ್ಲಿಕಾ ಪ್ರಶಸ್ತಿ, ಜಿ.ಪಿ. ರಾಜರತ್ನಂ ಪ್ರಶಸ್ತಿ, ಕನ್ನಡ ಸಂಸ್ಕೃತಿ ಇಲಾಖೆಯಿಂದ ಪ್ರಶಸ್ತಿ, ೧೯೯೨ರ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಪ್ರಶಸ್ತಿ ಧಾರವಾಡ ವಿದ್ಯಾವರ್ಧಕ ಸಂಘ, ಅತ್ತಿಮಬ್ಬೆ ಸಾಹಿತ್ಯ ಪ್ರಶಸ್ತಿ, ಸಮಗ್ರ ಸಾಹಿತ್ಯಕ್ಕೆ ಸುಭದ್ರಾ ಕುಮಾರಿ ಚೌಹಾನ್ ಜನ್ಮ ಶತಾಬ್ಧಿ ಪ್ರಶಸ್ತಿ (ಪಾಣಿಪತ್), ಅಮೇರಿಕಾದ 'ಅಮೇರಿಕನ್ ಬಯೋಗ್ರಾಫಿಕಲ್ ಇನ್ಸ್‌ಟಿಟ್ಯೂಟ್'ನ "ಪ್ರೊಫೆಷನಲ್ ವಿಮೆನ್ಸ್ ಅಡ್ವೈಸರಿ ಬೋರ್ಡಿನ ಗೌರವ ಸದಸ್ಯತ್ವ".

ಡಾ. ಕೆ.ಆರ್. ನಾರಾಯಣನ್ ಫೌಂಡೇಷನ್ ಟ್ರಸ್ಟ್‌ನ ವತಿಯಿಂದ "ಸುವರ್ಣ ಶ್ರೀ" ಪ್ರಶಸ್ತಿ, ಸುವರ್ಣ ಕರ್ನಾಟಕ ಸಾಂಸ್ಕೃತಿಕ ಅಕಾಡೆಮಿಯ ವತಿಯಿಂದ ವರ್ಷದ ವೀರ ಮಹಿಳೆ ಪ್ರಶಸ್ತಿ, ಪ್ರತಿಭಾವರ್ಧಕ ಅಕಾಡೆಮಿಯಿಂದ ಕರ್ನಾಟಕ ಭೂಷಣ ಪ್ರಶಸ್ತಿ, ವಿಶ್ವ ಕನ್ನಡ ಸಂಸ್ಥೆಯಿಂದ 'ವಿಶ್ವ ಕನ್ನಡ ಕಣ್ಮಣಿ' ಪ್ರಶಸ್ತಿ, "೨೦೧೦ರ ಡಾ॥ ಅನುಪಮಾ ನಿರಂಜನ ಪ್ರಶಸ್ತಿ" ಹಾಗೂ ಬೆಂಗಳೂರಿನಲ್ಲಿ ನಡೆದ ೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರು.

ತಂದೆಗೆ ತಕ್ಕ ಮಗಳಾಗಿ ಕೈಗೊಂಡ ಕಾರ್ಯ ಬಹು ದೊಡ್ಡದು. ಎಲೆಮರೆಯ ಕಾಯಂತೆ ಉಳಿದುಹೋಗಿದ್ದ ಕನ್ನಡ ಸೇನಾನಿಯನ್ನು ಹೊರ ತಂದವರೇ ಡಾ. ವರದಾ ಶ್ರೀನಿವಾಸ ಅವರು. ತಂದೆಯ ಅವನೇಕ ಕೃತಿಗಳು, ಕವನಗಳು ಪ್ರಕಟವಾಗಲು ಕಾರಣೀಭೂತರಾದುದಲ್ಲದೆ, ಛಲವಿಡಿದ ತ್ರಿವಿಕ್ರಮನಂತೆ ಹೋರಾಡಿ ಸರ್ಕಾರದ ವತಿಯಿಂದ ತಂದೆಯವರ ಭರತೇಶ ದಿನಚರಿ ಮೂರು ಭಾಗಗಳಲ್ಲಿ ಹಾಗೂ ಪಿ.ಕೆ. ನಾರಾಯಣ ಅವರ ಆಯ್ದ ಕವನಗಳು ಪ್ರಕಟವಾಗಲು ಹಾಗೂ ಅವರ ಜನ್ಮ ಶತಮಾನೋತ್ಸವವನ್ನು ಆಚರಿಸುವಂತೆ ಮಾಡಲು ಶ್ರಮಿಸಿದುದಲ್ಲದೆ, ಕುಟುಂಬದ

ವತಿಯಿಂದಲೂ ಹುಟ್ಟೂರಾದ ಪುತ್ತೂರು, ಮಂಗಳೂರು ಹಾಗೂ ಬೆಂಗಳೂರಿನಲ್ಲಿ ಶತಮಾನೋತ್ಸವವನ್ನು ಆಚರಿಸಿದ ಇವರ ಶ್ರಮ ಪ್ರಶಂಸನೀಯವಾದುದು. ತಂದೆಯ ಋಣವನ್ನು ಇದಕ್ಕಿಂತ ಮಿಗಿಲಾಗಿ ಹೇಗೆ ತೀರಿಸಲಾದೀತು!

೪೦ ವರ್ಷಗಳ ಸಾಹಿತ್ಯದ ಸಾರ್ಥಕ ಬದುಕನ್ನು ನನಗೆ ಕೊಟ್ಟಿರುವ ಅಲ್ಪಾವಧಿಯಲ್ಲಿ ಕಟ್ಟಿಕೊಡುವುದು ಕಷ್ಟಸಾಧ್ಯ. ಇದೊಂದು ಪಕ್ಷಿನೋಟವಷ್ಟೆ. ಅಗೆದಷ್ಟೂ ಅಮೂಲ್ಯ ರತ್ನಗಳು ಪಡೆವಂತೆ ಕೃತಿಗಳ ಚರ್ಚೆ, ವಿಮರ್ಶೆಯಾಗಬೇಕು. ಸಂಸಾರ, ಜೀವನ, ಹೋರಾಟ ಇವುಗಳ ಮಧ್ಯೆಯೂ ವೈಚಾರಿಕತೆ, ಸ್ವಾಭಿಮಾನ, ಪ್ರಗತಿಪರ ನಿಲುವು, ಧನಾತ್ಮಕ ಚಿಂತನೆಗಳಿಂದ ಬದುಕು ಸಾರ್ಥಕಪಡಿಸಿಕೊಂಡ ಸ್ವಾಭಿಮಾನಿ. ಪತಿಗೆ ತಕ್ಕ ಪತ್ನಿಯಾಗಿ, ತಂದೆಗೆ ಮುದ್ದಿನ ಮಗಳಾಗಿ, ಮಕ್ಕಳಿಗೆ ವಾತ್ಸಲ್ಯಮಯಿ ತಾಯಿಯಾಗಿ, ಸ್ನೇಹಿತರಿಗೆ ಸದಾ ಬಿಚ್ಚು ಮನಸಿನ ವಿನಯತೆಯ ಸಾಕಾರ ಮೂರ್ತಿಯಾಗಿರುವ ಡಾ. ವರದಾ ಶ್ರೀನಿವಾಸ ಅವರು ಕನ್ನಡ ಸಾಹಿತ್ಯಶ್ರೀಯ ಸಿರಿಮುಡಿಗೇರಿದ ಅಮೋಘ ಸೌಗಂಧಿಕಾ ಪುಷ್ಪ.

[ಅತ್ತಿಮಬ್ಬೆ ಪ್ರತಿಷ್ಠಾನದ 'ಮನುಶ್ರೀ ರಾಷ್ಟ್ರೀಯ ಪ್ರಶಸ್ತಿ' ಪುರಸ್ಕೃತರಾದ ಡಾ. ವರದಾ ಶ್ರೀನಿವಾಸ ಅವರನ್ನು ಕುರಿತು ದಿನಾಂಕ : ೨೦-೦೭-೨೦೧೫ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಶ್ರೀ ಹೆಚ್.ವಿ. ರಾಮಚಂದ್ರರಾವ್ ಅವರು ನೀಡಿದ ಅಭಿನಂದನಾ ನುಡಿಗಳು]

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧೨. ಜನಪದ ಮಹಾಕಾವ್ಯಗಳ ವೃತ್ತಿಗಾಯನದಲ್ಲಿ ಹೆಣ್ಣಿನ ಪಾತ್ರ- ಒಂದು ಸಂಕ್ಷಿಪ್ತ ನೋಟ

-ಎಂ. ರೇಖಾ*

ಕರ್ನಾಟಕ ವೃತ್ತಿಗಾಯಕರ ದೊಡ್ಡ ತಂಡಗಳನ್ನು ಹೊಂದಿರುವ ಸಮೃದ್ಧ ನೆಲೆ. ಇಲ್ಲಿನ ಜನಪದ ಮಹಾಕಾವ್ಯಗಳು ಈ ವೃತ್ತಿಗಾಯಕರಿಂದಲೇ ಇನ್ನೂ ಜೀವಂತವಾಗಿ ಉಳಿದುಕೊಂಡಿವೆ ಎಂದರೆ ತಪ್ಪಾಗಲಾರದು. ಅನೇಕ ಪರಂಪರೆಯ ವೃತ್ತಿಗಾಯಕರು, ವೈವಿಧ್ಯಮಯ ವೇಷಭೂಷಣಗಳಿಂದ ಶೋಭಿತರಾಗಿ ವಿಶಿಷ್ಟ ಸ್ವರೂಪದ ವಾದ್ಯಗಳೊಡನೆ ಜಾತ್ರೆ, ಉತ್ಸವಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ತಮ್ಮ ಅಧಿದೈವದ ಮಹಿಮೆಗಳನ್ನು ಪ್ರಚಾರ ಮಾಡಿ ಜನತೆಯಲ್ಲಿ ಧರ್ಮ, ಶ್ರದ್ಧೆ, ಭಕ್ತಿ, ನಿಷ್ಠೆಗಳನ್ನು, ತ್ಯಾಗಶೀಲತೆಯನ್ನು ಕಾಪಾಡಿಕೊಂಡು ಬರುವುದು ಇವರ ಉದ್ದೇಶವಾಗಿರುತ್ತದೆ. ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ಮಠವೊಂದರಲ್ಲಿ ದೀಕ್ಷೆ ಪಡೆದು ಆಯಾ ದೈವದ ಒಕ್ಕಲಿರುವ ಕಡೆಗಳಲ್ಲಿ ಧಾರ್ಮಿಕ ಆಚರಣೆಗಳ ನೇತೃತ್ವ ವಹಿಸಿ ನಡೆಸಿಕೊಡುವ ಹೊಣೆಗಾರಿಕೆಯೂ ಇವರದಾಗಿರುತ್ತದೆ. ಆಯಾ ದೈವದ ಒಕ್ಕಲು ಹೆಚ್ಚಾಗಿರುವ ಕಡೆಗಳಲ್ಲಿ ಒಕ್ಕಲುಗಳನ್ನೋ, ಊರುಗಳನ್ನೋ ಹಂಚಿಕೊಂಡು ದೇವರ ಕಾರ್ಯಗಳನ್ನು ನಡೆಸಿಕೊಂಡು ಹೋಗುತ್ತಾರೆ. ದೇವರ ಪ್ರತಿನಿಧಿಗಳಂತೆ ಈ ಧಾರ್ಮಿಕ ಪ್ರತಿನಿಧಿಗಳನ್ನು ಆಯಾ ದೈವದ ಒಕ್ಕಲುಗಳು ಗೌರವಿಸುತ್ತಾರೆ. ದೇವರ ಲಾಂಛನಗಳನ್ನು ಧರಿಸಿ ತಮ್ಮದೇ ಆದ ವಿಶಿಷ್ಟ ವಾದ್ಯವೊಂದನ್ನು ಹಿಡಿದು ಸುದೀರ್ಘ ಕಥೆಗಳನ್ನು ಹಾಡಿನ ರೂಪದಲ್ಲಿ ನಿರೂಪಿಸುತ್ತ ಗಾಯಕರ ಪರಂಪರೆಯನ್ನು ಸ್ಥಾಪಿಸಿರುವ ಅನೇಕ ಕಥೋಪಜೀವಿಗಳ ವರ್ಗಗಳನ್ನು ಕಾಣಬಹುದು. ಮೇಲುನೋಟಕ್ಕೆ ಸಾಮಾನ್ಯ ಭಿಕ್ಷುಕರಂತೆ ಕಾಣಬರುವ ಇವರು ಒಂದು ಕಾಲಕ್ಕೆ ನಾಡಿನಾದ್ಯಂತ ಅತ್ಯಂತ ಪರಿಣಾಮಕಾರಿ ಧರ್ಮಪ್ರಚಾರಕರಾಗಿ ಪ್ರಸಿದ್ಧಿ ಪಡೆದವರು.

'ಮಲೆಯ ಮಾದೇಶ್ವರ' ಕಾವ್ಯವನ್ನು 'ಮಾದೇಶ್ವರ ಗುಡ್ಡರು', 'ಮಂಟೇಸ್ವಾಮಿ ಕಾವ್ಯ'ವನ್ನು 'ನೀಲಗಾರರು', 'ಮೈಲಾರಲಿಂಗನ ಕಾವ್ಯ'ವನ್ನು 'ಮೈಲಾಗರಲಿಂಗನ

* ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬. ಮೊ: ೮೧೫೦೮೯೭೨೪೬

ಗುಡ್ಡರು', 'ಎಲ್ಲಮ್ಮನ ಕಾವ್ಯವನ್ನು' 'ಎಲ್ಲಮ್ಮನ ಗುಡ್ಡರು', 'ಜುಂಜಪ್ಪನ ಕಾವ್ಯವನ್ನು' 'ಕಣಿ'ಯವರು ಜೀವಂತವಾಗಿ ಉಳಿಸಿಕೊಂಡು ಬಂದಿರುವ ವೃತ್ತಿಗಾಯಕರು. ಇನ್ನು ಈ ವೃತ್ತಿಗಾಯನದಲ್ಲಿ ಹೆಣ್ಣಿನ ಪಾತ್ರವೇನು? ಸ್ತ್ರೀ ತನ್ನನ್ನು ತಾನು ವೃತ್ತಿಗಾಯನದಲ್ಲಿ ಹೇಗೆ ತೊಡಗಿಸಿಕೊಂಡಿದ್ದಾಳೆ? ಆ ಮೂಲಕ ಜನಪದ ಮಹಾಕಾವ್ಯಗಳ ಪರಂಪರೆಯನ್ನು ಉಳಿಸಿಕೊಂಡು ಬರುತ್ತಿರುವುದರಲ್ಲಿ ಅವಳ ಪಾತ್ರವೇನು? ಎಂಬುದರತ್ತ ಗಮನಹರಿಸೋಣ.

ಹೆಣ್ಣು ಕುಟುಂಬದಲ್ಲಿ ಮಾತ್ರವಲ್ಲದೆ ಸಾಮಾಜಿಕ, ಸಾಂಸ್ಕೃತಿಕ ವಲಯಗಳಲ್ಲೂ ತನ್ನನ್ನು ತಾನು ತೊಡಗಿಸಿಕೊಂಡಿದ್ದಾಳೆ. ಸಾಹಿತ್ಯ ಕ್ಷೇತ್ರದಲ್ಲಿಯೂ ಗಣನೀಯ ಸಾಧನೆಯನ್ನು ಮೆರೆದಿದ್ದಾಳೆ. ಈ ಹಿನ್ನೆಲೆಯಲ್ಲಿ ಅವಳದ್ದೇ ಆದ ಆಲೋಚನಾಕ್ರಮವಿದೆ, ಅಭಿವ್ಯಕ್ತಿ ಶೈಲಿಯಿದೆ. ಎಲ್ಲಾ ಕ್ಷೇತ್ರಗಳಲ್ಲೂ ಹೆಣ್ಣು ಹಿಂದಿನಿಂದಲೂ ತನ್ನನ್ನು ತಾನು ತೊಡಗಿಸಿಕೊಂಡಿದ್ದಾಳೆ. ಅಜ್ಞಾತ ಕವಿಗಳಿಂದ ರಚಿಸಲ್ಪಟ್ಟಿರುವ ಮೌಖಿಕ ಸಾಹಿತ್ಯ ಪರಂಪರೆಯಲ್ಲಿ ಸ್ತ್ರೀಯರದ್ದೆ ಸಿಂಹಪಾಲು. ಜನಪದ ಗೀತೆಗಳು, ಗರತಿ ಹಾಡುಗಳು, ಜನಪದ ಕತೆ, ಗಾದೆ, ಒಗಟು ಮೊದಲಾದವುಗಳ ರಚನೆಯಲ್ಲಿ ಹೆಣ್ಣಿನ ಪಾತ್ರವೇ ಹೆಚ್ಚು. ಮನೆಗೆಲಸಗಳಾದ ಕುಟ್ಟುವ, ಬೀಸುವ ಸಂದರ್ಭಗಳಲ್ಲಿ, ಗದ್ದೆ ಕೆಲಸಗಳಾದ ಪೈರನ್ನು ನೆಡುವ, ಕಳೆ ಕೀಳುವ ಸಂದರ್ಭಗಳಲ್ಲಿ, ಮಕ್ಕಳ ಲಾಲನೆ, ಪೋಷಣೆಯ ಸಂದರ್ಭಗಳಲ್ಲಿ ಹೀಗೆ ಅನೇಕ ಪ್ರಸಂಗಗಳು ಪದಗಳನ್ನು ಕಟ್ಟಲು ಮತ್ತು ಹಾಡಲು ಸ್ತ್ರೀಯರಿಗೆ ಅವಕಾಶನೀಯ ಸಂದರ್ಭಗಳಾಗಿದ್ದವು.

ಇನ್ನು ಜನಪದ ಮಹಾಕಾವ್ಯಗಳ ಮೌಖಿಕ ಪರಂಪರೆಯನ್ನು ಗಮನಿಸೋಣ. ಇದು ಶಿಷ್ಟ ಸಾಹಿತ್ಯದಂತೆ ಏಕಕರ್ತೃವಿನದಲ್ಲ. ಅವು ಬಿಡಿಬಿಡಿ ಕಥಾನಕಗಳು. ಹಾಡುಗಾರರು ತಮ್ಮ ಅನುಕೂಲಕ್ಕೆ ತಕ್ಕಂತೆ ಅವನ್ನು ಹೊಂದಿಸಿ ಹೇಳುವರು. ಇಂದು ನಮಗೆ ದೊರೆತಿರುವ ಸಿದ್ಧರೂಪದ ಸುದೀರ್ಘ ಕಾವ್ಯಗಳು ವಿದ್ವಾಂಸರ ಜೋಡಣೆ ಎಂಬುದು ಎಲ್ಲರಿಗೂ ತಿಳಿದ ವಿಚಾರ. ಬಿಡಿ ಬಿಡಿ ಕಥಾನಕಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಮತ್ತು ಕಾವ್ಯಕ್ಕೆ ಹೊಂದಿಕೆಯಾಗುವಂತೆ ಸ್ತ್ರೀಯರೂ ಪಾದಗಳನ್ನು ರಚಿಸಿರಬಹುದು. ವೃತ್ತಿಗಾಯನದಲ್ಲಿಯೂ ಸ್ತ್ರೀಯ ಪಾತ್ರವನ್ನು ಗುರುತಿಸಬಹುದು.

ವೃತ್ತಿಗಾಯನಕ್ಕೆ ಸಂಬಂಧಿಸಿದಂತೆ ಗಾಯಕರಲ್ಲಿ ನಾಲ್ಕು ರೀತಿಯ ವಿಭಾಗ ಕ್ರಮವನ್ನು ನೋಡಬಹುದು. ಅವೆಂದರೆ,

೧. ವೃತ್ತಿಗಾಯಕರು

೨. ಲೌಕಿಕ ಕಥೋಪಜೀವಿಗಳು

೩. ಧಾರ್ಮಿಕ ಕಥೋಪಜೀವಿಗಳು

೪. ದೇವರ ಗುಡ್ಡರು

**ವೃತ್ತಿಗಾಯಕರು** : ಗಾಯನವನ್ನೇ ಮಾಡಿ ಜೀವನ ಸಾಗಿಸುವವರನ್ನು ವೃತ್ತಿಗಾಯಕರು ಎನ್ನುತ್ತಾರೆ. ಬಹಳ ಹಿಂದಿನಿಂದಲೂ ಈ ಪರಂಪರೆ ನಡೆದುಕೊಂಡು ಬಂದಿದೆ. ಜನಪದ ಮಹಾಕಾವ್ಯಗಳ ಬಿಡಿ ಬಿಡಿ ಭಾಗಗಳನ್ನು ಅಥವಾ ಪೂರ್ಣ ಕಾವ್ಯವನ್ನು ಹಾಡಿ (ಸಂಭಾವನೆ ಪಡೆದು) ಜೀವನವನ್ನು ಸಾಗಿಸುವುದು ವೃತ್ತಿಗಾಯಕರ ಕೆಲಸ. ಇವರು ಲೌಕಿಕ ಹಾಗೂ ಧಾರ್ಮಿಕ ಕಾವ್ಯಗಳೆರಡನ್ನೂ ಹಾಡುತ್ತಾರೆ. ಸಂಭಾವನೆ ರೂಪದಲ್ಲಿ ಹಣ, ಧವಸ-ಧಾನ್ಯ ಮೊದಲಾದವನ್ನು ಪಡೆಯುತ್ತಾರೆ. ಒಕ್ಕಲಿಗರು, ಕುರುಬರು, ಹರಿಜನರು ಮುಂತಾದವರನ್ನು ವೃತ್ತಿಗಾಯಕರಲ್ಲಿ ಕಾಣಬಹುದು.

ಈ ವೃತ್ತಿಗಾಯನದಲ್ಲಿ ಸ್ತ್ರೀಯರ ಪಾತ್ರ ಕಡಿಮೆ ಎಂದೇ ಹೇಳಬಹುದು. ಇದರಲ್ಲಿ ಪುರುಷರೇ ಹೆಚ್ಚು. ಬೀಸುವಾಗ, ಕುಟ್ಟುವಾಗ ಕೆಲವೊಂದು ಮಹಾಕಾವ್ಯದ ಭಾಗಗಳನ್ನು ಶ್ರಮ ಮರೆಯಲು ಹಾಡಿಕೊಳ್ಳುವುದುಂಟು. ಒಬ್ಬರು ಅಥವಾ ಇಬ್ಬರು ಬೆಳದಿಂಗಳಲ್ಲಿ ಬೇಸರ ಕಳೆಯಲು ಸೇರಿದಾಗ, ಹೊಲ-ಗದ್ದೆಯ ಕೆಲಸಗಳಲ್ಲಿ ತೊಡಗಿದಾಗ, ಹಿಮ್ಮೇಳ, ಮುಮ್ಮೇಳ ಸಹಿತವಾಗಿ ಹಾಡಿಕೊಳ್ಳುತ್ತಾರೆಯೆ ಹೊರತು ಯಾವ ಸಂಭಾವನೆ, ಉಡುಗೊರೆ ಸ್ವೀಕರಿಸುವ ಗೋಜಿಗೆ ಹೋಗುವುದಿಲ್ಲ. ಆದರೆ ಪುರುಷರು ಜೀವನೋಪಾಯಕ್ಕಾಗಿಯೇ ಕಥೆಗಳನ್ನು ಕಲಿತು ಹಾಡುತ್ತಾರೆ. ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆ ಮತ್ತು ಕಥೆಗಳನ್ನು ಹಾಡುವಾಗ ಊರೂರು ಸುತ್ತಬೇಕಾದ ಸನ್ನಿವೇಶವಿರುವುದರಿಂದ ಬಹುಶಃ ಪುರುಷರೇ ಈ ಪರಂಪರೆಯಲ್ಲಿ ಹೆಚ್ಚಿರಬಹುದು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ವೃತ್ತಿಗಾಗಿ ಸ್ತ್ರೀಯಾವುದನ್ನು ಅವಲಂಬಿಸಿರಲಿಲ್ಲ ಮತ್ತು ಅವಳಿಗೆ ಆರ್ಥಿಕ ಸ್ವಾತಂತ್ರ್ಯವೂ ಹಿಂದಿನ ಸಮಾಜದಲ್ಲಿ ಇರಲಿಲ್ಲ. ಆದ್ದರಿಂದ ವೃತ್ತಿಗಾಯಕರಾಗಿ ಸ್ತ್ರೀಯರು ಕಂಡುಬರುವುದು ತೀರಾ ವಿರಳವೆನ್ನಬಹುದು.

**ಲೌಕಿಕ ಕಥೋಪಜೀವಿಗಳು** : ಲೌಕಿಕ ಕಥೆಗಳನ್ನು ಹಾಡುವವರಿಗೆ ಲೌಕಿಕ ಕಥೋಪಜೀವಿಗಳೆಂದು ಕರೆಯುತ್ತಾರೆ. ಈ ವೃತ್ತಿಗಾಯನದಲ್ಲಿ ಒಂದೇ ದೇವರ ಕಥೆಯನ್ನೇ ಅಲ್ಲದೆ ಬೇರೆ ಬೇರೆ ಕಥೆಗಳನ್ನು ಕಲಿತು ಹಾಡುತ್ತಾರೆ. ಉದಾಹರಣೆಗೆ: ಗೌರಮ್ಮನ ವಿವಾಹ, ಕೃಷ್ಣನ ಕಥೆಗಳು, ಬಾಲ ನಾಗಮ್ಮನ ಕಥೆ, ಅಣ್ಣ-ತಂಗಿಯ ಕಥೆ ಮೊದಲಾದವು.

ಸ್ತ್ರೀಯರು ಸಹ ಇಂತಹ ಹಲವು ಕಥೆಗಳನ್ನು ವೃತ್ತಿಗಾಯಕರು ಹಾಡುವುದನ್ನು ಕೇಳಿ ಕಲಿತಿರುತ್ತಾರೆ. ಲೌಕಿಕ ಕಥೋಪಜೀವಿಗಳು ಹವ್ಯಾಸಿ ಹಾಡುಗಾರರಿದ್ದಂತೆ. ಸ್ತ್ರೀ ಹವ್ಯಾಸಿ ಗಾಯಕರು ಸಾಮಾನ್ಯವಾಗಿ ಕುಟುಂಬದ ಒಳಗೆಯೇ ಕಂಡು ಬರುತ್ತಾರೆ. ಲೌಕಿಕ ಕಥೆಗಳನ್ನು ಕಲಿತ ಸ್ತ್ರೀಯರು ಮಕ್ಕಳಿಗೆ ನೀತಿಪಾಠಗಳಾಗಿ ಮನೆಯಲ್ಲಿಯೇ ಇಂತಹ ಕಥೆಗಳನ್ನು, ಹಾಡುಗಳನ್ನು ಹೇಳಿಕೊಳ್ಳುತ್ತಾರೆ. ಅವಿಭಕ್ತ ಕುಟುಂಬಗಳಲ್ಲಿ ಇದನ್ನು ಹೆಚ್ಚಾಗಿ ಕಾಣಬಹುದು. ವಯಸ್ಕರು ಮಕ್ಕಳ ಲಾಲನೆ, ಪೋಷಣೆಯಲ್ಲಿ ತೊಡಗುವುದರಿಂದ ಸಾಮಾನ್ಯವಾಗಿ ಮಹಾಕಾವ್ಯದ ಬಿಡಿ ಭಾಗಗಳನ್ನು ಹೇಳಿಕೊಳ್ಳುತ್ತಾರೆ. ಹೀಗಾಗಿ ಮಲೆ ಮಾದೇಶ್ವರ, ಮುಂಟೇಸ್ವಾಮಿ, ಎಲ್ಲಮ್ಮನಂತಹ ಸಾಹಸ ಕಥೆಗಳು

ದೀರ್ಘವಾಗಿದ್ದರೂ ಅದನ್ನು ಕಿರಿದುಗೊಳಿಸಿ ಹೇಳುವುದರ ಮೂಲಕ ಪರಂಪರೆಯಲ್ಲಿ ಮೌಖಿಕ ಮಹಾಕಾವ್ಯಗಳನ್ನು ಉಳಿಸುವಲ್ಲಿ ಸ್ತ್ರೀಯ ಪಾತ್ರ ಗಣನೀಯವಾದದ್ದಾಗಿದೆ.

**ಧಾರ್ಮಿಕ ಕಥೋಪಜೀವಿಗಳು** : ಧಾರ್ಮಿಕ ಕಥೆಗಳನ್ನು ಹಾಡುವ ಗಾಯಕರೆ ಧಾರ್ಮಿಕ ಕಥೋಪಜೀವಿಗಳು. ಇವರು ದೇವರಿಗೆ ಸಂಬಂಧಿಸಿದ ಮತ್ತು ಪವಿತ್ರ ಕ್ಷೇತ್ರಗಳಿಗೆ ಸಂಬಂಧಿಸಿದ ಕಥೆಗಳನ್ನು ಹಾಡುತ್ತಾರೆ. ಆ ಮೂಲಕ ದೇವರ ಮಹಿಮೆಯನ್ನು ಎತ್ತಿ ಹಿಡಿಯುವುದು ಮತ್ತು ಧಾರ್ಮಿಕತೆಯನ್ನು ಪ್ರಚಾರ ಮಾಡುವುದು ಇವರ ಉದ್ದೇಶ. ಜನಪದ ಮಹಾಕಾವ್ಯಗಳೆಲ್ಲವೂ ಸಾಮಾನ್ಯವಾಗಿ ದೈವಕ್ಕೆ ಸಂಬಂಧಿಸಿದ ಅಥವಾ ದೈವತ್ವಕ್ಕೆ ಏರಿಸಲ್ಪಟ್ಟ ವ್ಯಕ್ತಿಗಳ ಕಥಾವಸ್ತುವನ್ನು ಒಳಗೊಂಡಿವೆ. ಜನರಲ್ಲಿ ಧರ್ಮ, ಭಕ್ತಿ, ಶ್ರದ್ಧೆ, ನಿಷ್ಠೆ, ಜ್ಞಾನ, ತ್ಯಾಗದ ಮನೋಭಾವಗಳು ಮೂಡಲೆಂದೇ ಈ ಕಲಾವಿದರು ಆಯಾ ಒಕ್ಕಲಿನವರ ಸ್ಥಳಗಳಲ್ಲಿ ಅಥವಾ ದೇವರ ಸನ್ನಿಧಿಗೆ ಬಂದಾಗ ಜಾತ್ರೆ, ಹಬ್ಬ ಮುಂತಾದ ಸಂದರ್ಭಗಳಲ್ಲಿ ಬಂದು ಆಯಾ ದೇವರ ಮಹಿಮೆಯ ಕಾವ್ಯಗಳನ್ನು ಹಾಡುತ್ತಾರೆ. ಸ್ತ್ರೀಯರ ಧಾರ್ಮಿಕ ಸ್ವಾತಂತ್ರ್ಯಕ್ಕೆ ಸಂಬಂಧಿಸಿ ಹೇಳುವುದಾದರೆ ಅದು ಸಹಾ ಕಟ್ಟುಪಾಡುಗಳಿಂದ ಹೊರತಾಗಿಲ್ಲ. ಮನೆಯಲ್ಲಿ ಪೂಜೆ ಪುನಸ್ಕಾರಗಳೆಲ್ಲವೂ ಸ್ತ್ರೀಯ ನೇತೃತ್ವದಲ್ಲಿ ನಡೆದರೂ ಹೊರಗಡೆ ಮಾತ್ರ ಸ್ತ್ರೀ ನಿರ್ಬಂಧಿತರು. ಜಾತ್ರೆ, ಹಬ್ಬ, ಹರಿದಿನಗಳಲ್ಲಿ ಹಾಡುವ ಧಾರ್ಮಿಕ ಕಥೆಗಳು ಕೇವಲ ಮನೆ ಪಠನೆಗೆ ಮಾತ್ರಾ ಸೀಮಿತವಾಗಿವೆ.

**ದೇವರ ಗುಡ್ಡರು** : ಧಾರ್ಮಿಕ ಕಥೋಪಜೀವಿಗಳ ಒಂದು ಭಾಗವಾಗಿ ದೇವರ ಗುಡ್ಡರು ಕಾಣಿಸಿಕೊಳ್ಳುತ್ತಾರೆ. ಗುಡ್ಡರು ಎಂದರೆ 'ಶಿಷ್ಯ'ರು ಎಂದರ್ಥ. ಕರ್ನಾಟಕದಲ್ಲಿ ಮಾದೇಶ್ವರ ಗುಡ್ಡರು, ಮಂಟೇಲಿಂಗಸ್ವಾಮಿ ಗುಡ್ಡರು, ಎಲ್ಲಮ್ಮನ ಗುಡ್ಡರು ಮುಂತಾದ ಪರಂಪರೆಯನ್ನು ಕಾಣಬಹುದು. ಈ ಗುಡ್ಡರು ಆಯಾ ದೇವರ ಹೆಸರಿನಲ್ಲಿ 'ಕ್ವಾರಣ್ಯ' (ಭಿಕ್ಷೆ) ಬೇಡುತ್ತಾರೆ. ಇಂತಹವರು ಸಾಮಾನ್ಯವಾಗಿ ಆಯಾ ದೇವರ ಕಥೆಗಳನ್ನು, ಕಾವ್ಯಗಳನ್ನು ಕಲಿತಿರುತ್ತಾರೆ. ಅಲ್ಲದೇ ಅವರ ಮನೆತನದವರಿಗೂ ಅದನ್ನು ಕಲಿಸಿರುತ್ತಾರೆ. ಇದರಿಂದ ಮಹಾಕಾವ್ಯಗಳು ತಲೆಮಾರಿನಿಂದ ತಲೆಮಾರಿಗೆ ಹರಿದು ಬರಲು ದೇವರ ಗುಡ್ಡರು ಕಾರಣರಾಗಿದ್ದಾರೆ.

ಹೆಣ್ಣು ಮಕ್ಕಳು ಈ ರೀತಿ ಶಿಷ್ಯರಾಗುವುದುಂಟು. ಇವರನ್ನು ಗುಡ್ಡಿ ಅಥವಾ ಗುಡ್ಡಮ್ಮ ಎನ್ನುತ್ತಾರೆ. ಆದರೆ ಹೆಣ್ಣು ಮಕ್ಕಳನ್ನು ಗುಡ್ಡಿಯಾಗಿ ಬಿಡುವುದು ತೀರಾ ವಿರಳ. ಮಾದೇಶ್ವರರಿಗೆ ಗುಡ್ಡರನ್ನು ಬಿಡುವುದು ವಂಶಪಾರಂಪರ್ಯವಾಗಿ ನಡೆದು ಬಂದ ಪದ್ಧತಿಯಾಗಿದೆ. ಒಂದು ವೇಳೆ ಆ ವಂಶದಲ್ಲಿ ಗಂಡು ಮಕ್ಕಳಿಲ್ಲದಿದ್ದರೆ ಮಾತ್ರ ಹೆಣ್ಣು ಮಕ್ಕಳನ್ನು 'ಗುಡ್ಡಿ'ಯಾಗಿ ಬಿಡುವ ಪದ್ಧತಿ ಇರಬಹುದು. ಆದರೆ ಕೆಲವು ವಿದ್ವಾಂಸರು ಹೆಣ್ಣು ಮಕ್ಕಳನ್ನು ಗುಡ್ಡಿಯಾಗಿ ಬಿಡಿವುದಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಉದಾಹರಣೆ: ಡಾ. ಪಿ.ಕೆ. ರಾಜಶೇಖರ, ಡಾ. ಬಿ.ಎಸ್. ಸ್ವಾಮಿ ಮೊದಲಾದವರು. ಆದರೆ ಇತ್ತೀಚೆಗೆ ಇದು ಕಣ್ಮರೆಯಾಗಿರಬಹುದು. (ದತ್ತು ಪಡೆದುಕೊಳ್ಳುವ ಸಂಪ್ರದಾಯವು ಪ್ರಚಲಿತವಿದ್ದಂತೆ ಇದೆ.)

ಆದರೆ ಈ ಗುಡ್ಡಿಯರು ಗುಡ್ಡರಂತೆ ಕ್ವಾರಣ್ಯ ಬೇಡುವುದಿಲ್ಲ. ಕೇವಲ ಭಕ್ತಿಗಾಗಿ, ಆರಾಧನೆಗಾಗಿ ಮಾತ್ರ ಕಾವ್ಯಗಳನ್ನು ಹಾಡುತ್ತಾರೆ. ಗುಡ್ಡರಂತೆ ಸಂಪೂರ್ಣವಾಗಿ ಕಾವ್ಯವನ್ನೂ ಹಾಡುವುದಿಲ್ಲ. ಬಿಡಿ ಬಿಡಿ ಭಾಗಗಳನ್ನು ಮಾತ್ರ ಹಾಡುತ್ತಾರೆ. ಇವರ ಪ್ರಮುಖ ವೃತ್ತಿ ದೇವರ ಸೇವೆಯಾಗಿರುತ್ತದೆ. ಸಂದರ್ಭಾನುಸಾರ ತಮಗೆ ತೋಚಿದ ಬಿಡಿ ಪ್ರಸಂಗಗಳನ್ನು ಹಾಡಿಕೊಳ್ಳುತ್ತಾರೆ. ಕೆಲವು ಸ್ತ್ರೀಯರು ಅಭಿರುಚಿ, ಹವ್ಯಾಸ, ಪ್ರತಿಭೆಗಳಿಂದ ಸಂಪೂರ್ಣ ಕಾವ್ಯವನ್ನು ಕಲಿತಿರಲೂಬಹುದು ಮತ್ತು ಕಲಿಯಲು ಆಸಕ್ತಿಯಿರುವ ಗುಡ್ಡಿಯರಿಗೆ ಅದನ್ನು ಕಲಿಸಬಹುದು. ಈ ರೀತಿ ಜನಪದ ಮಹಾಕಾವ್ಯಗಳನ್ನು ಮೌಖಿಕವಾಗಿ ಉಳಿಸಿಕೊಂಡು ಬರುವುದರಲ್ಲಿ ಸ್ತ್ರೀ ಪಾತ್ರವೂ ಶ್ಲಾಘನೀಯವಾಗಿದೆ.

ಕರ್ನಾಟಕದಲ್ಲಿ ಮಾದೇಶ್ವರ, ಮಂಟೇಸ್ವಾಮಿ, ಎಲ್ಲಮ್ಮ, ಜುಂಜಪ್ಪ ಮತ್ತು ಮೈಲಾರಲಿಂಗನ ಧಾರ್ಮಿಕ ಮಹಾಕಾವ್ಯಗಳ ಪರಂಪರೆ ವಿಶಿಷ್ಟ ರೂಪದಲ್ಲಿ ಉಳಿದುಕೊಂಡು ಬರುತ್ತದೆ. ನೀಲಗಾರರು, ಕಾಡುಗೊಲ್ಲರು, ಗೊರವರು, ಚೌಡಿಕೆಯವರು, ಈ ಕಾವ್ಯಗಳನ್ನು ಇನ್ನೂ ಜೀವಂತಿಕೆಯಾಗಿ ಉಳಿದುಕೊಳ್ಳುವಂತೆ ಮಾಡಿದ್ದಾರೆ. ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಮಂಟೇಸ್ವಾಮಿ ಕಾವ್ಯ, ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಜುಂಜಪ್ಪನ ಕಾವ್ಯ, ಮಾದೇಶ್ವರ ಬೆಟ್ಟದ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮಾದೇಶ್ವರ ಕಾವ್ಯಗಳು ನೆಲೆಯೂರಿವೆ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# ೧೫. ಕವಿ–ಕಾವ್ಯ ಚಿಂತನ

–ಪ್ರೊ. ಆರ್. ವಸಂತಕುಮಾರ್*

ವೃತ್ತಿಯಿಂದ ಅಧ್ಯಾಪಕರಾಗಿ, ಪ್ರವೃತ್ತಿಯಿಂದ ಸೃಜನಶೀಲ ಲೇಖಕರಾಗಿ ಕನ್ನಡ ಸಾರಸ್ವತ ಲೋಕಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿರುವ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ಬಹುಶ್ರುತ ವಿದ್ವಾಂಸರು, ಬಹುಭಾಷಾ ವಿದ್ವಾಂಸರಾಗಿದ್ದಾರೆ. ಅಪ್ಪಟ ಸಾಹಿತ್ಯ ಪ್ರೇಮಿಯಾಗಿರುವ ಶ್ರೀಯುತರು ಕನ್ನಡ ಸಾಹಿತ್ಯದ ಬಗ್ಗೆ ಗಂಭೀರ ಅಧ್ಯಯನ ನಡೆಸಿದ್ದಾರೆ. ಹಳಗನ್ನಡ ಸಾಹಿತ್ಯ, ವಚನ ಸಾಹಿತ್ಯ, ದಾಸ ಸಾಹಿತ್ಯ, ಕಾವ್ಯಮೀಮಾಂಸೆ ಹಾಗೂ ಆಧುನಿಕ ಸಾಹಿತ್ಯದ ಕುರಿತಾಗಿ ತಮ್ಮದೇ ಆದ ತಾತ್ತ್ವಿಕ ನಿಲುವುಗಳನ್ನು ಹೊಂದಿದ್ದಾರೆ. ಇಂತಹ ಗಟ್ಟಿ ನಿಲುವುಗಳ ಅಭಿವ್ಯಕ್ತಿಯ ಫಲವೇ ಅವರ ಬೃಹತ್ ಕೃತಿಯಾದ 'ಕವಿ–ಕಾವ್ಯ–ಚಿಂತನ'.

ಈ ಸಂಕಲನದ ಬಹುತೇಕ ಲೇಖನಗಳು–ಪ್ರಬಂಧಗಳು ಉನ್ನತ ಮಟ್ಟದ ವಿಚಾರ ಸಂಕಿರಣಗಳಲ್ಲಿ ಮಂಡಿತವಾದವು, ವಿದ್ವತ್ ಪತ್ರಿಕೆ ಹಾಗೂ ಅಭಿನಂದನ ಗ್ರಂಥಗಳಲ್ಲಿ ಪ್ರಕಟವಾದವು. ಇಲ್ಲಿಯ ವಿಷಯ ವೈವಿಧ್ಯವನ್ನು ಗಮನಿಸಿದರೆ ಲೇಖಕರ ಆಸಕ್ತಿಯು ಎಷ್ಟು ವ್ಯಾಪಕವಾದುದೆಂಬುದು ತಿಳಿಯುತ್ತದೆ, ಅವರ ವಿಶೇಷ ಒಲವು ವಚನ ಸಾಹಿತ್ಯ ಮತ್ತು ಹರಿದಾಸ ಸಾಹಿತ್ಯ ಎಂಬುದು ವಿದಿತವಾಗುತ್ತದೆ. ಈ ವಿಷಯಕ್ಕೆ ಸಂಬಂಧಿಸಿದ ಲೇಖನಗಳಲ್ಲದೆ, ಕೆಲವು ಆಧುನಿಕ ಲೇಖಕರ ಕೃತಿ ಪರಿಶೀಲನೆಗಳು ಹಾಗೂ ಅವರ ಸಾಹಿತ್ಯ ಸಾಧನೆಗಳನ್ನು ಕುರಿತ ಸಮೀಕ್ಷೆಗಳೂ ಇಲ್ಲಿವೆ. ಎರಡು ಅಪೂರ್ವ ಕೃತಿಗಳು ಎಂಬ ಶೀರ್ಷಿಕೆಯಡಿ "ಶ್ರೀ ಬಷೀರ್ ಅವರು ಬರೆದಿರುವ 'ಮೈದುನ ರಾಮಯ್ಯನ ಕಥೆ' ಮತ್ತು 'ವೀರ ಸಂಗಯ್ಯನ ಸಾಂಗತ್ಯ' ಎಂಬ ಎರಡು ವಿಮರ್ಶಾ ಲೇಖನಗಳು ನನಗೆ ತಿಳಿದಮಟ್ಟಿಗೆ ಆ ಕೃತಿಗಳ ಬಗ್ಗೆ ಬಂದಿರುವ ಪ್ರಪ್ರಥಮ ಲೇಖನಗಳು. ಅವಜ್ಞೆಗೀಡಾಗಿದ್ದ ಈ ಎರಡು ಕೃತಿಗಳನ್ನು ಕುರಿತು ಶ್ರೀಯುತರು ಬರೆದಿರುವ ಲೇಖನಗಳು ಮೌಲಿಕವೂ ಅಪರೂಪದವೂ ಆಗಿವೆ" ಎಂಬ ಡಾ. ಪಿ.ವಿ.

* ಕನ್ನಡ ಪ್ರಾಧ್ಯಾಪಕರು, # ೧೨೩೬/ಬಿ, 'ಅಂಜನಾದ್ರಿ', ೧೦ನೇ ಮುಖ್ಯರಸ್ತೆ ಪ್ರಕಾಶನಗರ, ಬೆಂಗಳೂರು–೫೬೦೦೨೧. ಮೊ. ೯೯೬೪೦೫೫೭೮೦

ನಾರಾಯಣ ಅವರ ಮುನ್ನುಡಿಯ ಮಾತುಗಳು ಸಹೃದಯ ಓದುಗರು ಈ ಕೃತಿಗಳನ್ನು ಗ್ರಹಿಸಲು ಸೂಕ್ತ ವೇದಿಕೆಯನ್ನು ಕಲ್ಪಿಸಿಕೊಡುತ್ತದೆ.

ಮೇಲುನೋಟಕ್ಕೆ ಈ ಕೃತಿಯಲ್ಲಿನ ವಿಚಾರ ಸರಣಿಯೂ ಐದು ಭಾಗಗಳಲ್ಲಿ ವಿಭಾಗಗೊಂಡು ಒಟ್ಟು ನಲವತ್ನಾಲ್ಕು ಲೇಖನಗಳು ಮಿಳಿತಗೊಂಡಿವೆ. ವಿಷಯವಾರು ಐದು ವಿಭಾಗಗಳನ್ನಾಗಿ ಮಾಡಿರುವುದು ಸೂಕ್ತವೇ ಆಗಿದೆ. ಪ್ರತಿಯೊಂದು ಲೇಖನವೂ ಸಹ ಲೇಖಕರ ವಿದ್ವತ್ತಿಗೆ ಸಾಕ್ಷಿಯಾಗಿ ರೂಪ ತಾಳಿದೆ. ಇಡೀ ಕೃತಿಯನ್ನು ಒಟ್ಟಂದದಲ್ಲಿ ಗಮನಿಸಿದರೆ ಕನ್ನಡ ಸಾಹಿತ್ಯ ಚರಿತ್ರೆಯ ಸ್ಥೂಲವಾದ ಪರಿಚಯವನ್ನು ಮಾಡಿಕೊಡುತ್ತದೆ.

'ಪ್ರಾಚೀನ ಕೃತಿ ಚಿಂತನ' ಎಂಬ ಮೊದಲನೆಯ ಭಾಗದಲ್ಲಿ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯ' ಕುರಿತು ಚರ್ಚಿಸುತ್ತ, "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನ್, ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂಬ ಕಾವ್ಯಭಾಗದಲ್ಲಿನ ಧ್ವನಿಯನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಈ ಸಾಲಿನಲ್ಲಿ ಕವಿ ಪಂಪನ ಅಂತರಂಗದ ಧ್ವನಿ ಅಭಿವ್ಯಕ್ತವಾಗಿರುವುದನ್ನು ಬಹಳ ಸ್ಪಷ್ಟವಾಗಿ ಗುರುತಿಸಿದ್ದಾರೆ. ಎಂಟದೆಯ ಬಂಟ ಎಂದೇ ಖ್ಯಾತನಾಗಿರುವ ರನ್ನನ 'ಅಜಿತನಾಥ ಪುರಾಣ'ವನ್ನು ವಿಮರ್ಶಿಸುವಾಗಲೂ ಸಹ ಆತನ ಇತಿವೃತ್ತ, ರನ್ನನ ಇತರೆ ಕಾವ್ಯಗಳ ಕುರಿತ ಸಂಕ್ಷಿಪ್ತ ಪರಿಚಯ ಮಾಡಿದ್ದಾರೆ. ಅಜಿತನಾಥ ಪುರಾಣಕ್ಕೆ ಕಥಾವಸ್ತುವನ್ನು ಒದಗಿಸಿದ ಮೂಲಕಥೆಯ ಬಗ್ಗೆ ವಿಶ್ಲೇಷಿಸುತ್ತ, ಕವಿ ರನ್ನನು ತನ್ನ ಸ್ವಸಾಮರ್ಥ್ಯದಿಂದ ಅದನ್ನು ಹೇಗೆ ರಸೋತ್ಕಟವಾದ ಕಾವ್ಯವನ್ನಾಗಿ ನಿರ್ಮಿಸಿದ್ದಾನೆ ಎಂಬುದನ್ನು ಸಾದರಪಡಿಸಿದ್ದಾರೆ. ಉಳಿದೆರಡು ಲೇಖನಗಳಲ್ಲಿ ಕನ್ನಡ ನಾಡು ನುಡಿ ಕುರಿತ ಪ್ರಜ್ಞೆ ಶಾಸ್ತ್ರ ಗ್ರಂಥಗಳಲ್ಲಿ ಹೇಗೆ ರೂಪಿತವಾಗಿದೆ ಎಂಬುದನ್ನು ತಿಳಿಯಪಡಿಸಿದ್ದಾರೆ. ಹಳಗನ್ನಡ ಗದ್ಯಕ್ಕೂ ಹಾಗೂ ನಡುಗನ್ನಡ ಗದ್ಯಕ್ಕೂ ಇರುವ ಭಾಷಿಕ ವ್ಯತ್ಯಾಸವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ.

ಎರಡನೆಯ ಭಾಗವಾದ 'ವಚನ ಸಾಹಿತ್ಯ ಚಿಂತನ' ಎಂಬುದರಲ್ಲಿ ವಿವಿಧ ವಚನಕಾರರ ಪರಿಚಯ ಹಾಗೂ ವಚನ ಸಾಹಿತ್ಯಕ್ಕೆ ಅವರುಗಳು ನೀಡಿರುವ ಅಮೂಲ್ಯ ಕೊಡುಗೆಗಳ ಕುರಿತಾದ ತಾತ್ತ್ವಿಕ ಚಿಂತನೆಯನ್ನು ಕಾಣಬಹುದು. 'ಮುಹಮ್ಮದ್ ಪೈಗಂಬರ್ ಮತ್ತು ಬಸವೇಶ್ವರರು' ಎಂಬ ತೌಲನಿಕ ಲೇಖನ ಬಹಳ ಮಹತ್ವದ್ದಾಗಿ ತೋರುತ್ತದೆ. ಇಬ್ಬರೂ ಮಹಾನ್ ಸಮಾಜ ಸುಧಾರಕರೂ, ವಿಭಿನ್ನ ಕಾಲಘಟ್ಟದಲ್ಲಿ ಬದುಕಿದ್ದರೂ ಸಹ ಅವರ ಚಿಂತನೆಗಳು ಹೇಗೆ ಲೋಕಹಿತವನ್ನೇ ಸದಾ ಕಾಲ ಬಯಸುತ್ತವೆ ಎಂಬುದು ಗಮನಾರ್ಹ ಸಂಗತಿ. ಸ್ವಾತಂತ್ರ್ಯ, ಸಮಾನತೆ ಹಾಗೂ ಸಹೋದರತ್ವಗಳನ್ನು ಇಬ್ಬರೂ ಮಹನೀಯರು ಹೇಗೆ ಬೋಧಿಸಿದರು, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ರಂಗಗಳಲ್ಲಿ ಸರ್ವರಿಗೂ ನ್ಯಾಯ ದೊರಕಿಸಿಕೊಡಲು ಹೇಗೆ ತೀವ್ರವಾಗಿ ಹೋರಾಡಿದರು, ಅದಕ್ಕಾಗಿ ತಮ್ಮ ಬದುಕನ್ನೇ ಹೇಗೆ ಮುಡುಪಾಗಿಟ್ಟರು ಎಂಬ ಸಂಗತಿಯನ್ನು ಉಲ್ಲೇಖಿಸಿದ್ದಾರೆ. ಜಗತ್ತಿನ ಜನ ಇವರನ್ನೆಂದೂ ಮರೆಯಲು ಸಾಧ್ಯವಿಲ್ಲ ಎಂಬ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಇಳೆ ನಿಮ್ಮ ದಾನ' ಎಂಬ ಜೇಡರ ದಾಸಿಮಯ್ಯನ ಏಕೈಕ ವಚನದ ಅರ್ಥ ವಿಶ್ಲೇಷಣೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ವಚನ ವಿಶ್ಲೇಷಣೆಗೆ ಒಂದು ಸಿದ್ಧ ಮಾದರಿಯನ್ನು ಲೇಖಕರು ಹಾಕಿಕೊಟ್ಟಿದ್ದಾರೆ ಎನ್ನಬಹುದು. ಈ ವಚನದಲ್ಲಿ ಬರುವ ಪ್ರತಿಯೊಂದು ಅಚ್ಚಗನ್ನಡ ಶಬ್ದವು ತುಂಬು ಅರ್ಥ ಸಂಪತ್ತಿನಿಂದ ಕೂಡಿದೆ ಎನ್ನುತ್ತಾರೆ. ಇಲ್ಲಿನ ಶಬ್ದಗಳ ಬಳಕೆ ಕಿವಿಗೆ ಮುದವನ್ನು ನೀಡುತ್ತದೆ. ಅನುಪ್ರಾಸದಂತಹ ಶಬ್ದಾಲಂಕಾರದ ಬಳಕೆ ವಚನಕಾರನಿಗೆ ಅರಿವಿಲ್ಲದಂತೆಯೇ ಬಂದಿದೆ, ಏಕೆಂದರೆ, ಕವಿತೆ ಬರೆಯಬೇಕೆಂಬುದು ದಾಸಿಮಯ್ಯನ ಉದ್ದೇಶವಲ್ಲ. ಸರ್ವವನ್ನು ನಮಗೆ ನೀಡಿರುವ ಶಿವನಿಗೆ ಅರ್ಪಿಸಿ ಧನ್ಯಭಾವವನ್ನಷ್ಟೇ ಸೂಚಿಸುವುದು ಆತನ ಉದ್ದೇಶವಾಗಿದೆ. ಆತನಲ್ಲಿ ಕವಿ ಹೃದಯವಿದ್ದುದರಿಂದ ಈ ಒಂದು ವಚನ ಸುಂದರ ಭಾವಗೀತೆಯಂತಾಗಿ ಬಿಟ್ಟಿದೆಯಷ್ಟೇ ಎಂಬ ತರ್ಕಕ್ಕೆ ಬರುತ್ತಾರೆ.

'ಎರಡು ಅಪೂರ್ವ ಕೃತಿಗಳು' ಎಂಬ ಮೂರನೆಯ ಭಾಗದಲ್ಲಿ ಮುಗ್ಧ ಭಕ್ತಿಗೆ ಪ್ರತೀಕವಾಗಿ ರಾಮಯ್ಯ ಹೇಗೆ ಹೆಸರಾಗಿದ್ದನು ಎಂಬುದನ್ನು ಮನಗಾಣಿಸಿದ್ದಾರೆ. ಮೈದುನ ರಾಮಯ್ಯನ ಕಥೆಯಲ್ಲಿ ಆತ ಎಷ್ಟು ಮುಗ್ಧನಾಗಿದ್ದನೆಂದರೆ, ರಾಮಯ್ಯನ ಸಮಾಧಾನಕ್ಕಾಗಿ ಆತನ ತಾಯಿ ಹೇಳಿದ ಮಾತನ್ನೇ ನಿಜವೆಂದು ನಂಬಿ ಸಾಕ್ಷಾತ್ ಶಿವಪಾರ್ವತಿಯರನ್ನೇ ತನ್ನ ಅಕ್ಕ ಭಾವ ಎಂದು ಪರಿಭಾವಿಸಿ ಅವರನ್ನು ಹಬ್ಬಕ್ಕೆ ಆಹ್ವಾನಿಸಲು ಮುಂದಾಗುತ್ತಾನೆ. ಈತನ ಮುಗ್ಧ ಭಕ್ತಿಗೆ ಮೆಚ್ಚಿ ಶಿವಶಿವೆಯರು ಧರೆಗಿಳಿದು ಬರುತ್ತಾರೆ. ಅವರ ದರ್ಶನ ಭಾಗ್ಯದಿಂದ ಕೊನೆಗೆ ಈತ ಮೈದುನ ರಾಮಯ್ಯನೆಂದೇ ಪ್ರಖ್ಯಾತಿ ಹೊಂದಿದ್ದಾನೆ ಎಂಬುದನ್ನು ಸಾರುತ್ತಾರೆ. ಶಿವನ ಮಹಿಮೆಯನ್ನು ಶಿವಭಕ್ತರ ಹಿರಿಮೆಯನ್ನು ಪರಿಚಯಿಸುವ ವೀರಸಂಗಯ್ಯನ ಸಾಂಗತ್ಯವನ್ನು ಮನಮುಟ್ಟುವಂತೆ ಅರ್ಥೈಸುವಲ್ಲಿ ಯಶಸ್ವಿಯಾಗಿದ್ದಾರೆ. ಅಂದರೆ ಸತ್ತಿರುವ ಶಿವಭಕ್ತನ ಪ್ರಾಣ ಉಳಿಸಲು ತನ್ನ ಪ್ರಾಣವನ್ನೇ ಪಣಕಿಟ್ಟು ಸಂಗಯ್ಯ ಹೇಗೆ ವೀರಶಿವನಿಷ್ಠತೆಯನ್ನು ಪ್ರದರ್ಶಿಸುತ್ತಾನೆ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಇವರಿಬ್ಬರ ಕೃತಿ–ಕಾಲ ಮುಂತಾದ ವಿಚಾರಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ. ಹರಿಹರ ಕವಿಯ ರಗಳೆಗಳಲ್ಲಿ ಇರುವಂಥ ಕಥಾಸ್ವರೂಪದ ವಿವರಣೆ ಇಲ್ಲಿರುವುದನ್ನು ಪ್ರಸ್ತಾಪಿಸಿದ್ದಾರೆ.

ನಾಲ್ಕನೆಯ ಭಾಗವಾದ 'ದಾಸ ಸಾಹಿತ್ಯ ಚಿಂತನ'ದಲ್ಲಿ ಒಟ್ಟು ನಾಲ್ಕು ದೀರ್ಘವಾದ ಲೇಖನಗಳಿವೆ. ಮೊದಲೆರಡು ಲೇಖನಗಳಲ್ಲಿ ದಾಸ ಸಾಹಿತ್ಯ ಬೆಳೆದು ಬಂದ ಬಗೆ, ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯದ ಸ್ಥಾನ, ದಾಸ ಸಾಹಿತ್ಯದ ವಿಭಾಗ ಕ್ರಮ, ದಾಸ ಸಾಹಿತ್ಯದ ಮಹಾಮೇರುಗಳಾದ ಪುರಂದರದಾಸರು ಹಾಗೂ ಕನಕದಾಸರ ಅಮೂಲ್ಯ ಕಾಣಿಕೆಯನ್ನು ಚರ್ಚಿಸಿದ್ದಾರೆ. ಉಳಿದಂತೆ ವಾದಿರಾಜರು, ವಿಜಯದಾಸರು, ಜಗನ್ನಾಥದಾಸರು, ಗೋಪಾಲದಾಸರು, ಮಹಿಳಾ ದಾಸ ಸಾಹಿತ್ಯ ಕುರಿತಾದ ಮಾಹಿತಿಯನ್ನು ಒದಗಿಸಿದ್ದಾರೆ. ಮತ್ತೊಂದು ಲೇಖನದಲ್ಲಿ ಕೀರ್ತನ ಸಾಹಿತ್ಯದ ಭಾಷಿಕ ಅಭಿವ್ಯಕ್ತಿ, ಸಮಕಾಲೀನತೆ ಕುರಿತು ಮನನ ಮಾಡಿದ್ದಾರೆ. ಕಬೀರ ದಾಸರನ್ನು ಕುರಿತ ಲೇಖನ ಚಿಂತನಾರ್ಹವಾಗಿದೆ. "ಒಂದೇ ರಕ್ತ, ಒಂದೇ ಮಲ ಮೂತ್ರ, ಒಂದೇ

ಚರ್ಮ, ಒಂದೇ ಮೆದುಳಯ್ಯ, ಒಂದೇ ಜ್ಯೋತಿಯಿಂದ ಹುಟ್ಟಿನವರು ನಾವೆಲ್ಲ, ಬ್ರಾಹ್ಮಣನಾರು, ಶೂದ್ರನಾರಯ್ಯ" ಎಂಬ ಕಬೀರರ ಮಾತಿನ ಔಚಿತ್ಯವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಧರ್ಮಗಳು ಮಾನವರನ್ನು ಒಂದುಗೂಡಿಸುವುದು ಬಿಟ್ಟು ದ್ವೇಷಾಸೂಯೆಗಳನ್ನು ಬಿತ್ತುತ್ತಿವೆ. ಇದು ತರವಲ್ಲ ಎಂದು ನೊಂದು ಕೋಮು ಸೌಹಾರ್ದಕ್ಕಾಗಿ ತಮ್ಮ ಬದುಕನ್ನೇ ಮುಡುಪಾಗಿಟ್ಟವರು ಕಬೀರದಾಸರು ಎಂಬ ಅಂಶವನ್ನು ಬಹಿರಂಗಪಡಿಸಿದ್ದಾರೆ.

'ಅರ್ವಾಚೀನ ಕರ್ತೃ-ಕೃತಿ-ಚಿಂತನ' ಎಂಬ ಐದನೆಯ ಭಾಗದಲ್ಲಿ ಒಟ್ಟು ಇಪ್ಪತ್ತೆರಡು ಲೇಖನಗಳಿವೆ. ಬೇರೆ ಭಾಗಗಳಿಗೆ ಹೋಲಿಸಿದರೆ ಈ ಭಾಗದ ವ್ಯಾಪ್ತಿ ವಿಶಾಲವಾದುದಾಗಿದೆ. ಇವುಗಳಲ್ಲಿ ಕೆಲವು ಪ್ರಶಸ್ತಿ ಪುರಸ್ಕಾರಗಳು ಸಂದ ಸಂದರ್ಭಗಳಲ್ಲಿ ಬರೆದ ವ್ಯಕ್ತಿ ಪರಿಚಯಗಳು, ಅಭಿನಂದನ ಗ್ರಂಥಕ್ಕಾಗಿ ಬರೆದ ವ್ಯಕ್ತಿ ಪರಿಚಯ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ನಡೆಸಿದ ಸಂದರ್ಶನಗಳು ಇಲ್ಲಿ ಸೇರಿವೆ. ಆಧುನಿಕ ಕನ್ನಡ ಸಾಹಿತ್ಯದ ದಿಗ್ಗಜರಾದ ಮಾಸ್ತಿ, ಎಂ.ವಿ.ಸೀ. ಮುಂತಾದವರ ಸಾಹಿತ್ಯದ ಕುರಿತಾದ ತಲಸ್ಪರ್ಶಿ ವಿಮರ್ಶೆ ಇಲ್ಲಿ ಕಾಣುತ್ತೇವೆ. "ವಿದ್ವಾಂಸರ ಬರೆವಣಿಗೆಯಲ್ಲಿಯೂ ಕಾಗುಣಿತದ ತಪ್ಪುಗಳು ಮತ್ತು ವ್ಯಾಕರಣ ದೋಷಗಳು" ಎಂಬ ಲೇಖನ ಚರ್ಚಿಸಬೇಕಾದ ವಿಷಯವನ್ನು ಒಳಗೊಂಡಿದೆ, ಇದೊಂದು ಅಪೂರ್ವ ಲೇಖನವಾಗಿದೆ. ಬರೆವಣಿಗೆಯ ಸಂದರ್ಭದಲ್ಲಿ ಸ್ವತಃ ಲೇಖಕರೇ ಮಾಡುವ ಸಾಮಾನ್ಯ ತಪ್ಪುಗಳನ್ನು, ಅವು ಓದುಗರ ಮೇಲೆ ಬೀರುವ ಪರಿಣಾಮವನ್ನು ಕುರಿತು ಉದಾರಹಣೆ ಸಹಿತವಾಗಿ ವಿವರಿಸಿದ್ದಾರೆ. ಯಾವುದು ಸರಿಯಾದ ಕ್ರಮ, ಯಾವುದು ತಪ್ಪು ಎಂಬುದನ್ನು ನಿಖರವಾಗಿ ಸ್ಪಷ್ಟಪಡಿಸಿದ್ದಾರೆ. ಇನ್ನು ಮುಂದಾದರೂ ವಿದ್ವಾಂಸರುಗಳು ಈ ಪರಿಯ ವಿಷಯಗಳ ಮೇಲೆ ಎಚ್ಚರ ವಹಿಸಿದರೆ ಒಳಿತು ಎಂಬ ಭಾವ ಲೇಖಕರದಾಗಿದೆ.

ಒಟ್ಟಾರೆ ಈ ಕೃತಿಯಲ್ಲಿ ವ್ಯಕ್ತವಾಗಿರುವ ಲೇಖಕರ ಅಭಿಪ್ರಾಯಗಳ ಕುರಿತಾಗಿ ನಮ್ಮ ಭಿನ್ನಾಭಿಪ್ರಾಯಗಳು ಇದ್ದರೂ ಸಹ ಅಪಾರ ಸಾಹಿತ್ಯ ಸಿರಿಯ ಅನುಸಂಧಾನಕ್ಕೆ ಓದುಗರನ್ನು ಮುಖಾಮುಖಿಯಾಗಿಸುತ್ತವೆ. ಸಾಹಿತ್ಯದ ಆಸಕ್ತರಿಗೆ ಹೊಸ ಹೊಳಹನ್ನು ಈ ಕೃತಿಯ ಗಂಭೀರ ಓದು ನೀಡುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ವಿಷಯದ ದೃಷ್ಟಿಯಿಂದ, ಚಿಂತನೆಯ ದೃಷ್ಟಿಯಿಂದ ಗಮನಿಸಿದರೆ ಆಕರ ಗ್ರಂಥದ ಮೌಲ್ಯವುಳ್ಳ ಮೇರು ಕೃತಿಯಾಗಿ ಈ ಕೃತಿ ಹೊರಹೊಮ್ಮಿದೆ.

ಕೃತಿ : ಕವಿ-ಕಾವ್ಯ ಚಿಂತನ
ಲೇಖಕರು : ಪ್ರೊ. ಜಿ. ಅಬ್ದುಲ್ ಬಷೀರ್
ಪ್ರಕಾಶಕರು : ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.
ಪ್ರಥಮ ಮುದ್ರಣ : ೨೦೧೪, ಪುಟ ೫೬೪.
ಬೆಲೆ : ರೂ. ೪೦೦/-

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧೪. ಕನ್ನಡ ಚಳುವಳಿ ಇತಿಹಾಸ

-ಡಾ. ವಿಜಯಾ ಸುಬ್ಬರಾಜ್*

ರಾಷ್ಟ್ರ, ರಾಜ್ಯ ಯಾವುದೇ ನೆಲೆಯಲ್ಲಿ ನಮ್ಮದಾದ ನೆಲ, ಜಲ, ಭಾಷೆ, ಸಂಸ್ಕೃತಿ, ಸಂಪತ್ತು - ಇವುಗಳು ಅನ್ಯದೇಶಿಕರಿಂದ, ಭಾಷಿಕರಿಂದ ಅತಿಕ್ರಮಣಕ್ಕೆ, ಆಕ್ರಮಣಕ್ಕೆ ಅನ್ಯಾಯಕ್ಕೆ ಗುರಿಯಾದಾಗ, ಸಿಡಿದೆದ್ದು ನಿಂತು ಆಕ್ರೋಶದಿಂದ ಪ್ರತಿಭಟಿಸಿ, ಅವುಗಳನ್ನು ರಕ್ಷಿಸಿಕೊಳ್ಳಬೇಕಾದ್ದು ನಮ್ಮ ಸ್ವಂತಿಕೆ, ಅನನ್ಯತೆಗಳನ್ನು ಕಾಪಾಡಿಕೊಳ್ಳಬೇಕಾದ್ದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯವೂ ಹೌದು, ಹೊಣೆಗಾರಿಕೆಯೂ ಹೌದು.

ಇಂತಹ ಸಂದರ್ಭ ಕನ್ನಡನಾಡಿಗೆ ಬಂದಾಗ ಪ್ರತಿಯೊಬ್ಬ ಕನ್ನಡಿಗನೂ ಎದೆ ಸೆಟೆಸಿ ನಿಂತು ಸಮಷ್ಟಿ ನೆಲೆಯಲ್ಲಿ ಹೋರಾಟಕ್ಕೆ ಮುಂದಾದಾಗ ಅದೊಂದು ಚಳುವಳಿಯಾಗಿ ಗುರುತಿಸಿಕೊಳ್ಳುತ್ತದೆ. ಕನ್ನಡನಾಡು, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಇತ್ಯಾದಿಯಾಗಿ ಅನೇಕ ಚಳುವಳಿಗಳನ್ನು ಕಂಡಿದೆ. ಅಂಥಾದ್ದರಲ್ಲಿ ಕನ್ನಡ ಚಳುವಳಿ, ಸಮಕಾಲೀನ ಚಳುವಳಿಯಾಗಿಯೂ ಗುರುತಿಸಿಕೊಂಡ ಒಂದು ಮಹತ್ವದ ಘಟ್ಟವಾಗಿದೆ. ಅರವತ್ತರ ದಶಕದಿಂದ ನಿರಂತರವಾಗಿ ಕನ್ನಡನಾಡಿನಲ್ಲಿ ಕಾಲ ಕಾಲಕ್ಕೆ ಎದುರಾಗುತ್ತಿರುವ ಸಮಸ್ಯೆಗಳಿಂದಾಗಿ ಚಳುವಳಿಗಳು ನಡೆಯುತ್ತಲೇ ಬಂದಿವೆ. ಕನ್ನಡಿಗರು ಸೌಮ್ಯ ಸ್ವಭಾವದವರು. ಜಾತಿ, ಮತ, ಭಾಷೆ, ಪರಕೀಯರು ಎನ್ನುವ ಭಾವನೆ ಇತ್ಯಾದಿಗಳಿಂದ ದ್ವೇಷಾಸೂಯೆಗಳನ್ನು ಬೆಳೆಸಿಕೊಂಡವರಲ್ಲ. ಎಲ್ಲರನ್ನೂ ತಮ್ಮಂತೆ ಕಾಣುವ ಉದಾರಭಾವ ನಮ್ಮದು. ಆದರೆ ನಮ್ಮ ಈ ಗುಣಗಳ ದುರ್ಲಾಭ ಪಡೆದು ಜೀವನೋಪಾಯಕ್ಕೆಂದು ಬೇರೆ ಬೇರೆ ರಾಜ್ಯಗಳಿಂದ ಬಂದ ಅನ್ಯಭಾಷಿಕರು ನಮ್ಮೆಲ್ಲ ಸೌಲಭ್ಯಗಳನ್ನು, ಹಕ್ಕುಗಳನ್ನು ಕಸಿದುಕೊಳ್ಳಲು ಮತ್ತು ನಮ್ಮ ಮೇಲೆಯೇ ದೌರ್ಜನ್ಯ ದಬ್ಬಾಳಿಕೆಗಳನ್ನು ಮಾಡಲು ಮುಂದಾದಾಗ ಮಾತ್ರ ಕನ್ನಡಿಗರ ಅಖಂಡವಾದ ಸುಪ್ತಶಕ್ತಿ ಸ್ಫೋಟಿಸಿ, ಸ್ವಾಭಿಮಾನ ಕೆರಳಿ, ಸಾಮುದಾಯಿಕ ಐಕ್ಯತೆಯೊಂದಿಗೆ, ಚಳುವಳಿಗಳನ್ನು ರೂಪಿಸಿ, ಎಂತಹ ದುರ್ಗಮ ಸಮಸ್ಯೆಗಳನ್ನಾದರೂ

---

* # ೫೧, 'ಹಂಸಿ' '೧ನೇ 'ಎ' ಕ್ರಾಸ್, ೩೫ನೇ ಮೈನ್, ಬನಗಿರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫. ಮೊ: ೯೯೮೬೯೨೮೮೭೬

ಪರಿಹರಿಸಿಕೊಳ್ಳಬಲ್ಲರು, ಅನಿವಾರ್ಯವಾದಲ್ಲಿ ಭಯಂಕರ ಹೋರಾಟಗಳನ್ನೇ ಸೃಷ್ಟಿಸಬಲ್ಲರು ಎಂಬುದನ್ನು ಶ್ರೀ ಜಾಣಗೆರೆ ವೆಂಕಟರಾಮಯ್ಯನವರು ತಮ್ಮ ಕೃತಿ 'ಕನ್ನಡ ಚಳುವಳಿ ಇತಿಹಾಸದಲ್ಲಿ' ಅದ್ಭುತವಾಗಿ ಚಿತ್ರಿಸಿದ್ದಾರೆ. ಜಾಣಗೆರೆಯವರು ಸೃಜನಶೀಲ ಬರಹಗಾರರು, ಪತ್ರಕರ್ತರು, ಕನ್ನಡಪರ ಹೋರಾಟಗಾರರು, ನಾಡು ನುಡಿ ಸಂಸ್ಕೃತಿಗಳ ಬಗ್ಗೆ ಅಪಾರ ಕಾಳಜಿ ಉಳ್ಳವರು. ಅಲ್ಲದೆ ಈ ನಾಡಿನಲ್ಲಿ ನಡೆದ ಸಾಮಾಜಿಕ, ದಲಿತ, ರೈತ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಚಳುವಳಿಗಳ ಅಂತರಂಗ, ಬಹಿರಂಗ ಸ್ವರೂಪಗಳನ್ನು ಬಲ್ಲವರು. ಹಲವು ಚಳುವಳಿಗಳನ್ನು ಹುಟ್ಟು ಹಾಕಿದವರು. ಎಲ್ಲಕ್ಕಿಂತ ಹೆಚ್ಚಾಗಿ ಹೋರಾಟ ಚಳುವಳಿಗಳಿಗೆ ನಿರ್ದಿಷ್ಟವಾದ, ನಿಖರವಾದ ಒಂದು ಸೈದ್ಧಾಂತಿಕ ಹಿನ್ನೆಲೆ, ಧ್ಯೇಯೋದ್ದೇಶಗಳು, ಬದ್ಧತೆ ನಿಷ್ಠೆಗಳು ಇರಬೇಕೆಂದು ಬಲವಾಗಿ ನಂಬಿದವರು. ಪ್ರಾಮಾಣಿಕತೆ, ನಿಷ್ಠೆ, ಮಾನವೀಯ ಕಾಳಜಿಗಳು, ನಿಸ್ವಾರ್ಥತೆ, ನಿಸ್ಪೃಹತೆ–ಇತ್ಯಾದಿ ಮೌಲ್ಯಗಳು ಪ್ರತಿಯೊಬ್ಬ ಹೋರಾಟಗಾರನಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಹೋರಾಟಗಳೇ ಅರ್ಥಹೀನವಾಗುತ್ತವೆ. ಅಲ್ಲದೆ ಹೋರಾಟಗಳು ಎಂದೂ ಯಶಸ್ವಿಯಾಗುವುದಿಲ್ಲ ಎಂಬ ತಾತ್ತ್ವಿಕ ನಂಬಿಕೆಯೊಂದಿಗೆ ಕನ್ನಡ ಚಳುವಳಿ ಇತಿಹಾಸ ಕೃತಿಯನ್ನು ಬರೆದಿರುವುದರಿಂದ ಈ ಕೃತಿ ಒಂದು ರೀತಿಯಲ್ಲಿ ವಿಭಿನ್ನವೂ ವಿಶಿಷ್ಟವೂ ಆಗಿದೆ. ಅವರೇ ಹೇಳಿರುವ "ಹೋರಾಟವೆಂಬುದು ಪವಿತ್ರವಾದ ಕಾರ್ಯ. ಅದು ಪ್ರತಿ ಮನುಷ್ಯನ ಕರ್ತವ್ಯ. ಹೆತ್ತ, ಹೊತ್ತ ನಾಡಿಗಾಗಿ ಅಷ್ಟನ್ನೂ ಮಾಡದಿದ್ದರೆ ಕರ್ತವ್ಯ ವಿಮುಖವಾದಂತಾಗುತ್ತದೆ. ಆದರೆ ಅದರಲ್ಲಿ ಸ್ವಾರ್ಥ ಲಾಲಸೆ ತುಂಬಿರಬಾರದು. ಅದು ಬದುಕನ್ನು ಕಟ್ಟಿಕೊಡುತ್ತದೆ. ಅದರಿಂದ ವ್ಯಕ್ತಿತ್ವ ಬೆಳೆಯುತ್ತದೆ. ಎಸಗುವ ತಪ್ಪುಗಳಿಂದ ವಿನಾಯಿತಿ ಸಿಗುತ್ತದೆಂದು ಭಾವಿಸಿದರೆ ಅದು ದ್ರೋಹವಾಗುತ್ತದೆ" ಎಂಬ ಮಾತುಗಳಿಂದಲೇ ಅವರ ಕೃತಿಯೊಳಗಿನ ಹೂರಣ ಹೇಗಿರುತ್ತದೆಂಬುದು ಸ್ಪಷ್ಟವಾಗುತ್ತದೆ. ಜಾಣಗೆರೆಯವರು ಈ ಕೃತಿಯಲ್ಲಿ ದಾಖಲಿಸಿರುವ ಎಲ್ಲ ಚಳುವಳಿಗಳಲ್ಲಿ ನೇರವಾಗಿ ಭಾಗವಹಿಸಿದವರಾದರೂ ಅವರೇ ಇದರ ಕರ್ತೃವಾದರೂ ಪ್ರಥಮ ಪುರುಷದಲ್ಲಿ ಸ್ವಾನುಭವಗಳ ನಿರೂಪಣೆಯಾಗದೆ ವಸ್ತುನಿಷ್ಠ ನೆಲೆಯಲ್ಲಿ ಹತ್ತಾರು ಚಳುವಳಿಗಳ ಕಥನವಾಗಿದೆಯಲ್ಲದೆ, ಚಳುವಳಿಗಳಲ್ಲಿ ಪಾಲ್ಗೊಂಡ ಹಲವಾರು ವ್ಯಕ್ತಿಗಳಲ್ಲಿ ತಾವೂ ಒಬ್ಬರೆಂಬಂತೆ ಕಾಣಿಸಿಕೊಂಡಿದ್ದಾರೆ.

ಭಾಷಾವಾರು ಪ್ರಾಂತ್ಯ ರಚನೆ, ಕರ್ನಾಟಕದ ಏಕೀಕರಣ ಕಾಲಘಟ್ಟದಿಂದ, ಕನ್ನಡ ಚಳುವಳಿ ಒಂದಲ್ಲ ಒಂದು ಕಾರಣಕ್ಕೆ ಮುಂದುವರೆಯುತ್ತಲೇ ಬಂದಿದೆ. ಏಕೀಕರಣಗೊಂಡ ಕನ್ನಡನಾಡಿನಲ್ಲಿ, ಸಮಸ್ಯೆಗಳು ಹತ್ತು ಹಲವು ರೀತಿಯಲ್ಲಿ ಕನ್ನಡಿಗರೊಂದಿಗೆ ಮುಖಾಮುಖಿಯಾಗುತ್ತಲೇ ಬಂದಿವೆ. ಉದ್ಯೋಗಕ್ಕೆಂದು, ಓದಿಗೆಂದು ಮತ್ತು ಬೇರೆ ಬೇರೆ ಕಾರಣಗಳಿಂದ ಇಲ್ಲಿ ಬಂದು ನೆಲೆಸಿದ ಅನ್ಯಭಾಷಿಕರು, ಅದರಲ್ಲಿಯೂ ತಮಿಳರಿಂದ ರಾಜಕೀಯ ಸಾಮಾಜಿಕ ಸಮಸ್ಯೆಗಳು ಉದ್ಭವವಾಗಿ ಕನ್ನಡಿಗರು ಬಲಿಪಶುಗಳಾಗುತ್ತ ಮತ್ತು ಉದ್ಯೋಗ ವಂಚಿತರಾಗುತ್ತ ಬಂದದ್ದು. ಜೊತೆಗೆ ಕನ್ನಡ ಭಾಷೆ, ಕನ್ನಡ ಪರಿಸರಕ್ಕೆ ಮಾರಕವಾಗುತ್ತ ಹೋದದ್ದು. ಚಳುವಳಿಯ ಹುಟ್ಟಿಗೆ ಪ್ರಬಲ

ಕಾರಣವಾಯಿತು. ಎಲ್ಲವೂ ತಮಿಳುಮಯ, ಎಲ್ಲ ಕ್ಷೇತ್ರಗಳಲ್ಲಿಯೂ ತಮಿಳರದೇ ಮೇಲುಗೈಯಾದಾಗ ಕನ್ನಡಿಗರಿಗೆ ಹೋರಾಟವೊಂದೇ ದಾರಿ ಎನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಇಂತಹ ಅನ್ಯಾಯಗಳನ್ನು ಹತ್ತಿಕ್ಕಲು ನಮ್ಮ ಅಧಿಕಾರ, ಹಕ್ಕುಗಳನ್ನು ಉಳಿಸಿಕೊಳ್ಳಲು ಸಂಘಟಿತ ಹೋರಾಟಗಳು ಅನಿವಾರ್ಯವಾದದ್ದನ್ನು ಈ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ಸಂಯುಕ್ತರಂಗ, ಕನ್ನಡ ಚಳುವಳಿ ಕೇಂದ್ರ, ಕನ್ನಡ ಕೇಂದ್ರ ಕ್ರಿಯಾ ಸಮಿತಿ, ಕನ್ನಡ ಶಕ್ತಿ ಕೇಂದ್ರ, ಕನ್ನಡ ಸಂಘರ್ಷ ಸಮಿತಿ, ಕರ್ನಾಟಕ ರಕ್ಷಣಾ ವೇದಿಕೆ ಇತ್ಯಾದಿ ಸಂಘಟನೆಗಳ ಮತ್ತು ಕ್ರಿಯಾಶೀಲ ಚಳುವಳಿಗಾರರ, ಕನ್ನಡ, ಕನ್ನಡಿಗರ ಹಿತಾಸಕ್ತಿಗಳನ್ನು ಕಾಪಾಡಲು ವಹಿಸಿದ ಪಾತ್ರ. ಅವರ ಹೋರಾಟದ ಕೆಚ್ಚು, ಸ್ವಾಭಿಮಾನ, ತ್ಯಾಗ, ಬಲಿದಾನ, ನಿಸ್ವಾರ್ಥತೆ, ಅತಿಶಯವಾದ ಕನ್ನಡ ಪ್ರೀತಿ ಇವುಗಳನ್ನು ತುಂಬು ಮೆಚ್ಚುಗೆಯಿಂದ ವಿವರಿಸುತ್ತಲೇ ಸಂದರ್ಭ ಸನ್ನಿವೇಶಗಳಿಂದಲೇ ಇಂತಹ ಗುಣಮೌಲ್ಯಗಳು ಭ್ರಷ್ಟವಾಗಿ ಸ್ವಾರ್ಥ, ರಾಜಕೀಯ ಆಕಾಂಕ್ಷೆ, ವ್ಯಕ್ತಿ ಪ್ರತಿಷ್ಠೆಗಳು ವಿಜೃಂಭಿಸಲು ತೊಡಗಿದ್ದನ್ನು ವಿಷಾದದಿಂದ ದಾಖಲಿಸಿದ್ದಾರೆ. ಹೋರಾಟ, ಚಳುವಳಿಗಳಲ್ಲಿ ತೊಡಗಿಸಿಕೊಳ್ಳಲು ಮುಂದಾಗುವ ವ್ಯಕ್ತಿಗಳು ವಿಭಿನ್ನ ಮನೋಧರ್ಮ ಗಳನ್ನು, ಸ್ವಭಾವಗಳನ್ನು ಹೊಂದಿದವರಾಗಿರುತ್ತಾರಲ್ಲದೆ ಬೇರೆ ಬೇರೆ ಜಾತಿ, ಮತ, ವರ್ಗ ಮೂಲಗಳಿಂದ, ವಿಭಿನ್ನ ಆರ್ಥಿಕ, ಸಾಮಾಜಿಕ ಪರಿಸರಗಳಿಂದ ಬಂದವ ರಾಗಿರುತ್ತಾರೆ. ಒಂದು ಹಂತದಲ್ಲಿ ಒಂದು ಸಾಮಾನ್ಯ. ಗುರಿ, ಧ್ಯೇಯೋದ್ದೇಶಕ್ಕೆಂದು ಸಂಘಟಿತ ನೆಲೆಯಲ್ಲಿ ಹೋರಾಡಿ, ಯಶಸ್ಸು ಕಾಣುತ್ತಿದ್ದಂತೆ, ವೈಯಕ್ತಿಕ ಸುಪ್ತ ಆಸೆ, ಆಕಾಂಕ್ಷೆಗಳು ಪುಟಿದೆದ್ದು, ಹಿಂದಿನ ಎಲ್ಲ ತತ್ತ್ವಾದರ್ಶಗಳನ್ನು ಮರೆತು ಬಿಡುತ್ತಾರೆ. ಅವಿಚ್ಛಿನ್ನ ಸ್ನೇಹ ಸಂಬಂಧಗಳೂ ಸ್ವಾರ್ಥದ ಎದುರು ನೆಲ ಕಚ್ಚುತ್ತವೆ. ಜಾಣಗೆರೆಯವರು ಇಂತಹ ಪ್ರಸಂಗಗಳ ಪ್ರತ್ಯಕ್ಷದರ್ಶಿಯಾಗಿದ್ದುದರಿಂದಲೇ "ಸಂಚಯವಾದ ಒಗ್ಗಟ್ಟನ್ನು ಕಾಪಾಡಿಕೊಂಡು ಹೊರಟರೆ ಎಂತಹ ಎದುರಾಳಿಗಳನ್ನೂ ಸದೆಬಡಿಯಬಹುದು. ಒಗ್ಗಟ್ಟಿಗೆ, ಐಕ್ಯತೆಗೆ ಭಂಗ ತರುವ ಪ್ರಯತ್ನ ಪಿತೂರಿಗಳನ್ನು ಅವರೇ ಮಾಡಿ ಮುಗಿಸಬಹುದು. ಸ್ವಾರ್ಥವು ಇಣುಕಿದರೆ ಒಗ್ಗಟ್ಟಿಗೆ ಕೊಳ್ಳಿಯಿಡಲು ಅದೇ ಸಾಕು, ಅದರಿಂದ ಒಬ್ಬಿಬ್ಬರು ಮಿಂಚಬಹುದು. ಆದರೆ ಸಮಷ್ಟಿಯ ಹಿತರಕ್ಷಣೆ, ಶತ್ರು ಸಂಹಾರ ಕ್ರಿಯೆಗಳು ದುರ್ಬಲಗೊಳ್ಳುವುದು ಖಾತರಿಯಾಗುವುದು" ಎಂಬ ಮಾತುಗಳ ಹಿಂದಿನ ನೋವನ್ನು ತೋಡಿಕೊಂಡಿದ್ದಾರೆ.

ಈ ಕೃತಿಯಲ್ಲಿನ ಚಳುವಳಿಗಳ ಇತಿಹಾಸ ಮುಖ್ಯವಾಗಿ ತಮಿಳು ಭಾಷಿಕರಿಂದ. ತಮಿಳು ನಾಡು ಸರಕಾರದಿಂದ ಉದ್ಭವಿಸಿದ ನಿರುದ್ಯೋಗ. ಶಿಕ್ಷಣದಲ್ಲಿ ಭಾಷಾ ನೀತಿ. ಪ್ರತಿಮೆಗಳ ಹಗರಣ, ಕಾವೇರಿ ನೀರಿನ ಸಮಸ್ಯೆ–ಇತ್ಯಾದಿಗಳನ್ನು ಒಳಗೊಂಡಿದೆ. ಇವೇ ಅಲ್ಲದೆ ಕೇಂದ್ರ ಸರಕಾರದಿಂದ ಕನ್ನಡನಾಡಿಗೆ ಆದ ಅನೇಕ ರೀತಿಯ ಅನ್ಯಾಯಗಳ ವಿರುದ್ಧ ನಡೆದ ಪ್ರತಿಭಟನೆ. ರಾಜಕುಮಾರ್ ಅಪಹರಣ ಇತ್ಯಾದಿಯಾಗಿ ಪ್ರತಿಯೊಂದು ಚಳುವಳಿಯ ಹಿಂದಿನ ಪ್ರಕರಣಗಳನ್ನು ಸವಿಸ್ತಾರವಾಗಿ ವಿವರಿಸುವುದರ ಮೂಲಕ ಸಮಸ್ಯೆಗಳ ಆಮೂಲಾಗ್ರ ಮಾಹಿತಿಯನ್ನು ಒದಗಿಸಿದ್ದಾರೆ. ಸುದ್ದಿಗಳಾಗಿ ಮಾತ್ರವೇ

ಚಳುವಳಿಗಳು ಅವುಗಳ ಪರಿಣಾಮಗಳು ಜನಸಾಮಾನ್ಯರ ಗಮನಕ್ಕೆ ಬಂದಿರುವುದಾದರೂ ಅವುಗಳ ಹಿಂದಿನ ಕಾರಣಗಳು, ಸಮಸ್ಯೆಯ ಸ್ವರೂಪ, ಹೋರಾಟದ ಹಿಂದಿನ ಸಿದ್ದತೆಗಳು, ಪಾಲ್ಗೊಂಡ ಸಂಘಟನೆಗಳು, ವ್ಯಕ್ತಿಗಳು, ಎದುರಿಸಬೇಕಾಗಿ ಬಂದ ಅಪಾಯಗಳು, ಅವುಗಳನ್ನು ನಿಷ್ಠಾವಂತ ಕಾರ್ಯಕರ್ತರು ಸ್ವೀಕರಿಸಿದ ರೀತಿಗಳು, ಸಮಸ್ಯೆಯಿಂದ ಸಮಸ್ಯೆಗಳಿಗೆ ಹೊರಳುತ್ತಿದ್ದಂತೆ, ಬದಲಾಗುತ್ತಿದ್ದ ಸಂಘಟನೆಗಳ ಧ್ಯೇಯೋದ್ದೇಶಗಳು ವ್ಯಕ್ತಿಗಳ ಸ್ವಭಾವ ಮನೋಧರ್ಮಗಳು ಎಲ್ಲವೂ ವಿಸ್ತೃತವಾಗಿ ನಿರೂಪಿತವಾಗಿವೆ.

ನಾಲ್ಕು ದಶಕಗಳ ವಿಸ್ತೃತ ಕಾಲವ್ಯಾಪ್ತಿಯಲ್ಲಿ ನಡೆದ ಚಳುವಳಿಗಳ ಸಂದರ್ಭದಲ್ಲಿ ಕನ್ನಡ ನಾಡು ಅರಸು, ಬೊಮ್ಮಾಯಿ, ಬಂಗಾರಪ್ಪ, ಗುಂಡೂರಾವ್ ಮೊದಲಾಗಿ ಬೇರೆ ಬೇರೆ ಮುಖ್ಯಮಂತ್ರಿಗಳನ್ನು ಕಂಡಿದೆ. ಒಬ್ಬೊಬ್ಬ ಮುಖ್ಯಮಂತ್ರಿಯೂ ತಮ್ಮ ತಮ್ಮ ಆಡಳಿತಾವಧಿಯಲ್ಲಿ, ಎದುರಾದ ಸಮಸ್ಯೆಗಳನ್ನು ನಿರ್ವಹಿಸಿದ ರೀತಿ, ಅವುಗಳ ಬಗೆಗಿನ ಅವರ ನಿಲುವುಗಳನ್ನು ವಿವರಿಸುತ್ತಲೇ ಆ ಕಾಲಘಟ್ಟದ ರಾಜಕೀಯ ಇತಿಹಾಸದ ಒಂದು ಆಂಶಿಕ ಚಿತ್ರವನ್ನೂ ನೀಡಿದ್ದಾರೆ.

ಜಾಣಗೆರೆಯವರದು ಮೂಲತಃ ಸಂವೇದನಾಶೀಲ ಮನಸ್ಸು. ಪ್ರತಿಯೊಂದು ಸಮಸ್ಯೆಯ ವಿವರಣೆಗೆ ಮೊದಲು ಅವರ ಭಾವನಾತ್ಮಕ ವ್ಯಾಖ್ಯಾನ ಅತ್ಯಂತ ಹೃದಯ ಸ್ಪರ್ಶಿ ಭಾಗವಾಗಿದೆ. ೪೩ ಭಾಗಗಳಲ್ಲಿ ಕಟ್ಟಿಕೊಟ್ಟಿರುವ ಚಳುವಳಿಗಳ ಇತಿಹಾಸ ಈ ಕೃತಿ. ಪ್ರತಿಯೊಂದು ಭಾಗದ ಆರಂಭಕ್ಕೆ ಅವರ ಚಿಂತನೆ ಕೆಲವು ಗದ್ಯದ ಸಾಲುಗಳಲ್ಲಿ ಮತ್ತು ಪದ್ಯದ ಸಾಲುಗಳಲ್ಲಿ ಕಾಣಿಸಿಕೊಂಡು ಮುಂದೆ ಆ ಭಾಗದಲ್ಲಿ ವಿವರಣೆಗೊಳ್ಳುವ ವಿಷಯದ ಅಂತರ್ಯವನ್ನು ಮೊದಲಿಗೇ ಮನಗಾಣಿಸುತ್ತದೆ.

ಚಳುವಳಿಯ ಇತಿಹಾಸವೆಂದಿದ್ದರೂ ಇದು ಕೇವಲ ನೀರಸ, ಶುಷ್ಕ, ಐತಿಹಾಸಿಕ ದಾಖಲೆಯಲ್ಲ, ವರದಿಯಲ್ಲಿ ಸೃಜನಶೀಲ ಮನೋಧರ್ಮದ ಸಹಯೋಗ, ಸಾಹಚರ್ಯಗಳೊಂದಿಗೆ ಒಡಮೂಡಿದ ಬರಹ ಇದಾಗಿರುವುದರಿಂದ ಕಥೆ, ಕಾದಂಬರಿಗಳಂತೆ ಬೇಸರವಿಲ್ಲದೆ ಓದಿಸಿಕೊಂಡು ಹೋಗುವ, ಓದುಗರಲ್ಲಿ ಕನ್ನಡಾಭಿಮಾನವನ್ನು ಪ್ರಚೋದಿಸುವ, ಕನ್ನಡನಾಡು, ನುಡಿ, ನೆಲ, ಜಲ ಸಂಸ್ಕೃತಿ, ಸಂಪತ್ತಿನ ರಕ್ಷಣೆಗಾಗಿ ನಿಸ್ವಾರ್ಥಭಾವದಿಂದ, ಪ್ರಾಂಜಲ ಮನಸ್ಸಿನಿಂದ, ಮನೆ ಮಠ ಮರೆತು ಹೋರಾಟಕ್ಕಿಳಿದು ತ್ಯಾಗ, ಬಲಿದಾನಗಳಿಗೆ ಒಡ್ಡಿಕೊಂಡ ಮಹಾಚೇತನಗಳ ಬಗ್ಗೆ ಶ್ರದ್ಧಾಭಾವವನ್ನು ಜಾಗೃತಗೊಳಿಸುವ ಅದ್ಭುತ ಕಥನ ಇದಾಗಿದೆ. ನಿಜವಾಗಿ ಹೇಳುವುದಾದರೆ ಈ ಕೃತಿ ಕೇವಲ ಚಳುವಳಿ ಇತಿಹಾಸವಷ್ಟನ್ನೇ ಅಲ್ಲದೆ ಅದರ ಅಂತರ್ಗತ ಭಾಗವಾಗಿ ಕಾಲ ಕಾಲದಲ್ಲಾದ ಭಾಷಿಕ, ಸಾಂಸ್ಕೃತಿಕ, ರಾಜಕೀಯ ಸ್ಥಿತ್ಯಂತರಗಳನ್ನು ಗುಂಪುಗಳ ಮನೋಧರ್ಮವನ್ನೂ, ಪರಿಸ್ಥಿತಿ, ಪರಿಸರಗಳಿಂದಾಗಿ ಬದಲಾಗುವ ವ್ಯಕ್ತಿ ಸಂಬಂಧಗಳನ್ನೂ, ನಿರ್ಲಿಪ್ತ ನೆಲೆಯಲ್ಲಿ ಕಟ್ಟಿಕೊಡುವುದನ್ನೂ ಬಿಂಬಿಸುತ್ತದೆ.

ಜಾಣಗೆರೆಯವರು ತಮ್ಮ ಈ ಕೃತಿಯ ಬಗ್ಗೆ ಹೇಳಿದ "ಇಲ್ಲಿ ಹತ್ತಾರು ಸಂಘಟನೆ, ಹತ್ತಾರು ನಾಯಕರು, ನೂರಾರು ಸಮಸ್ಯೆ ಮತ್ತು ಘಟನಾವಳಿಗಳು ದಾಖಲಾಗಿರುತ್ತವೆ. ಅವನ್ನೆಲ್ಲ ಯಥಾವತ್ತಾಗಿ ವರದಿ ರೂಪದಲ್ಲಿಯೂ, ವಿಶ್ಲೇಷಣೆಗೊಳಪಡಿಸುತ್ತಲೂ ಟೀಕೆ–ಟಿಪ್ಪಣಿ ಮಾಡುತ್ತಲೂ ಬರವಣಿಗೆ ಸಾಗಿರುವುದು ಇತಿಹಾಸ ಕೃತಿ ರಚನೆ ಮಾದರಿಯೆಂದು ಭಾವಿಸಿದ್ದೇನೆ" ಎಂಬ ಮಾತುಗಳ ಜೊತೆಗೆ, ಇದಕ್ಕಿಂತ ಭಿನ್ನವಾದ ವಿಶೇಷತೆಯೂ ಇದರಲ್ಲಿ ಸೇರಿದೆ ಎಂಬುದು ನನ್ನ ಅಭಿಪ್ರಾಯ. ದಾಖಲು ಕೇವಲ ದಾಖಲೆಯಾಗಿಲ್ಲ, ಅದಕ್ಕೆ ಮಾನವೀಯ ಸ್ಪರ್ಶವಿದೆ, ಭಾವನಾತ್ಮಕ ನಿರೂಪಣೆಯಿದೆ; ಪ್ರತಿಯೊಬ್ಬ ಕನ್ನಡಿಗನೂ ಓದಲೇಬೇಕಾದ ಕೃತಿ ಇದಾಗಿದೆ.

ಕೃತಿ : ಕನ್ನಡ ಚಳುವಳಿ ಇತಿಹಾಸ
ಲೇಖಕರು : ಜಾಣಗೆರೆ ವೆಂಕಟರಾಮಯ್ಯ
ಪ್ರಕಾಶಕರು : ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧೫. ಆಮೂರರ ವಿಮರ್ಶೆಯ ಆಯಾಮ ಹಾಗೂ ಅನನ್ಯತೆ

-ಡಾ. ಜಿ.ಎನ್. ಉಪಾಧ್ಯ*

ಆಧುನಿಕ ಕನ್ನಡ ಸಾಹಿತ್ಯದ ಅಂಗೋಪಾಂಗಗಳಲ್ಲಿ ವಿಮರ್ಶೆಯೂ ಒಂದು. ಕನ್ನಡ ಸಾಹಿತ್ಯ ವಿಮರ್ಶೆಗೆ ಒಂದು ಶತಮಾನದ ಗಟ್ಟಿಯಾದ ಇತಿಹಾಸವಿದೆ. ಕಳೆದ ಕಾಲು ಶತಮಾನದಲ್ಲಿ (೧೯೯೦-೨೦೧೫) ವಿಮರ್ಶಾ ಕೃತಿಗಳದೇ ಕಾರುಬಾರು. ಇಂದಿನ ಕನ್ನಡ ವಿಮರ್ಶೆ ಮೌಲ್ಯಮಾಪನಕ್ಕೆ ಮಾತ್ರ ಸೀಮಿತವಾಗದೇ ಸಾಹಿತ್ಯದ ಸ್ವರೂಪ, ವ್ಯಾಖ್ಯಾನ, ಕೃತಿ ಸಂಪಾದನೆ, ಭಾಷ್ಯ, ವಿಶ್ಲೇಷಣೆ, ಸಾಂಸ್ಕೃತಿಕ ಅಧ್ಯಯನಗಳಿಗೆ ಮಹತ್ವ ನೀಡುತ್ತಿರುವುದು ಗಮನೀಯ ಅಂಶ.

ಕನ್ನಡ ವಿಮರ್ಶೆಗೆ ಹೊಸ ಆಯಾಮವನ್ನು ನೀಡಿದ ಬಹುಮುಖ್ಯ ವಿಮರ್ಶಕ ಡಾ. ಜಿ.ಎಸ್. ಆಮೂರ. ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಸಮದಂಡಿಯಾಗಿ ಸಾಹಿತ್ಯ ರಚಿಸಿ ನಾಮಾಂಕಿತರಾದ ವಿರಳ ಚಿಂತಕ ಆಮೂರ ಎಂಬುದು ಉತ್ಪ್ರೇಕ್ಷೆಯ ಮಾತಲ್ಲ. ವಿಮರ್ಶೆಯ ಕ್ಷೇತ್ರದಲ್ಲಿ ಅವರ ಸಿದ್ಧಿ ಸಾಧನೆ ಯಾರನ್ನೂ ಬೆರಗುಗೊಳಿಸುತ್ತದೆ. ಡಾ. ಆಮೂರರು ತಮ್ಮ ಅಗಾಧವಾಧ ಪ್ರತಿಭೆ ಪಾಂಡಿತ್ಯ ಪರಿಶ್ರಮಗಳಿಂದ ಕನ್ನಡ ವಿಮರ್ಶೆ ಸಮೃದ್ಧಗೊಳ್ಳುವಂತೆ ಮಾಡಿದ್ದಾರೆ. ಜಿ.ಎಸ್. ಆಮೂರರ ಕನ್ನಡ ವಿಮರ್ಶೆಯ 'ಸ್ವೀಕೃತಿ' ಇದು ತೊಂಬತ್ತು ತುಂಬಿದ ಆಮೂರರಿಗೆ ಅರ್ಪಿಸಿದ ಅಭಿನಂದನ ಗ್ರಂಥ. ಈ ಕೃತಿಯನ್ನು ವಿಮರ್ಶಕ ಡಾ. ಜಿ.ಎಂ. ಹೆಗಡೆ ಅವರು ಸೊಗಸಾಗಿ ಸಂಪಾದಿಸಿಕೊಟ್ಟಿದ್ದಾರೆ. ಕನ್ನಡ ಸಹೃದಯರು ವಿಮರ್ಶಾಲೋಕ ಡಾ. ಜಿ.ಎಸ್. ಆಮೂರರನ್ನು ಸ್ವೀಕರಿಸಿದ ಬಗೆ ಈ ಗ್ರಂಥದಲ್ಲಿ ಚೆನ್ನಾಗಿ ದಾಖಲಾಗಿದೆ. ಸ್ವೀಕೃತಿ ನೂರಕ್ಕೂ ಹೆಚ್ಚು ಲೇಖನಗಳ ವಿಶಿಷ್ಟ ಗೌರವ ಗ್ರಂಥ. ಇದರಲ್ಲಿ ಡಾ. ಆಮೂರರ ವ್ಯಕ್ತಿತ್ವವನ್ನು ವರ್ಣಿಸುವ ಕವಿತೆಗಳಿವೆ. ಇಲ್ಲಿನ ಲೇಖನಗಳು ಪ್ರಮುಖ ನಾಲ್ಕು ಭಾಗಗಳಲ್ಲಿ ಅಂತಸ್ಥವಾಗಿವೆ. ಮೊದಲ ಭಾಗದಲ್ಲಿ ಸಮಕಾಲೀನ ಸಾಹಿತಿಗಳ ಸ್ಪಂದನವಿದೆ. ಡಾ.

* Department of Kannada, University of Mumbai, Ranade Bhavan, 'A' wing, 1st Floor, Vidyanagari, Santacrz (East), Mumbai-400098.
Phone : 26526091, 26526388

ಆಮೂರರ ಕೃತಿಗಳಿಗೆ ಖ್ಯಾತ ಲೇಖಕರು ಬರೆದ ಮುನ್ನುಡಿ ಬೆನ್ನುಡಿ ಒಳ್ನುಡಿಗಳಿವೆ. ಎರಡನೆಯ ಹಾಗೂ ಮೂರನೆಯ ಭಾಗದಲ್ಲಿ ಆಮೂರರ ಕೃತಿಗಳ ವಿಮರ್ಶೆಯಿದ್ದರೆ ಭಾಗ ನಾಲ್ಕರಲ್ಲಿ ಡಾ. ಆಮೂರರೊಡನೆ ನಡೆಸಿದ ಸಂದರ್ಶನ ಲೇಖನಗಳಿರುವುದು ಈ ಕೃತಿಯ ವಿಶೇಷತೆ. ಕೊನೆಯಲ್ಲಿ ಸಾಹಿತ್ಯದ ಕುರಿತು ಅವರ ಮನದಂಗಳದ ಮಾತುಗಳು ಬಹು ಪರಿಣಾಮಕಾರಿಯಾಗಿ ಅನಾವರಣಗೊಂಡಿವೆ.

ಈ ಕೃತಿಯನ್ನು ಅತ್ಯಂತ ಪ್ರೀತಿ ಶ್ರದ್ಧೆಯಿಂದ ಸಂಪಾದಿಸಿಕೊಟ್ಟ ಡಾ. ಜಿ.ಎಂ. ಹೆಗಡೆ ಅವರು ಹೇಳುವುದು ಹೀಗೆ– "ಕನ್ನಡ ವಿಮರ್ಶೆಯ ಪ್ರಪಂಚದಲ್ಲಿ ಡಾ. ಜಿ.ಎಸ್. ಆಮೂರ ಅವರು ಶತಮಾನದ ಶ್ರೇಷ್ಠ ವಿಮರ್ಶಕರಲ್ಲೊಬ್ಬರಾಗಿ ಪ್ರಸಿದ್ಧರಾಗಿದ್ದಾರೆ. ಆಳವಾದ ವಿದ್ವತ್ತು, ಪ್ರತಿಭೆ, ಸದಭಿರುಚಿ, ಸಹೃದಯತೆಯಿಂದ ಕೂಡಿದ ಡಾ. ಜಿ.ಎಸ್. ಆಮೂರರ ವಿಮರ್ಶೆ ಕನ್ನಡ ವಿದ್ವತ್ ಪ್ರಪಂಚದಲ್ಲಿ ಅಪಾರ ಮನ್ನಣೆ ಗಳಿಸಿದೆ. ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಲೇಖಕರು ಹಾಗೂ ಕೃತಿಗಳ ಬಗೆಗೆ ಡಾ. ಆಮೂರ ಅವರು ಬರೆದ ವಿಮರ್ಶೆ ಹೊಸ ಅರ್ಥಲೋಕವನ್ನೇ ತೆರೆದಿದೆ. ಆಧುನಿಕ ಕನ್ನಡ ಸಾಹಿತ್ಯ ಆಕೃತಿಗೊಂಡ ಬಗೆಯನ್ನು, ಅದರ ಪರಂಪರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಹೊಸ ಚಿಂತನೆಗಳನ್ನು ಅವರು ನೀಡಿದ್ದಾರೆ. ತಾತ್ತ್ವಿಕ ಚಿಂತನೆಯು ಡಾ. ಆಮೂರರ ವಿಮರ್ಶೆ ಕನ್ನಡ ವಿಮರ್ಶೆಯಲ್ಲಿ ಹೊಸ ಮಾರ್ಗವನ್ನೇ ನಿರ್ಮಿಸಿದೆ. ಸಾಹಿತ್ಯ ಪರಂಪರೆಯ ನಿರಂತರ ಚಿಂತನ–ಮಂಥನಗಳಲ್ಲಿ ತಮ್ಮ ವಿಮರ್ಶನ ಪ್ರತಿಭೆಯನ್ನು ಕ್ರಿಯಾಶೀಲಗೊಳಿಸುತ್ತ ಬಂದ ಡಾ. ಆಮೂರ ಅವರು ಅದ್ವಿತೀಯ ಕಾರ್ಯ ಮಾಡಿದ್ದಾರೆ."

ಕಳೆದ ಕಾಲು ಶತಮಾನದಲ್ಲಿ ಡಾ. ಜಿ.ಎಸ್. ಆಮೂರರ ಕೃತಿಗಳ ಕುರಿತು ವಿಭಿನ್ನ ಚರ್ಚೆ, ವಿಮರ್ಶೆ, ವಿಚಾರಗಳನ್ನು ಇಲ್ಲಿ ಸಂಕಲಿಸಿಕೊಡಲಾಗಿದೆ. ಡಾ. ಜಿ.ಎಸ್. ಆಮೂರರ ಅಪೂರ್ವ ವ್ಯಕ್ತಿತ್ವ ಹಾಗೂ ಅವರ ವಿಮರ್ಶಾ ಪ್ರಪಂಚ ಎಷ್ಟು ವ್ಯಾಪಕವೂ ಅನ್ವಯಮುಖಿವೂ ಆಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಈ ಕೃತಿ ಉಪಯುಕ್ತವಾಗಿದೆ. ವಿಮರ್ಶೆ ಕನ್ನಡ ಸಾಹಿತ್ಯದ ಉತ್ಕರ್ಷಕ್ಕೆ ಪ್ರೇರಕವಾಗಿರಬೇಕೆಂಬ ಸದಾಶಯದಿಂದ ಸಾಹಿತ್ಯ ಕೃಷಿಯಲ್ಲಿ ನಿರತರಾಗಿರುವ ಆಮೂರರ ಬಹುಮುಖಿ ಪ್ರತಿಭೆ–ಪಾಂಡಿತ್ಯಕ್ಕೂ ಈ ಕೃತಿ ಕನ್ನಡಿ ಹಿಡಿಯುತ್ತದೆ.

ಆಮೂರರ ಸಾಹಿತ್ಯ ಕೃಷಿ ಬಹುವೈವಿಧ್ಯಮಯವಾದುದು. ಬೇಂದ್ರೆ, ಶ್ರೀರಂಗ, ಗಿರೀಶ್ ಕಾರ್ನಾಡ್, ಕುವೆಂಪು, ಅನಕೃ ಹೀಗೆ ಕನ್ನಡದ ಶ್ರೇಷ್ಠ ಸಾಹಿತಿಗಳ ಸಮಗ್ರ ಸಾಧನೆಯನ್ನು ವಿಶ್ಲೇಷಣೆಗೊಳಪಡಿಸಿದ್ದಾರೆ. ಕಾದಂಬರಿ, ಸಣ್ಣಕತೆ, ಕಾವ್ಯ, ನಾಟಕ ಮುಂತಾದ ಸಾಹಿತ್ಯ ಪ್ರಕಾರಗಳ ಸಮಗ್ರ ಅಧ್ಯಯನ ಮಾಡಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಜಿ.ಎಸ್. ಆಮೂರ ಎಂದ ತಕ್ಷಣ ಅವರು ರಚಿಸಿದ ಭುವನದ ಭಾಗ್ಯ, ಕನ್ನಡ ಕಥನ ಸಾಹಿತ್ಯ, ಕಾದಂಬರಿ, ವಿರಾಟ ಪುರುಷ, ಕಥನ ಶಾಸ್ತ್ರ, ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ಗಿರೀಶ್ ಕಾರ್ನಾಡ್ ಮತ್ತು ಭಾರತೀಯ ರಂಗಭೂಮಿ, ಕುವೆಂಪು

ಯುಗದ ಕವಿ, ಕಾಮಿಡಿ ಮೊದಲಾದ ಕೃತಿಗಳು ನಮ್ಮ ನೆನಪಿಗೆ ಬಂದುಬಿಡುತ್ತವೆ. ಕನ್ನಡ ಸಾಹಿತ್ಯದ ಹಿರಿಮೆಯನ್ನು ಇಂಗ್ಲೀಷ್ ಮೂಲಕ ಜಗತ್ತಿಗೆ ಪರಿಚಯಿಸಿದ ಕೀರ್ತಿಯೂ ಅವರಿಗೆ ಸಲ್ಲುತ್ತದೆ. ಆಮೂರ ಅವರದು ಸೃಜನಶೀಲ ಮನಸ್ಸು. ಅವರ ವಿಮರ್ಶೆಯಲ್ಲಿ ಹೊಸತನವಿದೆ, ಲವಲವಿಕೆಯಿದೆ, ಅದು ಚೇತೋಹಾರಿಯೂ ಆಗಿದೆ ಎಂಬ ಅಂಶ ಈ ಕೃತಿಯ ಓದಿನಿಂದ ನಮಗೆ ಮನದಟ್ಟಾಗುತ್ತದೆ.

ಪ್ರಸ್ತುತ ಕೃತಿಯಲ್ಲಿ ಆಮೂರರ ಸಾಹಿತ್ಯ ಸಾಧನೆಯ ಸಮಗ್ರ ನೋಟ ನಿಲುವು ದಾಖಲಾಗಿದೆ. "ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ತಮ್ಮ ಆಳವಾದ ಅಧ್ಯಯನದಿಂದ ಅಪೂರ್ವ ಒಳನೋಟಗಳಿಂದ ಸಾಹಿತ್ಯ ವಿಮರ್ಶೆಯನ್ನು ಬೆಳೆಸಿದವರಲ್ಲಿ ಡಾ. ಜಿ.ಎಸ್. ಆಮೂರರು ಅಗ್ರಗಣ್ಯರು. ಇಂಗ್ಲೀಷ್, ಕನ್ನಡ, ಸಂಸ್ಕೃತ, ಮರಾಠಿ ಸಾಹಿತ್ಯಗಳಲ್ಲಿ ಆಳವಾದ ಪರಿಶ್ರಮವುಳ್ಳ ಈ ಅಪರೂಪದ ವಿದ್ವಾಂಸರು ಪರಂಪರೆಯ ಗಾಢ ಪ್ರಜ್ಞೆಯಿಂದ ಸಾಹಿತ್ಯ ಕೃತಿಯೊಂದನ್ನು ಪ್ರವೇಶಿಸುವ ಮೂಲಕ ಆ ಕೃತಿಯ ಆಶಯದ ವಿಶ್ಲೇಷಣೆ ಸ್ವತಃ ಒಂದು ಸಾಂಸ್ಕೃತಿಕ ಸಂದರ್ಭದ ವಿಶ್ಲೇಷಣೆಯೇ ಎಂದು ಪರಿಭಾವಿಸಿ ಬರೆಯುವುದರಿಂದ ಆಮೂರರ ವಿಮರ್ಶೆಗೆ ಸಹಜವಾಗಿಯೇ ಹಲವು ಆಯಾಮಗಳು ಲಭಿಸುತ್ತವೆ. ಇದು ಅವರು ಕನ್ನಡದಲ್ಲೂ, ಇಂಗ್ಲೀಷ್‌ನಲ್ಲೂ ಬರೆದಿರುವ ಎಲ್ಲ ಕೃತಿಗಳಿಗೂ ಅನ್ವಯಿಸುವ ಮಾತು" ಎಂಬ ಲೇಖಕ ಎಸ್. ದಿವಾಕರ ಅವರ ಮಾತು ನಿಜವೇ ಆಗಿದೆ. ಸಾಹಿತ್ಯ ವಿಮರ್ಶೆಯನ್ನು ಬರವಣಿಗೆಯಲ್ಲಿ ಪ್ರಧಾನ ಸಾಧನವಾಗಿ ಬಳಸಿಕೊಂಡು ಬಂದಿರುವ ಆಮೂರರು ಹಿರಿಯ ವಿಮರ್ಶಕರು ಅಷ್ಟೇ ಅಲ್ಲ, ವಿಮರ್ಶೆಯ ಮುಖೇನವಾಗಿ ಓದುಗರನ್ನು ಅವರು ಬೇರೆ ಬೇರೆ ರೀತಿಯಲ್ಲಿ ಸಿದ್ಧ ಮಾಡಿದವರು. ಕನ್ನಡ ವಿಮರ್ಶೆಯ ಮಾದರಿಗಳು ಯಾವ ರೀತಿಯಲ್ಲಿವೆ ಮತ್ತು ನಾವಿನ್ನು ಕೈಗೆತ್ತಿಕೊಳ್ಳಬಹುದಾದ ವಾಗ್ವಾದಗಳು ಯಾವ ರೀತಿಯಲ್ಲಿರಬೇಕು ಎಂಬ ಸೂಚನೆ ಅವರ ಕೃತಿಗಳಲ್ಲಿ ಕಾಣಸಿಗುತ್ತದೆ. ಹೀಗಾಗಿ ಕನ್ನಡ ವಿಮರ್ಶೆಗೆ ದಿಕ್ಸೂಚಿಯಾಗಿ ಅವರ ಕೃತಿಗಳಿವೆ ಎಂಬ ವಿಮರ್ಶಕ ಡಾ. ಕೇಶವ ಶರ್ಮ ಅವರ ಮಾತಿನಲ್ಲಿ ತಥ್ಯವಿದೆ. ಕನ್ನಡದಲ್ಲಿ ವಿಮರ್ಶೆಯೂ ಸಾಹಿತ್ಯದ ಒಂದು ಗಣ್ಯ ಹಾಗೂ ಪ್ರಧಾನ ಪ್ರಕಾರವೆಂದು ಪರಿಗಣಿಸಲು ಕಾರಣರಾದ ಇಬ್ಬರು ಪ್ರಮುಖ ಲೇಖಕರು ಕೀರ್ತಿನಾಥ ಕುರ್ತಕೋಟಿ ಮತ್ತು ಜಿ.ಎಸ್. ಆಮೂರ ನಡೆದು ಬಂದ ದಾರಿಯನ್ನು ನಿರ್ಮಿಸಿದ ಕೀರ್ತಿನಾಥರ ವಿಮರ್ಶಾ ಪದ್ಧತಿಗೆ ಸಮನಾಗಿ ತಮ್ಮ ದಿಟ್ಟವಾದ ಹೆಜ್ಜೆಗಳನ್ನು ಮೂಡಿಸುತ್ತ ಈ ದಾರಿಯನ್ನು ಇವತ್ತಿನವರೆಗೆ ಮುನ್ನಡೆಸಿ ಬೆಳೆಸಿದವರು ಜಿ.ಎಸ್. ಆಮೂರರು ಎಂಬ ವಿಮರ್ಶಕ ಶ್ಯಾಮಸುಂದರ ಬಿದರಕುಂದಿ ಅವರ ಮಾತು ಬಹು ಮಾರ್ಮಿಕವಾಗಿದೆ.

ಕ್ನನಡದ ಹಿರಿಯ ವಿಮರ್ಶಕರಲ್ಲಿ ಒಬ್ಬರಾದ ಡಾ. ನರಹಳ್ಳಿ ಅವರು ಡಾ. ಆಮೂರರ ವಿಮರ್ಶೆಯ ಕುರಿತು ಹೇಳಿದ ಮಾತುಗಳು ಗಮನಾರ್ಹವಾಗಿವೆ. "ಆಮೂರರ ಒಟ್ಟಾರೆ ವಿಮರ್ಶಾ ಸಾಹಿತ್ಯವನ್ನು ಗಮನಿಸಿದಾಗ ಪ್ರಧಾನವಾಗಿ ಕಾಣುವ ಅಂಶವೆಂದರೆ ಸಾಕಷ್ಟು ಬಿಡಿ ಲೇಖನಗಳನ್ನು ಅವರು ಬರೆದಿದ್ದಾರೆ ಎನ್ನುವುದು ನಿಜವಾದರೂ, ಇಡಿಯಾದ ಅಧ್ಯಯನದ ಬಗ್ಗೆಯೇ ಅವರಿಗೆ ವಿಶೇಷ ಆಸಕ್ತಿ. ಒಬ್ಬ

ಲೇಖಕ ಅಥವಾ ಒಂದು ಪ್ರಕಾರ–ಹೀಗೆ ಆರಿಸಿಕೊಂಡು ಆ ಕುರಿತು ವ್ಯಾಪಕ ಅಧ್ಯಯನ ನಡೆಸಿ, ಅದಕ್ಕೆ ಸಂಬಂಧಿಸಿದಂತೆ ಆವರೆಗಿನ ಎಲ್ಲ ಬರಹಗಳನ್ನು ಗಮನಿಸಿ, ಸಮಗ್ರ ಅಧ್ಯಯನದ ಹಿನ್ನೆಲೆಯಲ್ಲಿ ಬರೆಯುವುದು ಅವರ ಕ್ರಮ. ಹಾಗೆ ಬರೆಯುವಾಗ ಅವರು ತಮ್ಮ ವ್ಯಕ್ತಿತ್ವವನ್ನು ಇಡಿಯಾಗಿ ಅದರಲ್ಲಿ ತೊಡಗಿಸಿಕೊಳ್ಳುತ್ತಾರೆ. ಕೆಲವೊಮ್ಮೆ ಅವರು ತಿಂಗಳುಗಟ್ಟಲೆ ಆ ವಿಷಯವನ್ನು ಬಿಟ್ಟು ಬೇರೆ ಸಂಗತಿಗಳತ್ತ ಗಮನಹರಿಸಿಲ್ಲ ಎಂಬುದನ್ನು ನಾನು ಬಲ್ಲೆ. ಯಾರ ಜತೆ ಮಾತನಾಡಿದರೂ ಆ ಬಗ್ಗೆಯೇ ಮಾತನಾಡುತ್ತ, ತಮಗೆ ಬೇಕಾದ ಧ್ಯಾನಶೀಲ ವಾತಾವರಣವನ್ನು ಕಲ್ಪಿಸಿಕೊಳ್ಳುತ್ತಾರೆ. ಅವರದು ಒಂದು ರೀತಿ ಹುತ್ತಗಟ್ಟಿದ ಚಿತ್ತ; ಅಧ್ಯಯನಶೀಲ ತಪಸ್ವಿ".

ಆಮೂರರ ಕೃತಿಗಳಿಗೆ ಬೇಂದ್ರೆ, ಗೋಕಾಕ, ಅನಂತಮೂರ್ತಿ, ಡಿ.ಆರ್. ನಾಗರಾಜ್, ಜಿಎಸ್ಎಸ್, ಕಂಬಾರ, ಕಲಬುರ್ಗಿ, ಸಿ.ಎನ್.ಆರ್., ಕಣವಿ, ಗಿರಡ್ಡಿ, ಟಿ.ಪಿ. ಅಶೋಕ, ಜಿ.ಎಂ. ಹೆಗಡೆ, ಎಚ್.ಎಸ್. ರಾಘವೇಂದ್ರ ರಾವ್, ನಾಡಿಗ, ಎಚ್ಎಸ್‌ವಿ ಹೀಗೆ ನಾಡಿನ ಕವಿ ಸಾಹಿತಿ ಚಿಂತಕರು ಬರೆದ ಮುನ್ನುಡಿ ಹಿನ್ನುಡಿ ಅಭಿಪ್ರಾಯ ವಿಮರ್ಶೆಗಳೆಲ್ಲ ಒಂದೆಡೆ ಈ ಗ್ರಂಥದಲ್ಲಿ ದಾಖಲಾಗಿರುವುದು ಆಮೂರರ ಸಾಹಿತ್ಯ ಸಾಧನೆಯ ಅನನ್ಯತೆಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ. ಒಟ್ಟಿನಲ್ಲಿ ಕನ್ನಡದ ಹಿರಿಯ ಲೇಖಕರೊಬ್ಬರಾದ ಜಿ.ಎಸ್. ಆಮೂರ ಅವರು ಅರ್ಧ ಶತಮಾನಕ್ಕಿಂತಲೂ ಹೆಚ್ಚಿನ ಅವಧಿಯಲ್ಲಿ ಕನ್ನಡ ಸಾಹಿತ್ಯಕ್ಕೆ ವಿಶೇಷವಾಗಿ ವಿಮರ್ಶೆಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಗುರುತಿಸುವ, ಗೌರವಿಸುವ ಪ್ರಯತ್ನದ ಫಲ ಈ ಬೃಹತ್ ಗ್ರಂಥ. ವಿಭಿನ್ನ ರೀತಿಯಲ್ಲಿ ರೂಪಗೊಂಡ ಈ ಅಭಿನಂದನ ಗ್ರಂಥ ಸಾಹಿತ್ಯ ಸಂಸ್ಕೃತಿಯಲ್ಲಿ ಆಸ್ಥೆಯುಳ್ಳ ಎಲ್ಲ ಗಂಭೀರ ವಾಚಕರಿಗೆ ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ.

ಕೊನೆಯ ಭಾಗದಲ್ಲಿನ ಸಂದರ್ಶನಗಳು ಬಹು ಆಪ್ತವೂ ವ್ಯಾಪ್ತವೂ ಆಗಿದ್ದು ಕನ್ನಡ ಸಾಹಿತ್ಯದ ಜತೆಗೆ ಜಾಗತಿಕ ಸಾಹಿತ್ಯದ ವಿವರಗಳು ನೆಲೆ ಪಡೆದುಕೊಂಡಿವೆ. ಸಮಕಾಲೀನ ಕನ್ನಡ ಸಾಹಿತ್ಯದ ಕುರಿತು ಆಮೂರ ಅವರು ವ್ಯಕ್ತಪಡಿಸಿರುವ ವಿಚಾರಗಳು ಬಹುಮೌಲಿಕವಾಗಿವೆ. ಆಮೂರರು ಮಾಡಿದ ಗದಗ ಜಿಲ್ಲೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷೀಯ ಭಾಷಣ ವಿಚಾರ ಪರಿಪ್ಲುತವಾಗಿವೆ. ಈ ಕೃತಿ ಬಹು ಸೊಗಸಾಗಿ ಮಡಿಮೂಡಿದೆ. ಕೃತಿಯ ವಿನ್ಯಾಸವೂ ಆಕರ್ಷಕವಾಗಿದೆ. ಆಮೂರರ ಸಾಧನೆ ಕುರಿತು ಸಾಕಷ್ಟು ಅಧ್ಯಯನ ಮಾಡಿ ವಿಶೇಷ ಲೇಖನಗಳನ್ನು ಡಾ. ಜಿ.ಎಂ. ಹೆಗಡೆ ಅವರು ಇಲ್ಲಿ ಬರೆದಿದ್ದಾರೆ. ಒಂದು ಒಳ್ಳೆಯ ಕೃತಿಯನ್ನ ಹೇಗೆ ಸಂಪಾದಿಸಿಕೊಡಬೇಕು ಎಂಬುದಕ್ಕೂ ಈ ಕೃತಿ ಮಾದರಿಯಾಗಿದೆ. ಸಂಪಾದಕ ಡಾ. ಜಿ.ಎಂ. ಹೆಗಡ ಅವರ ಶ್ರಮ ಸಾರ್ಥಕವಾಗಿದೆ.

ಕೃತಿ : ಸ್ವೀಕೃತಿ
(ಜಿ.ಎಸ್. ಆಮೂರ ಅಭಿನಂದನ ಗ್ರಂಥ)
ಸಂಪಾದಕರು : ಡಾ. ಜಿ.ಎಂ. ಹೆಗಡೆ
ಸಾಹಿತ್ಯ ಪ್ರಕಾಶನ, ಪುಟಗಳು : ೫೨೮, ಬೆಲೆ : ರೂ. ೪೫೦

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ-ಡಿಸೆಂಬರ್, ೨೦೧೫

# ೧೬. ವಚನ-ಬಂಡಾಯ ಸಾಹಿತ್ಯ ಚಳುವಳಿ ಸ್ತ್ರೀ ಪ್ರಾಬಲ್ಯೀಕರಣ

-ಡಾ. ಶೀಲಾದೇವಿ.ಎಸ್. ಮಳೀಮಠ*

"ಬಂಡಾಯ" ಎನ್ನುವ ಶಬ್ದ, ಚಳುವಳಿ, ಆಂದೋಲನ, ಬಂಡೇಳುವುದು, ವ್ಯವಸ್ಥೆಯ ವಿರುದ್ಧದ ಹೋರಾಟ ಎನ್ನುವ ಅರ್ಥಗಳಿದ್ದರೂ ನಾನು ಇದನ್ನು ಸಮಸ್ಯೆಯೊಂದರ ಅರಿವು-ತಿಳಿವಳಿಕೆ-ಪುನರ್‌ರಚನೆ-ಎನ್ನುವ ಅರ್ಥದಲ್ಲಿ ಪರಿಭಾವಿಸಿಕೊಂಡಿದ್ದೇನೆ. ಇದಕ್ಕೆ 'ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ವಚನ'ವನ್ನು ಸಂಪನ್ಮೂಲವಾಗಿ ಅಧ್ಯಯನಕ್ಕೆ ವಸ್ತುವನ್ನಾಗಿಸಿಕೊಂಡಿದ್ದೇನೆ.

**ನಾಡೋಜ ಡಾ. ಬರಗೂರು ರಾಮಚಂದ್ರಪ್ಪ :**

ಮನುಷ್ಯ ಮನುಷ್ಯರ ನಡುವೆ ಕಲ್ಲಿನಕೋಟೆ ಕಟ್ಟುವ ಅಮಾನವೀಯ ಬದುಕನ್ನು ಹಸನುಗೊಳಿಸುವ ಆಕಾಂಕ್ಷೆ, ಬಂಡಾಯ ಸಾಹಿತ್ಯದ ಬೆನ್ನೆಲುಬು. ಈ ಆಕಾಂಕ್ಷೆ ಹೊತ್ತ ವ್ಯವಸ್ಥೆ ವಿರೋಧಿ ಆಶಯಗಳ ಅಭಿವ್ಯಕ್ತಿಯೇ ನಮ್ಮ ಸೃಜನಶೀಲತೆಯ ಮುಖ್ಯ ಕಾಳಜಿ.

**ಡಾ. ಚಂದ್ರಶೇಖರ ಪಾಟೀಲ :**

ವಾಸ್ತವಿಕತೆ, ಸಮಾನತೆ, ಕ್ರಿಯಾತ್ಮಕತೆ, ಜೀವನಪ್ರಜ್ಞೆ, ಸಮಕಾಲೀನತೆ, ವೈಚಾರಿಕತೆ, ವಸ್ತುನಿಷ್ಠತೆ, ಇವು ಬಂಡಾಯ ಸಾಹಿತ್ಯದ ಪ್ರಮುಖ ಲಕ್ಷಣಗಳು. ನಿರೂಪಣಾ ಕ್ರಮ ನೇರ, ನಿರ್ಭೀತಿ, ನಿರ್ಭಿಡೆ, ವಿಡಂಬನೆ.

**ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ವಚನ**

ಅಯ್ಯಾ, ಅಸ್ಥಿ ಚರ್ಮ ಮಾಂಸ ಶುಕ್ಲಶೋಣಿತದ ಗುಡಿಯಕಟ್ಟಿ
ಹಂದಿಯ ದೇವರ ಮಾಡಿ ಕುಳ್ಳಿರಿಸಿ

* ಮುಖ್ಯಸ್ಥರು, ಸಹ ಪ್ರಾಧ್ಯಾಪಕರು ಮತ್ತು ಸಂಶೋಧನಾ ಮಾರ್ಗದರ್ಶಕರು, ಕನ್ನಡ ವಿಭಾಗ, ಬಿಎಂಎಸ್ ಮಹಿಳಾ ವಿದ್ಯಾಲಯ, ಬಸವನಗುಡಿ, ಬೆಂಗಳೂರು-೫೬೦೦೦೪. ದೂರವಾಣಿ : ೯೪೪೮೨೬೧೪೪೪೫

ಪಾದರಕ್ಷೆಯ ಪೂಜೆಯ ಮಾಡಿ
ನೈವೇದ್ಯವ ಹಿಡಿದು, ಮೂತ್ರದ ನೀರ ಕುಡಿಸಿ
ಶ್ವಾನ ಕುಕ್ಕುಟನಂತೆ ಕೂಗಿ ಬೊಗಳಿ
ದಡದಡ ನೆಲಕ್ಕೆ ಬಿದ್ದು ಕಾಡಿಕೊಂಡು
ಆ ದೇವರ ಒಡೆಯ ಮಾರೇಶ್ವರ
ಕಂಡ ಹೆಂಡ ಕೊಡುವವನಲ್ಲದೆ ಅನ್ನ ನೀರು ಕೊಡುವನೆ?
ಆ ದೇವರಿಗೆ ಹೊಲೆಯರು ಮೆಚ್ಚುವರಲ್ಲದೆ
ಉತ್ತಮರು ಮೆಚ್ಚರು ನೋಡಯ್ಯ,
ಮಸಣಯ್ಯ ಪ್ರಿಯ ಮಾರೇಶ್ವರಲಿಂಗವೆ.

೧೨ನೆಯ ಶತಮಾನದಲ್ಲಿ ಪ್ರಖರವಾಗಿ ಕಂಡು ಬಂದಿದ್ದ ಪ್ರಗತಿಪರ ಧೋರಣೆಗಳು, ತೆಗೆದುಕೊಂಡ ತಿರುವುಗಳು, ಎದುರಿಸಿದ ಸಮಸ್ಯೆಗಳು, ಪರಿಹಾರಗಳು, ಪರಿಣಾಮದ ನೆಲೆಗಳನ್ನು ಅವಲೋಕಿಸಿದಾಗ 'ಬಂಡಾಯತ್ವ'ದ ಸಂಘಟನಾತ್ಮಕತೆ ಗೋಚರಿಸುತ್ತದೆ.

ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ – ಧಾರ್ಮಿಕ – ಆಧ್ಯಾತ್ಮಿಕ – ರಾಜಕೀಯ ಬೆಳವಣಿಗೆಗಳ ಸ್ವರೂಪದಿಂದಾಗಿ ಉದ್ಭವಿಸಿದ ಅನೇಕ ಸಂದರ್ಭ ಸನ್ನಿವೇಶಗಳ ಹಿನ್ನೆಲೆಯಲ್ಲಿ ಹೋರಾಟದ – ಸ್ತ್ರೀಪ್ರಾಬಲ್ಯೀಕರಣದ ನೆಲೆ ಕಂಡುಕೊಳ್ಳಬೇಕಾಗಿದೆ.

ಜನವಿರೋಧಿ ನಿಲುವುಗಳು ಅರ್ಧಮುಖಗಳ ಮರೆಯಲ್ಲಿ ಒಂದಾಗಿ ವಿಜೃಂಭಿಸುತ್ತಿರುವ ಈ ಹೊತ್ತಿನಲ್ಲಿ ಪ್ರಗತಿಪರ ಧೋರಣೆ ಸ್ತ್ರೀಪ್ರಾಬಲ್ಯೀಕರಣ (Feminisation) ಒಂದು ಸವಾಲು. ಈ ಸವಾಲಿಗೆ ಉತ್ತರ 'ಸ್ತ್ರೀಪ್ರಾಬಲ್ಯತೆ' ಎಂದರೆ ಸಾಂಸ್ಕೃತಿಕ ಒಗ್ಗಟ್ಟು, ಸಮಸ್ಯೆ ಪತ್ತೆಹಚ್ಚುವುದು, ಪರಿಶೀಲಿಸುವುದು, ನ್ಯಾಯ ಒದಗಿಸುವುದು. ಈ ದಿಕ್ಕಿನಲ್ಲಿ ಈ ಮೇಲಿನ ವಚನ ಶೋಷಿತ ಜನರ ಪರವಾದ ನಿಲುವುಗಳನ್ನು ಸ್ತ್ರೀಪ್ರಾಬಲ್ಯತೆಯ ಕ್ಷೇತ್ರದಲ್ಲಿ ಸಾಂಸ್ಕೃತಿಕತೆ ಭದ್ರವಾಗಿ ನೆಲೆಗೊಳಿಸುವುದರಲ್ಲಿ 'ಬಂಡಾಯತ್ವ' ಅನಾವರಣಗೊಳ್ಳುವುದನ್ನು ದಾಖಲಿಸುತ್ತಾ ಹೋಗುತ್ತದೆ.

ಈ ವಚನ ಸಾಂಸ್ಕೃತಿಕ, ಧಾರ್ಮಿಕ, ಮಾನವೀಯತೆಯ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವುಗಳು ಎಂಬ ನಿಲುವಿನಿಂದ ಹೊರಟು, ಸಾಹಿತ್ಯಿಕ, ಸಾಮಾಜಿಕ, ಜಾಗತಿಕ ಪ್ರಜ್ಞೆ ಇರಬೇಕೆಂಬ ಆಶಯದತ್ತ ಹೊರಳುತ್ತದೆ. ಜಾತಿಪದ್ಧತಿ, ವರ್ಣಸಂಕರ, ಲಿಂಗಬೇಧ, ಅಸ್ಪೃಶ್ಯತೆ, ಸಾಮಾಜಿಕ ಅನ್ಯಾಯ, ಅನೀತಿಯ ವಿರುದ್ಧ 'ಹೋರಾಟ' ಕಟ್ಟುತ್ತಿರುವ ವಚನದಲ್ಲಿ ಸ್ಪಷ್ಟವಾಗಿದೆ. ಜನಪರ ನಿಲುಗಳನ್ನು ಬೆಂಬಲಿಸುತ್ತಲೇ, ಜನಪರವಾದ ಸಾಂಸ್ಕೃತಿಕ ಹೋರಾಟದ ಎಚ್ಚರವಿರುವ ಹೋರಾಟದ ದಾಖಲೆಯೇ 'ಸ್ತ್ರೀ ಪ್ರಾಬಲ್ಯೀಕರಣ' ನೆಲೆಯಾಗಿ ಸ್ಪಷ್ಟೀಕರಣ ನೀಡುತ್ತಾ ಮೂರ್ತ ಮತ್ತು ಅಮೂರ್ತದ ದನಿಯಾಗಿ ವಿಕಾಸ ಹೊಂದುತ್ತಾ ಅರಳುತ್ತದೆ. 'ಅಯ್ಯಾ, ಅಸ್ಥಿ ಚರ್ಮ ಮಾಂಸ ಶುಕ್ಲಶೋಣಿತದ ಗುಡಿಯಕಟ್ಟೆ' ಶೋಷಿತರ ಪರ ಹೋರಾಟವನ್ನು ಸಂಘಟಿಸುವುದು, ಕ್ರಿಯಾಶೀಲವಾಗಿ ಪ್ರತಿಕ್ರಿಯಿಸುವುದು, ಸಾಮಾಜಿಕ ಬದುಕಿನ ಎಲ್ಲ ಅನ್ಯಾಯ, ಅಕ್ರಮಗಳ ವಿರುದ್ಧ ಹೋರಾಡುವ ಸಣ್ಣ ಎಳೆ ಮೊಳಕೆಯೊಡುತ್ತದೆ. "ಕಂಡ ಹೆಂಡ ಕೊಡುವವನಲ್ಲದೆ

ಅನ್ನ ನೀರು ಕೊಡುವನೆ ?" ಮೇಲಿನ ಮೂಲ ವಿಷಯಗಳನ್ನು ಗಂಭೀರವಾಗಿ ಪರಿಗಣಿಸಿ ಸಾಹಿತ್ಯರಚನೆ ಮಾಡುವುದರ ಪ್ರಣಾಳಿಕೆಯನ್ನು ಬಂಡಾಯ ಸಾಹಿತ್ಯ ಪ್ರಮುಖವಾಗಿ ಪರಿಗಣಿಸಿತ್ತೋ ಅದನ್ನೇ ಈ ವಚನ ಬದ್ಧತೆಯಾಗಿ ಒಪ್ಪಿಕೊಂಡ ಸಂಗತಿಯನ್ನು ತನ್ನ ಒಳಅಂತಸ್ತಿನಲ್ಲಿ ಬಿಚ್ಚುತ್ತಾ ಹೋಗುತ್ತದೆ.

ಅಯ್ಯಾ – ತಂದೆ, ಅಜ್ಜ (ಹಿರಿಯ), ಜಂಗಮ, ಅನುಭವಸ್ಥ, ವೃದ್ಧ, ವಿಚಾರಶೀಲ

ಅಸ್ಥಿ – ಮೂಳೆ – ಎಲುಬು

ಶುಕ್ಲ – ಬಿಳಿಯ ಬಣ್ಣ, ಅರವತ್ತು ಸಂವತ್ಸರಗಳಲ್ಲಿ ಒಂದು, ವೀರ್ಯ, ಕಣ್ಣು

ಶೋಣಿತ – ರಕ್ತ, ಸ್ತ್ರೀಯ ಗರ್ಭಾಣು

ವಿಶಾಲಾರ್ಥದಲ್ಲಿ ಅಯ್ಯಾ 'ಮನುಷ್ಯ', ಹೇ ಅಯ್ಯನೇ, ಮನುಷ್ಯನೇ, ನೀನು ಎಲುಬು, ಚರ್ಮ, ಮಾಂಸ, ಬಣ್ಣ, ಕಣ್ಣು, ರಕ್ತದಿಂದ ಕಟ್ಟಿರುವ ಗುಡಿ, ಎಂದರೆ 'ದೇಹ', ಕಠಿಣವಾದ ಮುಖದ ಒಂದು ಜಾತಿಯ ಪ್ರಾಣಿ ನೀನು ಹಂದಿಯ ದೇವರ ಮಾಡಿ ಕುಳ್ಳಿರಿಸಿ, ಪಾದರಕ್ಷೆಯ ಪೂಜೆ ಮಾಡಿ ಅಂದರೆ ಆ ಪ್ರಾಣಿಗೆ, ನೈವೇದ್ಯವ ಹಿಡಿದು, ಮೂತ್ರದ ನೀರ ಕುಡಿಸಿ, ನಾಯಿ, ಹುಂಜದಂತೆ ಕೂಗಿ, ಬೊಗಳಿ, ದಡದಡ ನೆಲಕ್ಕೆ ಬಿದ್ದು ಕಾಡಿಕೊಂಡು ಬಂಡಾಯ ಸಾಹಿತ್ಯದ ಧೋರಣೆ ಮನುಷ್ಯನ ಉಳಿವು ಹಾಗೂ ಬೆಳೆವಣಿಗೆಗಾಗಿ ಬದ್ಧನಾಗಿರಬೇಕು ಎನ್ನುವ ನೇರ ಪ್ರಜ್ಞೆಯೋ ಎಂಬಂತೆ 'ಕಾಡಿ' ಹಠಮಾಡಿ ಅನ್ಯಾಯವಾಗಿಸಿಕೊಂಡು ಎಂದರೆ ಮನುಷ್ಯ ಬದುಕಿನ ಕ್ರೂರ ಹಾಗೂ ಕತ್ತಲಮುಖಿಗಳಲ್ಲಿ ವಾಸ್ತವದ ಬೆಳಕಿಗೆ ತೆರೆಯುವ ಕಳಕಳಿಗಿಂತ ಹಪಿಹಪಿಸುವ ಬದುಕನ್ನು ಕಾಡಿಸಿ, ಬಲವಂತದಿಂದ ಕೊಂಡು, ಮನುಷ್ಯ ಮನುಷ್ಯನ ನಡುವೆ 'ದೇವರ ಒಡೆಯ' ಎನ್ನುವ ಕಠಿಣವಾದ ಮುಖದ ಕಲ್ಲಿನ ಗೋಡೆಯ ಕಟ್ಟಿ ಅಮಾನವೀಯ ಬದುಕನ್ನು ಹಸನುಗೊಳಿಸುವ ಜನಪರ ನೆಲೆ 'ತ್ರಿದ್ವಂದ್ವವಾಗಿ' ವಚನ ಬೆಳಕು ತೋರುತ್ತದೆ.

ಆ ದೇವರ ಒಡೆಯ ಮಾರೇಶ್ವರ
ಕಂಡ ಹೆಂಡ ಕೊಡುವವನಲ್ಲದೆ ಅನ್ನ ನೀರು ಕೊಡುವನೆ ?

ಬದುಕನ್ನು ಸಾಂಗಗೊಳಿಸುವ ಆಕಾಂಕ್ಷೆ ಹೊತ್ತ ಸಾಮಾಜಿಕ ನ್ಯಾಯವಿರೋಧಿ ಆಶಯಗಳ ಅಭಿವ್ಯಕ್ತಿ ಸೃಜನಶೀಲತೆಯ ಕಾಳಜಿಯಾಗಿ ವಚನ ಸಮಾಜದ ಅವ್ಯವಸ್ಥೆಯ ವಿರೋಧಿ ಆಶಯಗಳತ್ತ ಪ್ರಾಬಲ್ಯತೆಯನ್ನು ಸೃಷ್ಟಿಸುವಲ್ಲಿ ಬಂಡೇಳುತ್ತದೆ. ಪೋಲಂಕಿ ರಾಮಮೂರ್ತಿಯವರು ಅಭಿವ್ಯಕ್ತಿಸುವಂತೆ ಬಂಡಾಯವೆಂದರೆ 'ದಂಗೆ' – 'ಕ್ರಾಂತಿ' ಎನ್ನುವ ಧೋರಣೆ ಸ್ತ್ರೀಪ್ರಾಬಲ್ಯೀಕರಣಕ್ಕೆ ಈ ವಚನ ದ್ಯೋತಕವಾಗಿ ನಿಲ್ಲುತ್ತದೆ.

'ಆ ದೇವರಿಗೆ ಹೊಲೆಯರು ಮೆಚ್ಚುವರಲ್ಲದೆ
ಉತ್ತಮರು ಮೆಚ್ಚರು ನೋಡಯ್ಯ.
ಮಸಣಯ್ಯ ಪ್ರಿಯ ಮಾರೇಶ್ವರಲಿಂಗವೆ".

ಉತ್ತಮ, ಹೊಲೆಯ ಕಲ್ಪನೆ ದೇಹಕ್ಕಲ್ಲ, ಅದೊಂದು 'ಮನೋಭಾವ'. ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರು ಹೇಳುವಂತೆ ಬಂಡಾಯ ಎನ್ನುವುದು ಮನೋಧರ್ಮ.

ಆ ಮನೋಧರ್ಮದ ಮುಖ್ಯಲಕ್ಷಣ ಸಮಾಜಿಕ ಅಸಮಾನತೆ ಮತ್ತು ಅನ್ಯಾಯಗಳನ್ನು ಒಟ್ಟಾರೆಯಾಗಿ ವಸ್ತುಸ್ಥಿತಿಯನ್ನು ಪ್ರಶ್ನಿಸುವ ಮತ್ತು ಪರಿಸ್ಥಿತಿಯನ್ನು ಬದಲಾಯಿಸುವ ಉದ್ದೇಶದಿಂದ ಪ್ರತಿಭಟಿಸುವ ಒಂದು ಪ್ರವೃತ್ತಿ.... ಎನ್ನುವ ಮನೋಧರ್ಮ ಈ ವಚನದಲ್ಲಿ ಬಂಡಾಯ ಸಾಹಿತ್ಯದ ನಿಲುವು ಧೋರಣೆಗಳನ್ನು ಚಿತ್ರಿಸಿದಂತೆ ಗೋಚರವಾಗುತ್ತದೆ. ವಚನದ ಭಾಷೆ, ಲಯ, ನಿರ್ದೇಶನ, ಛಂದಸ್ಸು, ಪ್ರತಿಮೆ, ಪ್ರಾಸ ಪ್ರಶ್ನೆಗೆ ಉತ್ತರ, ಸಾಮಾಜೀಕರಣ ಧೋರಣೆ, ಅನ್ನ, ನೀರು, ಹೆಂಡದ ಪ್ರಕ್ರಿಯಾತ್ಮಕ ಧ್ವನಿಗಳು, ಮಾದಕ ಪದಾರ್ಥವಾದ ಹೆಂಡಕ್ಕೆ ಹೊಸ ವ್ಯಾಖ್ಯಾನ, ಐಹಿಕ ಸುಖಭೋಗಗಳಿಗಿಂತ 'ಅನ್ನ ನೀರಿಗಾಗಿ' ಸನ್ಮಾರ್ಗವನ್ನು ಹುಡುಕಿಕೊಳ್ಳಬೇಕಾದ ಮಾರ್ಗೋಪಾಯಗಳ ತಿಳಿವು, ಅನ್ನ ನೀರಿನ ಸಮಸ್ಯೆ ಅದಕ್ಕಾಗಿ ಕಾಯಕದ ಮಹತ್ವದ ಅರಿವು, ತಿಳಿವಿನ ಸಂಘರ್ಷ ಇವೆಲ್ಲವುಗಳೂ 'ಮೆಚ್ಚಾಗಬೇಕೇ ವಿನಃ ಕಡಿಗತ್ತಿ' ಯಾಗಬಾರದು. ದೇಹಕ್ಕೆ ಸಾಮಾಜಿಕ ನ್ಯಾಯ ಆಭರಣವಾಗಬೇಕೇ ವಿನಃ ಸಿಮೆಂಟಿನ ಮೇಲ್ಹಾವಣಿಯ ಅನ್ಯಾಯದ ಹೊರಕವಚ ವಾಗಬಾರದು.

'ಸ್ತ್ರೀಪ್ರಾಬಲ್ಯೀಕರಣ' ಎನ್ನುವ ಪರಿಕಲ್ಪನೆ, ಬಂಡಾಯ ಸಾಹಿತ್ಯದ ಧ್ಯೇಯವಾಕ್ಯವಾದ "ಖಡ್ಗವಾಗಲಿ ಕಾವ್ಯ – ಜನರ ನೋವಿಗೆ ಮಿಡಿವ ಪ್ರಾಣಮಿತ್ರ" ಎಂಬುದನ್ನು ವಚನ ಅಂದೇ ಸ್ಪಷ್ಟಪಡಿಸಿತ್ತು. ಮಸಣಯ್ಯ ಪ್ರಿಯ ಮಾರೇಶ್ವರ ಲಿಂಗ ಅಂಕಿತದ ವಚನ ಕೇವಲ ಒಂದೇ ಒಂದು ಲಭ್ಯವಾಗಿದ್ದು, ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ಬಗ್ಗೆ ಸ್ಪಷ್ಟಮಾಹಿತಿಗಳು ಲಭ್ಯವಾಗಬೇಕಾಗಿರುವುದರಿಂದ, ಶಿವಶರಣೆಯರ ವಚನ ಸಿನೆಯ ಸಂಪುಟದ ೧೩೫೧ನೆಯ (ಪುಟ ಸಂಖ್ಯೆ: ೪೧೭) ಏಕೈಕ ವಚನವನ್ನು ನನ್ನ ಪರಿಕಲ್ಪನೆಗೆ ಸಂಪನ್ಮೂಲವಾಗಿ ಪಡೆದಿರುತ್ತೇನೆ.

"ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ವಚನ" ವ್ಯವಸ್ಥೆಯ ವಿರುದ್ಧದ ಹೋರಾಟಕ್ಕೆ ಮುಂದಾಗುತ್ತಲೇ, ಸಮಾಜ ಜೀವನ ಹಾಗೂ ಸಂಸ್ಕೃತಿಗಳ ಲೋಪದೋಷಗಳ ವಿರುದ್ಧ ಬಂಡೇಳುವುದರ ಪ್ರತಿಬಿಂಬದಂತೆ ಅಮೂರ್ತವಾಗುತ್ತ ಸ್ತ್ರೀಪ್ರಾಬಲ್ಯತೆ ಮೂರ್ತವಾಗುತ್ತಿರುವುದರ ಆಶಯದ ಆಳದಲ್ಲಿ ಹೊಸ ಸಮಾಜದ ಪುನಾರಚನೆಯು ಸಮಾನತೆ, ಅನ್ಯಾಯ, ಶೋಷಣೆಯನ್ನೇ ಮೂಲಕ್ರಯ ಮಾಡಿಕೊಂಡು ಯುಗಾಂತರಗಳಿಂದಲೂ ಬಡವ, ಬಲ್ಲಿದ, ಸ್ಪೃಶ್ಯ, ಅಸ್ಪೃಶ್ಯ, ಜಾತಿಬೇಧ, ಲಿಂಗಭೇದ ತುಳಿಯುತ್ತ ಶೋಷಿಸುತ್ತ ಬಂದ ಉತ್ತಮ ಎನ್ನುವ ಮುಖವಾಡದ ವಿರುದ್ಧ ಬಂಡೇಳುವ ಕೆಚ್ಚು ಅಂತಹ ಪ್ರತಿಭಟನೆಯಲ್ಲಿರುವ ಪ್ರಾಮಾಣಿಕತೆ, ಸಾಮಾಜಿಕ ನ್ಯಾಯದ ಬದ್ಧತೆ ಈ ವಚನದ ಮೂಲಸೆಲೆ. ಅದುವೇ ಸ್ತ್ರೀಪ್ರಾಬಲ್ಯತೆ.

ದೇವರು, ಉತ್ತಮ, ಹೊಲೆಯ ಈ ಭಾವದ ದುರಂತ ಬದುಕಿಗೆ ಕಾರಣವಾಗಿರುವ ವ್ಯವಸ್ಥೆಯ ವಿರುದ್ಧ ಕಿಡಿಕಾರುತ್ತಾ, ಮೇಲುಕೀಳಿನ ಅಜ್ಞಾನ, ಅಲ್ಪತೃಪ್ತಿಗಾಗಿ ನೋಯುತ್ತ, ಅವರನ್ನು ಸಂಘರ್ಷಕ್ಕೆ ಪ್ರಚೋದಿಸುವ, ಪ್ರಶ್ನಿಸುವ ಒಳ ಆಕೃತಿಯೇ ಸ್ತ್ರೀಪ್ರಾಬಲ್ಯೀಕರಣ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೨
ಜುಲೈ–ಡಿಸೆಂಬರ್, ೨೦೧೫

# ೧೭. ಗೀತಾ ನಾಗಭೂಷಣ ಅವರ 'ಬಾಕಿ' ಕಾದಂಬರಿ : ಸ್ತ್ರೀವಾದಿ ಆತ್ಮ ಕಥನದ ಆವೃತ್ತಿ

–ಶ್ರೀದೇವಿ ವೈ.ಎಸ್.*

ಶ್ರೀಮತಿ ಗೀತಾನಾಗಭೂಷಣ ಅವರು ಕರ್ನಾಟಕದ ಪ್ರಮುಖ ಲೇಖಕಿ. ಇವರು ಹಲವು ಕಾದಂಬರಿಗಳನ್ನು ರಚಿಸಿದ್ದಾರೆ. ೨೦೧೨ರಲ್ಲಿ ಹೊರಬಂದ ಇವರ 'ಬಾಕಿ' ಕಾದಂಬರಿಯು ಸಮಗ್ರ ಸ್ತ್ರೀವಾದಿ ನೆಲೆಯನ್ನು ಬಿಂಬಿಸುವಂಥದ್ದು. ಈ ಕಾದಂಬರಿಯು ಕಲಬುರ್ಗಿ ಜಿಲ್ಲೆಯ ಸಾಮಾಜಿಕ ಸ್ಥಿತಿಗತಿ, ಜಾತಿ, ಧಾರ್ಮಿಕತೆ, ಶೈಕ್ಷಣಿಕ ವ್ಯವಸ್ಥೆ, ಕೆಳಜಾತಿ ವರ್ಗಗಳ ಬದುಕು, ಭಾಷಾಸೊಗಡು, ಅಲ್ಲದೆ ಇಡಿಯಾಗಿ ಹೈದ್ರಾಬಾದ ಕರ್ನಾಟಕದ ಸಂಸ್ಕೃತಿಯನ್ನು ಪರಿಚಯ ಮಾಡಿಸುತ್ತದೆ. ಹಳ್ಳಿಯ ಬದುಕನ್ನು ಕಟ್ಟಿಕೊಡುತ್ತಾ ನಗರ ಜೀವನದೊಂದಿಗೆ ಈ ಕಾದಂಬರಿ ಕೊನೆಗೊಳ್ಳುತ್ತದೆ. ಈ ಕಾದಂಬರಿ ಮೂರು ನಾಲ್ಕು ತಲೆಮಾರಿನ ಒಂದು ಕುಟುಂಬದ ಬದುಕನ್ನು ಚಿತ್ರಿಸಿದೆ. ಈ ಕಾದಂಬರಿಯು ಮುಖ್ಯವಾಗಿ ಸ್ತ್ರೀಯು ತನ್ನ ಜೀವನದುದ್ದಕ್ಕೂ ಅನುಭವಿಸಿದ ನೋವು, ಅಪಮಾನ, ಬುದಕಿನುದ್ದಕ್ಕೂ ಮಾಡಿದ ಹೋರಾಟದ ಕತೆಯನ್ನು ಒಳಗೊಂಡಿದೆ.

'ಬಾಕಿ' ಕಾದಂಬರಿಯು ಪ್ರಾರಂಭವಾಗುವುದೆ, ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಮತ್ತು ಮೌಢ್ಯತೆಯನ್ನು ಪ್ರಶ್ನಿಸುವುದರ ಮೂಲಕ. ನಮ್ಮ ಸಮಾಜದಲ್ಲಿ ಪುರುಷರು ಸ್ತ್ರೀಯರನ್ನು ನಿಯಂತ್ರಿಸುತ್ತಲೇ ಬಂದಿದ್ದಾರೆ. ಯಾವ ಜಾತಿಯಲ್ಲಾಗಲಿ, ಸ್ತ್ರೀಯರು ಒಂದಲ್ಲಾ ಒಂದು ರೀತಿಯಲ್ಲಿ ಶೋಷಣೆಯನ್ನು ಅನುಭವಿಸುತ್ತಲೇ ಬಂದಿದ್ದಾರೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಮಾತ್ರ ಸೀಮಿತವಾದ ಸಂಪ್ರದಾಯ, ಆಚಾರ, ಪದ್ಧತಿ, ನಿಯಮಾವಳಿಗಳಿದ್ದರೆ, ಪುರುಷನಿಗೆ ಬೇರೆ ನಿಯಮಗಳು. ಈ ಎಲ್ಲಾ ನಿಯಮಗಳು ಪುರುಷನ ತಪ್ಪಿಗೆ ಕ್ಷಮೆಯ ರಿಯಾಯಿತಿಯನ್ನು ನೀಡಿವೆ. ನಮ್ಮ ಸಮಾಜದಲ್ಲಿ ಹಲವು ಮೌಢ್ಯತೆಗಳು ದೇವರ ಹೆಸರಿನಲ್ಲಿ, ಸಂಪ್ರದಾಯದ ಹೆಸರಿನಲ್ಲಿ ನಡೆಯುತ್ತಲೇ ಬಂದಿವೆ. ಬಾಲ್ಯವಿವಾಹ,

* ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ–೫೮೫೩೧೧. ಮೊ: ೯೦೫೫೯೧೬೫೭೧

ಸತಿಪದ್ಧತಿ, ಬುರ್ಖಾಪದ್ಧತಿ, ಜೋಗಣಿ ಬಿಡುವುದು, ದೇವರಿಗೆ ಬೆತ್ತಲ ಸೇವೆ, ತುಂಬಿದ ಬಸುರಿಯನ್ನು ಹಾರ ಕೊಡುವ ಪದ್ಧತಿ ಹೀಗೆ ಹತ್ತು ಹಲವಾರು ಪದ್ಧತಿಗಳಲ್ಲಿ ಬಲಿಯಾದವಳು ಸ್ತ್ರೀಯೆ.

ಇಲ್ಲಿ ಇಂತಹ ಕೆಲವು ಮೌಢ್ಯಪದ್ಧತಿಗಳ ವಿರುದ್ಧ ಪ್ರಶ್ನೆ ಎತ್ತಲಾಗಿದೆ. ಕಾದಂಬರಿಯಲ್ಲಿ ಮೊದಲಿಗೆ ಶಾಂತಾ ಎಂಬ ಹತ್ತು ವರ್ಷದ ಹುಡುಗಿ ಹಾರ ಕೊಡುವ ಪದ್ಧತಿಯನ್ನು ಪ್ರಶ್ನೆ ಮಾಡುತ್ತಾಳೆ ಮತ್ತು ಕೆಳಜಾತಿಯ ಸ್ತ್ರೀಯರು ದೇವರ ಹೆಸರಿನಲ್ಲಿ, ದೇವರಿಗೆ ಬೆತ್ತಲೆ ಸೇವೆಯನ್ನು ಕೈಗೊಳ್ಳುವ ಕುರಿತು ಚಿಂತಿಸುತ್ತಾಳೆ. ಶಾಂತಿಗೆ ತನ್ನ ತಾತ ಹಾರಕೊಡುವ ಕತೆಯನ್ನು ಹೇಳಿದಾಗ “ಅಯ್ಯೋ, ಅಲ್ಲ ಪಾಪ ಮುತ್ಯಾ ಹೆಣ್ಣುಮಕ್ಕಳಿಗೆ ಯಾಕ ಹಾರ ಬೇಕಂತ ಹೇಳ್ತಿ ಅಂತಿನಿ, ಗಂಡಸರ ಹಾರ ನಡಿತಿರಲಿಲ್ಲೇನು ಅದಕ್ಕ?” ಎಂದು ಪ್ರಶ್ನಿಸುತ್ತಾಳೆ. ಮತ್ತು ಕೆಳಜಾತಿಯ ಸ್ತ್ರೀಯರು ದೇವರ ಹೆಸರಿನಲ್ಲಿ ನಡೆಯುವ ಬೆತ್ತಲೆಸೇವೆಯನ್ನು ನೋಡಿ ಶಾಂತಾ ಬಾಲ್ಯದಲ್ಲೇ ದಂಗಾಗುತ್ತಾಳೆ. ಇದು ಎಂತಹ ಪದ್ಧತಿ ಎಲ್ಲಾ ಜನರೆದುರೇ ಹೀಗೆ ಮಾಡುವುದು ಸರಿಯೇ? ಅದು ಕೆಳಜಾತಿಯಲ್ಲಿಯೆ ಯಾಕೆ? ಇಂತಹ ಪದ್ಧತಿಗಳು ಆಚರಣೆಯಲ್ಲಿವೆ ಎಂದು ಪ್ರಶ್ನೆ ಹಾಕಿಕೊಳ್ಳುತ್ತಾಳೆ. “ದೇವರ ಹೆಸರಿನ ಮೇಲೆ ಹಾದರ ಮಾಡುವುದು, ಮೈಮೇಲೆ ಒಂದೇ ಒಂದು ನೂಲಿನೆಳೆಯೂ ಇಲ್ಲದ ಪೂರ ಹುಟ್ಟುಡುಗೆಯಲ್ಲೇ ಬೆತ್ತಲೆ ಸೇವೆ ಮಾಡುವುದು-ಹೀಗೆ ಬರಿ ಕಾಮಕ್ಕೆ ತಳಕು ಹಾಕಿಕೊಂಡ ಹರಕೆಗಳು, ರೀತಿರಿವಾಜುಗಳು ರೂಢಿನಂಬಿಕೆಗಳು....ಅದೂ ಯಾವ ಕಾಲದಲ್ಲಿ ಹ್ಯಾಂಗ ಶುರುವಾದವೋ, ಯಾರು ಶುರು ಮಾಡಿದರೊ ಯಾರಿಗೂ ನಿಖರವಾಗಿ ಪತ್ತೆಹತ್ತಿಲ್ಲ. ಅದೂ ಬರೀ ಹೊಲೆಮಾದಿಗರಂಥ ನಿರ್ಗತಿಕ ಅಸ್ಪೃರ್ಶಯ ಮಂದಿಯಲ್ಲೇ ಯಾಕೆ ಇಂಥ ಪದ್ಧತಿಗಳು ಹುಟ್ಟಿಕೊಂಡು, ತಲೆ ತಲೆಮಾರುಗಳಟ್ಟಲೆ ಚಾಲ್ತಿಯಲ್ಲಿದ್ದಾವೆ? ಎಂಬುದು ನಿಗೂಢ ಎಂದು ಕಾದಂಬರಿಗಾರ್ತಿ ಹೇಳುತ್ತಾರೆ (ಪು. ೧೮೩). ಸ್ತ್ರೀಯರನ್ನು ಬಳಸಿಕೊಳ್ಳುವ ಸಲುವಾಗಿ ಅದು ಕೆಳಜಾತಿ ಮುಗ್ಧಜರನ್ನು ಮಾತ್ರ ಬಳಸಿಕೊಳ್ಳಲಾಗಿದೆ, ಅದೂ ದೇವರ ಹೆಸರಿನಲ್ಲೆ. ಇದರ ಹಿಂದೆ ಪುರುಷರ ಕೈವಾಡ ಇರುವುದಂತು ಖಚಿತ. ಹೆಸರಿಡುವ ಪದ್ಧತಿಯಲ್ಲಿಯೂ ಕೂಡ ಜಾತಿ ಕೆಲಸ ಮಾಡುತ್ತದೆ. ಇಂತಹ ಹಲವು ಮೌಢ್ಯತೆಗಳಿಗೆ ಬಲಿಯಾದವರು ಸ್ತ್ರೀಯರೆ. ಒಂದಲ್ಲ ಒಂದು ಕಾರಣದಿಂದ ಸ್ತ್ರೀಯರು ಸಮಸ್ಯೆಯನ್ನು ಅನುಭವಿಸುತ್ತಲೇ ಇರುವರು. ವರದಕ್ಷಿಣೆ ಕಿರುಕುಳ, ಅತ್ಯಾಚಾರ, ಲೈಂಗಿಕ ಕಿರುಕುಳ, ಮಾನಸಿಕ ನೆಮ್ಮದಿಯನ್ನು ಕಳೆದುಕೊಳ್ಳುವ ಹತ್ತು ಹಲವು ಸಮಸ್ಯೆಗಳು ಇನ್ನೂ ಎದುರಿಸುತ್ತಲೇ ಇರುವಳು. ಇಲ್ಲೆಲ್ಲ ಸ್ತ್ರೀಯರು ಪುರುಷರನ್ನು ದೂಷಿಸುವುದು, ಪುರುಷರು ಸ್ತ್ರೀಯರನ್ನು ದೂಷಿಸುವುದು ಬಿಟ್ಟು, ಸ್ತ್ರೀ ಪುರುಷರಿಬ್ಬರೂ ಸೇರಿ, ಯಾವ ಜಾತಿ, ಧರ್ಮಕ್ಕೆ ಸೇರದೆ, ಬಡವ-ಶ್ರೀಮಂತನೆಂಬ ಬೇಧಭಾವ ಮಾಡದೆ, ಲಿಂಗತಾರತಮ್ಯವನ್ನು ಮಾಡದೆ, ಮಾನವೀಯತೆಯ ನೆಲೆಯಲ್ಲಿ ಚಿಂತಿಸಿ, ಸಮಾನತೆಗೆ ಬೇಕಾದ ನಿರ್ಣಯಗಳನ್ನು ತೆಗೆದುಕೊಳ್ಳಬೇಕು. ಆಗ ಮಾತ್ರ ಸಮಾಜದ ಸಮಸ್ಯೆಗಳು ಕಡಿಮೆಯಾಗಲು ಸಾಧ್ಯವಾಗುತ್ತವೆ. ಇಂತಹ ಹಲವು ಸಮಸ್ಯೆಗಳ ಮತ್ತು ಸ್ತ್ರೀ ತುಳಿತವನ್ನು ಕುರಿತು ಪ್ರಶ್ನಿಸುತ್ತದೆ ಈ ಕಾದಂಬರಿ.

ಇಂತಹ ಹಲವು ನೋವನ್ನು ಅನುಭವಿಸಿದ ಶಾಂತಿಯೆ ಈ ಕಾದಂಬರಿಯ ನಾಯಕಿ. ಶಾಂತಾಳಾ ಸುತ್ತಲೆ ಈ ಕಾದಂಬರಿ ಹೆಣೆದುಕೊಂಡಿದೆ. ಇವಳು ತನ್ನ ಬಾಲ್ಯದಿಂದ ಮುಪ್ಪಿನವರೆಗೂ ಕಂಡುಂಡ ಅನುಭವಗಳನ್ನು ಈ ಕಾದಂಬರಿ ಒಳಗೊಂಡಿದೆ. ಶಾಂತಾಳನ್ನು ನಾಯಕಿ ಎಂದು ಕರೆಯುವುದಕ್ಕಿಂತಲು ಈ ಕಾದಂಬರಿಯ ದುರಂತ ನಾಯಕಿಯೆಂದು ಕರೆಯುವುದೆ ಹೆಚ್ಚು ಸಮಂಜಸವೆಂದು ನನಗನಿಸುತ್ತದೆ. ಏಕೆಂದರೆ ಬದುಕಿನುದ್ದಕ್ಕು ಪ್ರೀತಿ ಬಯಸಿದ ಶಾಂತಾಳಿಗೆ ಕೊನೆಯವರೆಗೂ ಪ್ರೀತಿಯೆ ದೊರಕುವುದಿಲ್ಲ. ಶಾಂತಾಳ ಕುಟುಂಬವು ಸಂಬಂಧಗಳ ದೊಡ್ಡ ಜಾಲವೆ ಹೊಂದಿದೆ. ಶಾಂತಿಯ ಅಜ್ಜ-ಅಜ್ಜಿಯರಾದ ಭೀಮಳ್ಳಿಯ ಶಿವಪ್ಪ-ಸಿದ್ಧಮ್ಮಳ ಪ್ರೀತಿ, ಇವಳ ಮಾವನಾದ ತಿಪ್ಪಣ್ಣನ ಮಾನವೀಯ ವ್ಯಕ್ತಿತ್ವ, ಕಾಶಣ್ಣ ಮತ್ತು ನೀಲಮ್ಮ ಗಂಡ ಹೆಂಡತಿಯರ ನಡುವಿನ ಪ್ರೀತಿ, ಶಾಂತಾಳ ಇವರೊಂದಿಗಿನ ಒಡನಾಟ, ಸಾಂತಪ್ಪ-ಶರಣಮ್ಮ ನಡುವಿನ ಪ್ರೀತಿ ಮತ್ತು ಶ್ರಮಜೀವನ, ಮಲ್ಲಪ್ಪ ಜಮೆದಾರನ ಮಾನವೀಯ ವ್ಯಕ್ತಿತ್ವ, ಗಂಡ ಸತ್ತ ತಿಪ್ಪವ್ವಳ ಸ್ವಭಾವ, ಶಾಂತಾ ಕಲಿತ ಶಾಲಾಪರಿಸರ, ಆಕೆ ಹುದ್ದೆಗೆ ಸೇರಿದ ನಂತರ ಆದ ಅನುಭವ, ಅವಳ ವೈವಾಹಿಕ ಜೀವನ, ಹೀಗೆ ಸಮಾಜದಲ್ಲಾದ ಅನುಭವಗಳ ಚಿತ್ರಣವನ್ನು ಈ ಕಾದಂಬರಿಯು ಒಳಗೊಂಡಿದೆ.

ಶಾಂತಾ ತಳವಾರ ಜಾತಿಗೆ ಸೇರಿದ ಬಡಕುಟುಂಬದವಳು. ಇವಳ ತಂದೆತಾಯಿ ಕೂಲಿ ಕಾರ್ಮಿಕರು. ಆದರೆ ಎಷ್ಟೇ ಬಡತನವಿದ್ದರು ತಂದೆ ತಾಯಿ ಬಂಧು-ಬಳಗದವರ ಪ್ರೀತಿಯಲ್ಲಿಯೇ ಶಾಂತಾ ತನ್ನ ಬಾಲ್ಯವನ್ನು ಕಳೆದವಳು. ಎಲ್ಲರ ಪ್ರೀತಿಯಿಂದ ತಾನು ಬಡವಳೆಂಬ ನೋವನ್ನು ಎಂದೂ ಅನುಭವಿಸಿರಲಿಲ್ಲ ಶಾಂತಾ. ಶಾಂತಾಳ ತಂದೆ ತಾಯಿಯರಾದ ಸಾಂತಪ್ಪ ಶಾಣಮ್ಮ ತಮ್ಮ ಮಕ್ಕಳನ್ನು ಬೆಳೆಸಲು ಬಹಳ ಕಷ್ಟಪಟ್ಟವರು. ಮಕ್ಕಳಿಗೆ ಪ್ರೀತಿಯ ಕೈತುತ್ತು ನೀಡಿ ಬೆಳೆಸಿದವರು. ಶಾಂತಾಳ ಆಸೆಯಂತೆ ಸಮಾಜವನ್ನು ಲೆಕ್ಕಿಸದೆ ಅವಳಿಗೆ ಶಿಕ್ಷಣ ಕೊಡಿಸಲು ಮುಂದಾದವರು. ಜಾತಿ ಪ್ರಶ್ನೆ ಬಂದಾಗ ಕೆಳಜಾತಿ ಸ್ತ್ರೀಪುರುಷರಿಬ್ಬರೂ ಶಿಕ್ಷಣದಿಂದ ವಂಚಿತರಾದವರೆ. ಆದರೆ ಕೆಳಜಾತಿ ಸ್ತ್ರೀಯರು ಅಕ್ಷರ ಕಲಿಯುವ ಅವಕಾಶ ದೊರಕುವುದಕ್ಕೆ ಹಲವು ಕಾಲಗಳೇ ಬೇಕಾಯಿತು. ಶಾಂತ ಹುಟ್ಟಿದ ಕಾಲದಲ್ಲಿ ಕೆಳಜಾತಿಯ ಸ್ತ್ರೀಯರಿಗೆ ಸಾಮಾಜಿಕವಾಗಿ ಕಲಿಯುವ ಅವಕಾಶವಿದ್ದಿದ್ದಿಲ್ಲ. ಆದರೆ ಶಾಂತಾಳ ತಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಕೆಲವು ದಿನ ಜೈಲಿನಲ್ಲಿ ಇದ್ದುಬಂದವನು; ಗಾಂಧೀಜಿಯ ಪ್ರಭಾವಕ್ಕೆ ಒಳಗಾದವನು. ಇದರಿಂದ ತನ್ನ ಮಗಳಿಗೆ ಶಾಲೆಗೆ ಕಳುಹಿಸಲು ಮುಂದಾದಾಗ ಇವನ ಹೆಂಡತಿ ಶಾಣಮ್ಮ ಹೀಗೆ ಹೇಳುತ್ತಾಳೆ. "ನಮ್ಮಂದ್ಯಾಗ ಗಂಡುಮಕ್ಕಳೆ ಸಾಲಿ ಕಲ್ಯಾಂಗಿಲ್ಲ, ಹಿಂತದರಾಗ ಹೆಣ್ಣಮಗಳಿಗಿ ಸಾಲಿ ಕಲಿಸ್ತೇನು ನೀನು? ನೋಡಿದವ್ರು ನಗ್ತಾರ ಆಟೆ." "ಅವರೆಲ್ಲಾ ಹಾರ್ರ ಮಂದಿ ಮಕ್ಕುಳು. ದೊಡ್ಡಜಾತಿ ಉತ್ತಮರ ಮಕ್ಕಳು. ಅವರ ಮಂದ್ಯಾಗ ಹೆಣ್ಣುಮಕ್ಕಳು ಸಾಲಿ ಕಲ್ಯಾದು ಪದ್ಧತಿ ಅದ...ಆದರ ನಮ್ಮಂದ್ಯಾಗ ಹಿಂದಕ್ಕ ಯಾರರೆ ಸಾಲಿ ಕಲ್ತಿರಾದು ಅದಾಯೇನು?" "ಸಾಕು ಸುಮ್ಕಿರು ನೀ....ಆ ಪಿತಾಜಿಯಂಥವರು ನಿನ್ ತೆಲಿಕೆಡಸ್ಯಾರ ಕೋಡಿ. ಅವರ ಜೋಡಿ ಸತ್ಯಾಗ್ರಹ, ಚಳುವಳಿ

ಅಂತ ಜೈಲಿನ್ಯಾಗಬಿದ್ದು ಬಂದು ನೋಡು....ಆವಾಗಿನಿಂದ ನಿನ್ ಮನಸಿನ ಮಿಜಾಜೆ ಬರೋಬ್ಬರಿಯಿಲ್ಲ. ನಿ ಮೊದಲಿನ ಮನುಶ್ಯಾನೆ ಇಲ್ಲ. ಭಾಳಂದರೆ ಭಾಳ ಬದಲಾಗಿದ್ದೀ.." (ಪು. ೧೨೩) ಇಲ್ಲಿ ವ್ಯಕ್ತವಾದ ಶಾಂತಾಳ ತಾಯಿಯ ಮಾತನ್ನು ಗಮನಿಸಿದಾಗ ಹೇಗೆ ಶಾಂತಳಿಗೆ ಶಿಕ್ಷಣ ಕೊಡಿಸುವ ಸಂದರ್ಭದಲ್ಲಿ ಯಾವ ರೀತಿಯ ಸಾಮಾಜಿಕ ವ್ಯವಸ್ಥೆ ಇತ್ತೆಂಬುದು ತಾನಾಗಿಯೇ ಅರ್ಥವಾಗುತ್ತದೆ. ಇಂತ ಸ್ಥಿತಿಯಲ್ಲಿಯು ಅತ್ತು ಕರೆದು ತಾನು ಶಾಲೆ ಕಲೆತು ದೊಡ್ಡ ಶಿಕ್ಷಕಿಯಾಗಬೇಕೆಂಬ ಹಂಬಲ ಹೊಂದಿದ ಶಾಂತಾ ಮುಂದೆ ತನ್ನ ಶಿಕ್ಷಣಕ್ಕೆ ಬಡತನವು ಅಡ್ಡಿಬಂದಾಗ ತಾನೆ ದುಡಿದು ತನ್ನ ಕಲಿಕೆ ಮುಂದುವರಿಸಿ ಒಳ್ಳೆಯ ಶಿಕ್ಷಕಿಯಾಗಿ, ಲೇಖಕಿಯಾಗಿ ಹಲವನ್ನು ಪಡೆಯುತ್ತಾಳೆ. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿಕೊಂಡು ಹೈದ್ರಾಬಾದ ಕರ್ನಾಟಕಕ್ಕೆ ಕೀರ್ತಿ ತಂದ ಬರಹಗಾರತಿ ಇವಳು. ಇಷ್ಟೆಲ್ಲ ಹೆಸರಾದರು, ಶಾಂತಾಳ ವೈಯಕ್ತಿಕ ಬದುಕು ಮಾತ್ರ ಬಹಳ ದುರಂತ.

ಶಾಂತಾ ಎಷ್ಟೆಲ್ಲಾ ಹೆಸರುವಾಸಿಯಾದರು ಅವಳ ಬದುಕಿಗೆ ಮಾತ್ರ ನೆಮ್ಮದಿಯಿಲ್ಲ. ಶಾಂತಾ ತನ್ನ ತಂದೆ ತಾಯಿ ಇಚ್ಛೆಯಂತೆ ವಿವಾಹವಾಗುತ್ತಾಳೆ. ಆದರೆ ಶಾಂತಾಳ ಗಂಡು ಲಂಪಟವ್ಯಕ್ತಿಯಾಗಿರುತ್ತಾನೆ. ದುಡಿಯುವುದಂತು ಇಲ್ಲ, ಶಾಂತಾಳು ದುಡಿದ ಹಣವನ್ನು ಕೂಡ ಕುಡಿದು ಹಾಳಮಾಡ ತೊಡಗುತ್ತಾನೆ. ಇದನ್ನು ತಡೆಯಲು ಹೋದ ಶಾಂತಾಳ ಮೇಲೆ ಕೈಮಾಡುತ್ತಾನೆ. ಇದರಿಂದ ಬೇಸತ್ತ ಶಾಂತಿ ತನ್ನ ಗಂಡನಿಗೆ ವಿವಾಹ ವಿಚ್ಛೇದನವನ್ನು ಕೊಟ್ಟು ಬೇರೆಯಾಗುತ್ತಾಳೆ. ಮುಂದೆ ಶ್ರೀಕಾಂತೇಗೌಡ ಎಂಬ ವ್ಯಕ್ತಿಯನ್ನು ವಿವಾಹವಾಗುತ್ತಾಳೆ. ಈ ವಿವಾಹವೂ ಕೂಡ ಅವಳಿಗೆ ನರಕಯಾತನೆಯಾಗುತ್ತದೆ. ಏಕೆಂದರೆ ಇವನಿಗೆ ಮೊದಲೇ ವಿವಾಹವಾಗಿರುತ್ತದೆ, ಆದರು ಶಾಂತಾಳನ್ನು ಪ್ರೀತಿಸಿ ಒಳ್ಳೆಯ ಬಾಳನ್ನು ಕೊಡುವೆನೆಂದು ವಿವಾಹ ಮಾಡಿಕೊಳ್ಳಲು ಮುಂದಾಗುತ್ತಾನೆ. ಮತ್ತು ತನ್ನ ಮೊದಲನೇ ಹೆಂಡತಿ ಒಪ್ಪಿಗೆ ಪಡೆದಿರುವೆನೆಂದು ಸುಳ್ಳು ಹೇಳಿರುತ್ತಾನೆ. ಇವನ ಮಾತನ್ನು ನಂಬಿದ ಶಾಂತಾಳು, ಒಂಟಿ ಹೆಣ್ಣು ಸಮಾಜದಲ್ಲಿ ಒಂಟಿಯಾಗಿ ಜೀವನ ಮಾಡುವುದು ಸುಲಭವಲ್ಲವೆಂದು ಯೋಚಿಸಿ, ತನ್ನ ಬದುಕಿಗೆ ಆಸರೆಯಾಗಿ ನಿಲ್ಲುತ್ತಾನೆ ಎಂದು ತಿಳಿದುಕೊಂಡು ಎರಡನೇ ವಿವಾಹವಾಗುತ್ತಾಳೆ. ಆದರೆ ಶ್ರೀಕಾಂತ ತಾನು ಕೊಟ್ಟ ಮಾತಿನಂತೆ ನಡೆದುಕೊಳ್ಳುವುದಿಲ್ಲ. ಅನೇಕ ಆಸೆಗಳನ್ನು, ಕನಸುಗಳನ್ನು ಕಂಡ ಶಾಂತಾಳಿಗೆ ಈ ವಿವಾಹವು ಕೂಡಾ ನಿರಾಸೆಯನ್ನುಂಟು ಮಾಡುತ್ತದೆ. ಶಾಂತ ಇವನಿಂದ ಒಂದು ಹೆಣ್ಣು ಮತ್ತು ಒಂದು ಗಂಡು ಮಗುವನ್ನು ಪಡೆಯುತ್ತಾಳೆ. ಗಂಡನಿಂದ ಸಿಗದ ಪ್ರೀತಿಯನ್ನು ಮಕ್ಕಳಲ್ಲಿ ಪಡೆಯುವ ಕನಸನ್ನು ಹೊತ್ತು ಮಕ್ಕಳನ್ನು ಬೆಳೆಸಲು ತಾನೆ ಸ್ವತಃ ಹೊಣೆ ಹೊತ್ತು ನಿಲ್ಲುತ್ತಾಳೆ. ಈಕೆಯ ಗಂಡನಂತು ಯಾವ ಜವಾಬ್ದಾರಿಯನ್ನೂ ಸಂಸಾರದ ಯಾವ ಹೊಣೆಯನ್ನೂ ಹೊರುವುದಿಲ್ಲ. ಬದಲಿಗೆ ಶಾಂತಾಳು ತನ್ನ ಮಕ್ಕಳಿಗಾಗಿ ಕೂಡಿಟ್ಟ ಹಣವನ್ನೂ ಸಹ ಕಸಿದುಕೊಳ್ಳುತ್ತಾನೆ.

ಇಷ್ಟಾದರು ಶಾಂತಾ ಎದೆಗುಂದದೆ, ಮಕ್ಕಳಿಗಾಗಿ ದುಡಿಯುತ್ತಾಳೆ. ಆದರೆ ಮುಂದೆ ಶಾಂತಾಳಿಗೆ ಮಕ್ಕಳಿಂದಲೂ ಕೂಡ ನಿರಾಸೆಯಾಗುತ್ತದೆ. ತನ್ನ ಮುಂದಿನ ಬದುಕಿಗೆ ಆಸರೆಯಾಗಿ ನಿಲ್ಲುತ್ತಾರೆಂದು ಭಾವಿಸಿದ ಮಕ್ಕಳು ಕೂಡ ಇವಳಿಂದ ದೂರವಿರಲು ಬಯಸಿ ಶಾಂತಾಳ ಜೊತೆಯಿರದೆ ಬೇರೆಡೆಗೆ ಹೋಗಿ ನೆಲೆಸುತ್ತಾರೆ. ಇದು ಕಾದಂಬರಿಯಲ್ಲಿನ ದುರಂತದ ಎಳೆಗಳನ್ನು ಕಟ್ಟಿದೆ.

ಶಾಂತಾಳು ತನ್ನ ಕತೆ ಕಾದಂಬರಿಗಳಲ್ಲಿ ಯಾವುದಕ್ಕು ಹೆದರದೆ, ಸ್ತ್ರೀ ಪುರುಷರ ಲೈಂಗಿಕ ವಿಷಯಗಳನ್ನು ನೇರವಾಗಿ ಕುರಿತು ಬರೆಯುತ್ತಿದ್ದಳು. ಇದನ್ನು ಓದಿದ ಕೆಲವರು ಇವಳ ತಾಯಿಗೆ "ನಿನ ಮಗಳು ಹಲ್ಕಟ ಮಾತುಗಳೆಲ್ಲ ಬರೀತಾಳ ತನ್ನ ಕತಿ ಕಾದಂಬರಿಯೊಳಗ, ಕೋಡಿ ನಿ ಅರೆ ಒಂದೀಟು ಬುದ್ಧಿ ಹೇಳಬಾರದಾ ಅಕಿಗಿ ಶಾಣಮ್ಮ" ಎಂದು ದೂರನ್ನು ಹೇಳಿ ಮಗಳಿಗೆ ತಿಳುವಳಿಕೆ ಹೇಳೆಂದು ಹೇಳುತ್ತಾರೆ. ಆಗ ಶಾಂತಾಳ ತಾಯಿ ಶಾಣಮ್ಮ "ಗೋಳಿನ ಕತಿ ಬರೀಬ್ಯಾಡ ಮಗಾ....ಹಾಗೆಲ್ಲ ಬರೆದರ ಬರ್ದವರ ಬದುಕುನೂ ಗೋಳೆ ಆಗ್ತದಂತ ಕೋಡಿ..." (ಪು. ೫೭೬) ಎಂದು ಹೇಳಿದ ಮಾತು ಶಾಂತಾಳಿಗೆ ತನ್ನ ಮಕ್ಕಳು ದೂರವಾದಾಗ ತಾಯಿಯ ಮಾತಿನಲ್ಲಿ ನಿಜವಿದೆ ಎಂದು ಚಿಂತೆಗೆ ಒಳಗಾಗುತ್ತಾಳೆ. ಲೇಖಕಿಯರಿಗೆ, ಬರವಣಿಗೆಯಿಂದ ಬರುವ ತೊಂದರೆಗಳನ್ನು ಇಲ್ಲಿ ಗಮನಿಸಬೇಕು. ಪುರುಷ ಪ್ರಧಾನ ಸಮಾಜದಿಂದ ರೂಪಿಸಲ್ಪಟ್ಟ ನಿಯಮಗಳನ್ನು ಮೀರಿದ ಸ್ತ್ರೀಯರಿಗೆ ಸಮಾಜದಲ್ಲಿ ಮನ್ನಣೆ, ಗೌರವ ಸಿಗುವುದಿಲ್ಲ. ಅಲ್ಲದೆ ನಮ್ಮ ಸಮಾಜದಲ್ಲಿ ಮಹಿಳೆಯರು ತಮ್ಮ ನ್ಯಾಯದ ಬಗ್ಗೆ ಪ್ರಶ್ನೆ ಮಾಡಿದರೆ, ಅವಳ ನಡತೆಯನ್ನೆ ಶಂಕಿಸಲಾಗುತ್ತದೆ. ಏಕೆಂದರೆ ನಮ್ಮ ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗೆ ಬದುಕಿ ಬಾಳಲು ಹಲವು ನಿಯಮಗಳಿವೆ, ಬೆಳಗ್ಗೆ ಏಳುವುದರಿಂದ ಹಿಡಿದು ಮಲಗುವವರೆಗೂ ಈ ನಿಯಮಗಳ ಹೊಣೆ ಹೊತ್ತ ಬದುಕುವ ಅನಿವಾರ್ಯತೆ ಸ್ತ್ರೀಯರಿಗಿದೆ. ಅವಳ ಉಡುಗೆ ತೊಡುಗೆ ಹೀಗೇ ಇರಬೇಕೆಂಬ ನಿಯಮ, ಅವಳು ಜೋರಾಗಿ ನಗುವಂತಿಲ್ಲ, ಪುರುಷರ ಜೊತೆ ಕೂಡುವಂತಿಲ್ಲ ಮತ್ತು ಅವರನ್ನು ಮುಟ್ಟಿ ಮಾತನಾಡುವಂತಿಲ್ಲ, ಪ್ರೀತಿ ಮಾಡಿದ ಮಾತ್ರಕ್ಕೆ ಸ್ತ್ರೀ ನಡತೆಗೆಟ್ಟವಳಾಗುತ್ತಾಳೆ, ಇಂತಹ ಪರಿಸ್ಥಿತಿಯಲ್ಲಿ ಮಹಿಳಾ ಬರಹಗಾರರು ಸ್ತ್ರೀ ಸಮಸ್ಯೆಗಳನ್ನೋ, ಲೈಂಗಿಕ ವಿಷಯಗಳನ್ನೋ ಕುರಿತು ಬರೆದರೆ ಸುಮ್ಮನಿರುತ್ತದೆಯೆ ಈ ಸಮಾಜ?. ಶಾಂತಾಳು ಕೂಡ ತನ್ನ ಬರವಣಿಗೆಯಿಂದ ಹಲವು ಸಮಸ್ಯೆಗಳನ್ನು ಅನುಭವಿಸುವಂತಾಗುತ್ತದೆ. ಇದರಿಂದ ತನ್ನ ಹೆತ್ತ ಮಕ್ಕಳೆ ದೂರಾಗುವಂತಾಗುತ್ತದೆ.

ಶಾಂತಾಳಿಗೆ ಬರವಣಿಗೆಯಂದ ಮಾತ್ರವಲ್ಲ ಸರಕಾರಿ ನೌಕರಿಯಲ್ಲಿದ್ದಾಗ ಅವಳ ಆಫೀಸಿನಲ್ಲಿದ್ದ ಗಂಡಸರಿಂದಲೂ ಇವಳಿಗೆ ಹಲವು ಬಗೆಯ ಕಷ್ಟಗಳು ಎದುರಾಗುತ್ತವೆ. "ಕೆಲವರ ಆಸೆಗಣ್ಣು, ಕೆಲವರ ವ್ಯಂಗ್ಯಮಾತು, ಕೆಲವರ ಮೂಕ ಇಶಾರೆಗಳು, ಆಗಾಗ ಶಾಂತಿಗೆ ಚುಚ್ಚುತ್ತಿದ್ದುವಾದರೂ ಕಛೇರಿಯ ಮೇಲಧಿಕಾರಿಗಳು ತುಂಬ ಬಿಗಿಯಾಗಿದ್ದರಿಂದ ಯಾರ ಆಟವು ನಡೆಯುತ್ತಿರಲಿಲ್ಲ" (ಪು-೨೪೭). ಇಂಥ ಹತ್ತು

ಹಲವು ಸಮಸ್ಯೆಗಳನ್ನು ಶಾಂತಾಳು ತನ್ನ ಬದುಕಿನಲ್ಲಿ ಅನುಭವಿಸಿ ನೋವನುಂಡು ಸಹಿಸಿಕೊಂಡು ಬದುಕುತ್ತಿರುವುದು ತನ್ನ ಮಕ್ಕಳಿಗಾಗಿ.

ಈ ಕಾದಂಬರಿಯು ಕಲಬುರ್ಗಿ ಜಿಲ್ಲೆಯ ಭಾಷೆಯನ್ನು ಅನಾವರಣಗೊಳಿಸಿದೆ. ಅಲ್ಲದೆ ಶಾಂತಾಳ ಬದುಕಿನ ಜೊತೆಗೆ ಈ ಪ್ರದೇಶದ ಹಬ್ಬಹರಿದಿನ, ಶರಣಬಸವೇಶ್ವರ ಜಾತ್ರೆ, ಉತ್ಸವ, ಇಂತಹ ಕೆಲವು ಈ ಭಾಗದ ಸಂಸ್ಕೃತಿಯ ಚಿತ್ರಣವನ್ನು ಒಳಗೊಂಡಿದೆ. ಚುಂಚುರ ಮಾಪುರ ತಾಯಿ ದೇವರ ಹುಟ್ಟಿನ ಕತೆ, ಕಲಬುರ್ಗಿಯ ಬಂದೆನವಾಜ ಮತ್ತು ಸಾವಳಗಿಯ ಶಿವಲಿಂಗೇಶ್ವರ ನಡುವಿನ ಸಂಬಂಧದಿಂದ ಹಿಂದು-ಮುಸ್ಲಿಮ್ ಜಾತಿಯ ಜನರ ನಡುವಿನ ಸೌಹಾರ್ದತೆ ಈ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಅಲ್ಲದೆ ಮೇಲ್ಜಾತಿಯವರ ವಿವಾಹ ಪದ್ಧತಿ ಮತ್ತು ಕೆಳಜಾತಿಯ ವಿವಾಹ ಪದ್ಧತಿ ಹೇಗಿತ್ತು ಎಂಬುದನ್ನು ತಿಳಿಸುತ್ತದೆ. ಮೇಲ್ಜಾತಿಯ ಹೆಣ್ಣುಮಗಳ ಗಂಡ ತೀರಿಹೋದರೆ ಮರುವಿವಾಹಕ್ಕೆ ಅವಕಾಶವಿಲ್ಲದಿರುವುದು, ಅವಳು ಎಷ್ಟೆ ಚಿಕ್ಕವಳಾಗಿರಲಿ ತಲೆಬೋಳಿಸಿಕೊಂಡು ಸಾಯುವವರೆಗೆ ಹಾಗೇ ಬದುಕಬೇಕಾಗಿತ್ತು. ಆದರೆ ಕೆಳಜಾತಿಯವರಲ್ಲಿ ಈ ರೀತಿಯ ಪದ್ಧತಿಯಿಲ್ಲ. ಇಲ್ಲಿ ಕೆಳಜಾತಿಯ ಸ್ತ್ರೀಯು ವಿಧವೆಯಾದರೆ ಮರುಮದುವೆಗೆ ಅವಕಾಶವಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಕಾದಂಬರಿಯು ಶಾಂತಾಳಾ ಬದುಕಿನೊಂದಿಗೆ ಕಲಬುರ್ಗಿ ಜಿಲ್ಲೆಯ ಸಾಮಾಜಿಕ ಪರಿಸರದ ಪರಿಚಯವನ್ನು ಮಾಡಿಸುತ್ತದೆ. ಹಾಗೂ ಸಮಗ್ರ ಸ್ತ್ರೀವಾದದ ನೋವು, ಹತಾಶೆ, ಕಷ್ಟ-ಕಾರ್ಪಣ್ಯ ಮುಂತಾದವುಗಳ ಸತ್ಯ ಮತ್ತು ಸತ್ವ ಪರೀಕ್ಷೆಯನ್ನು ಮಾಡುತ್ತ ಸ್ತ್ರೀವಾದಿ ಆತ್ಮಕಥನದ ಆವೃತ್ತಿಯಂತೆ ಈ ಕಾದಂಬರಿ ತನ್ನ ಸಮಕಾಲೀನ ಪ್ರಸ್ತುತತೆಯನ್ನು ಸಾಧಿಸಿಕೊಂಡಿದೆ. ■

'ಕರ್ನಾಟಕ ಲೋಚನ' ಒಂದು ವಿದ್ವತ್ ಪತ್ರಿಕೆ. ಮುಖ್ಯವಾಗಿ ಸಂಶೋಧನೆ, ಪ್ರಾಚೀನ ಕನ್ನಡ ಸಾಹಿತ್ಯ, ಸಂಸ್ಕೃತಿ ವಿವೇಚನೆಗೆ ಮೀಸಲಾಗಿದೆ. ಕನ್ನಡ ನಾಡಿನ ಹಿರಿಯ-ಕಿರಿಯ ಸಾಹಿತ್ಯ ಚಿಂತಕರ ಮೂಲ ಆಶಯಕ್ಕೆ ಧಕ್ಕೆ ಬಾರದ ಹಾಗೆ ಉಪಯುಕ್ತ ಲೇಖನಗಳನ್ನು ಬರೆದುಕೊಡುವುದರ ಮೂಲಕ ಪತ್ರಿಕೆ ನಡೆಯುತ್ತಿದೆ. ಸಮಗ್ರ ಕನ್ನಡ ಸಾಹಿತ್ಯದ ಸಂವರ್ಧನೆಗೆ ಸಹಾಯಕವಾದ 'ಲೋಚನ' ಸಂಶೋಧನೆ, ಸಂಸ್ಕೃತಿ ಆಸಕ್ತರಿಗೆ ಉಪಯುಕ್ತವಾಗಿದೆ. ಇದರ ಉಪಯೋಗವನ್ನು ಕನ್ನಡ ಸಹೃದಯರು ಬಳಸಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಡಾ॥ ಪಿ.ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ